# ತವರಿಗೆ ಹಿಂದಿರುಗಿದ ಡಿ.ಟಿ.ಲೋಹಿತ್



ಅಂತರಾಳದ ಕಳಕಳಿ



೫೪ ವರ್ಷ ಹರೆಯದ ಢಣಾಯಕ ತಿರುಮಲಾರ್ಯ ಲೋಹಿತ್ ಕನ್ನಡ ಕಲಾ ಪ್ರಪಂಚಕ್ಕೆ ಹೊಸ ಹೆಸರಂತೆ ಕಂಡರೂ ಇವರು ನಮ್ಮವರೇ ! ಮೈಸೂರಿನ ಚಾಮರಾಜೇಂದ್ರ ಕಲಾ ಶಾಲೆಯಲ್ಲಿ ಅಭ್ಯಾಸ ಮಾಡಿದ ಇವರು ಇಂದೂ ಹೃದಯಕ್ಕೆ ಹತ್ತಿರವಾದ ಗುರುಗಳೆಂದು ಪರಿಗಣಿಸುವುದು ಸ್ವರ್ಗೀಯ ಶ್ರೀ ಎಫ್. ಎಂ. ಸೂಫಿ ಮತ್ತು ಹಿರಿಯ ಕಲಾಚೇತನ ಶ್ರೀ ಎಂ. ಜೆ. ಶುದ್ಧೋದನ ಅವರನ್ನು.

ಐದು ವರ್ಷ ಕೇಂದ್ರೀಯ ವಿದ್ಯಾಲಯದಲ್ಲಿ ಚಿತ್ರಕಲಾ ಶಿಕ್ಷಕರಾಗಿ ವೃತ್ತಿ. ನಂತರ ಖಾಸಗಿ ಕಂಪೆನಿಯೊಂದರಲ್ಲಿ ಆನ್ವಯಿಕ ಕಲೆ ಹಾಗೂ ವಾಣಿಜ್ಯ ಕಲಾ ಪ್ರಪಂಚದ ಅನುಭವ. ಕಳೆದ ಇಪ್ಪತ್ತು ವರ್ಷ ಹೈದರಾಬಾದಿನಲ್ಲಿ ತಾವೇ ನಿರ್ಮಿಸಿದ ಡಿಟಿಎಲ್ ಗ್ರಾಫಿಕ್ಸ್ ಎಂಬ ಹೆಸರಿನ ವಾಣಿಜ್ಯ ಕಲಾ ಸಂಸ್ಥೆಯಲ್ಲಿ ಫಲಪ್ರದ ದುಡಿಮೆ. ವಾಣಿಜ್ಯ ಕೇಂದ್ರದ ಮೆರುಗು ಹಾಗೂ ಸಾಕಷ್ಟು ಗಳಿಕೆಯ ಅವಕಾಶವನ್ನು ತೊರೆದು, ತಮ್ಮ ಮೂಲ ಪ್ರವೃತ್ತಿಯನ್ನು ಅವಲಂಬಿಸಿ ಲಲಿತಕಲೆಯ ತವರಿಗೆ, ಬೆಂಗಳೂರಿಗೆ, ಈಗ ಹಿಂದಿರುಗಿದ್ದಾರೆ. ತಮ್ಮ ಮೊದಲಿನ ಗೀಳು, ಲಲಿತಕಲೆಯ ಅಭ್ಯಾಸ ಮತ್ತು ಶಿಕ್ಷಣದಲ್ಲಿ ನಿರತರಾಗುವ ಬಯಕೆಯಿಂದ ಕಾರ್ಯೋನ್ಮುಖರಾಗಿದ್ದಾರೆ. ಕಳೆದ ವರ್ಷ ಚಿತ್ರಕಲಾ ಪರಿಷತ್ತಿನಲ್ಲಿ ತಮ್ಮ ಸ್ವಂತ ಕಲಾಕೃತಿಗಳ ಒಂದು ವಾರದ ಪ್ರದರ್ಶನ ಏರ್ಪಡಿಸಿದ್ದರು. ವೈಯಕ್ತಿಕ ಕಲಾಕೃಷಿಯ ಜತೆಗೆ, ದಿನವಿಡೀ ನಗರದ ಹಲವಾರು ಭಾಗಗಳಲ್ಲಿ ಹವ್ಯಾಸಿ ಕಲಾಸಕ್ತರಿಗೆ ವಾಸ್ತವಿಕ ಮತ್ತು ತಂಜಾವೂರು ಶೈಲಿಯ ಚಿತ್ರಕಲೆಯಲ್ಲಿ ತರಬೇತಿ ನೀಡುತ್ತಿದ್ದಾರೆ.

ವಾಣಿಜ್ಯ ಕಲೆಯಲ್ಲಿ ಬಹುಕಾಲ ತೊಡಗಿದ್ದುದರ ಪರಿಣಾಮವೋ ಏನೋ, ಇವರ ಸೃಜನಶೀಲ ಕೃತಿಗಳು, ಸಾಂಪ್ರದಾಯಿಕ, ಜನಪ್ರಿಯ, ವಾಸ್ತವಿಕ ಶೈಲಿಯನ್ನು ಮುಖ್ಯವಾಗಿ ಪ್ರತಿನಿಧಿಸುವಂತಿದ್ದರೂ, ಅನೇಕ ಅಮೂರ್ತ ಕಲಾಕೃತಿಗಳೂ ಉಂಟು - ಇವೆರಡೂ ಶೈಲಿಗಳಲ್ಲಿ ಅನಿವಾರ್ಯ ವೈರುಧ್ಯ ಇಲ್ಲವೆಂಬುದು ಇವರ ಅಭಿಪ್ರಾಯ. ತಲೆಮಾರಿನ ಪೂರ್ವ ಹಾಗೂ ಪಶ್ಚಿಮದ ಪ್ರಸಿದ್ಧ ಕಲಾವಿದರ ಮೇರುಕೃತಿಗಳ ಪ್ರತಿಕೃತಿಯ ಸೃಷ್ಟಿಯಲ್ಲಿ ಅವರು ಎತ್ತಿದ ಕೈ.

ಜಲ ಮತ್ತು ತೈಲವರ್ಣ ಎರಡೂ ಮಾಧ್ಯಮಗಳನ್ನು ಬಳಸುವ ಇವರ ಕೃತಿಗಳಲ್ಲಿ ವರ್ಣಬಂಧ, ರೇಖಾವಿನ್ಯಾಸ ಮೆಚ್ಚುವಂಥದು. ಕೆಲವೊಮ್ಮೆ ಅಚ್ಚರಿಯನ್ನುಂಟುಮಾಡಬಲ್ಲವು. ಜನಜೀವನ, ಪ್ರಕೃತಿಯ ಸೊಬಗು, ಸೂಕ್ಷ್ಮ ಸಂವೇದನೆ ಮುಂತಾದವುಗಳ ಸೃಜನಾತ್ಮಕ ಮತ್ತು ವೈವಿಧ್ಯಮಯ ಕೃತಿಗಳನ್ನು ಸೃಷ್ಟಿಸಿರುವ ಇವರ ಮೂಲ ಕಲಾಪ್ರಜ್ಞೆ ವಾಣಿಜ್ಯ ಲೋಕದ ದುಷ್ಪರಿಣಾಮಗಳಿಂದ ತನ್ನನ್ನು ತಾನು ರಕ್ಷಿಸಿಕೊಂಡು ಆರೋಗ್ಯವಾಗಿದೆ ಎಂದು ಹೇಳಬಹುದು.

*- ಕೆ. ಎಸ್. ಪಾರ್ಥಸಾರಥಿ*



'Master, I am ready'



The Wait



The Charge



Transcendental Meditation

# ಹೊಸತು

ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ಸತೀಶ್ ಯಲ್ಲಾಪುರ, ವಿಶ್ವ,*
*ವಸಂತ ಹೊಸಬೆಟ್ಟು , ಹರಿಣಿ, ಜಿ. ಎಂ. ಬೊಮ್ನಳ್ಳಿ, ರವಿಕುಮಾರ್ ಅಜ್ಜೀಪುರ*
*ಮುಖಪುಟದಲ್ಲಿ : ನಿಟ್ಟೂರು ಶ್ರೀನಿವಾಸರಾವ್*
*ವರ್ಣಚಿತ್ರ : ಕೆ. ಪಿ. ಸ್ವಾಮಿ ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ಭಾ**ರತ ಮತ್ತು ಪಾಕಿಸ್ತಾನಗಳ ನಾಯಕರು ಇನ್ನೊಮ್ಮೆ ಭೇಟಿಯಾಗುವವರೆಗೆ ಪರಸ್ಪರ ಮೂದಲಿಕೆಗಳನ್ನು ಯಥೇಚ್ಛವಾಗಿ ಮುಂದುವರಿಸಲು ಅಡ್ಡಿಯಿಲ್ಲವೆಂಬಂತೆ ಆಗ್ರಾ ಸಭೆಯು ಕೊನೆಗೊಂಡದ್ದು ಎರಡೂ ರಾಷ್ಟ್ರಗಳ ಜನರು ನಿರಾಶೆಯಿಂದ ನೊಂದುಕೊಳ್ಳುವಂತೆ ಮಾಡಿದೆ. ಬಳ್ಳಾರಿಯಲ್ಲಿ ಸೋನಿಯಾ ಗಾಂಧಿಯವರನ್ನು ಎದುರಿಸಲು ಸುಷ್ಮಾ ಸ್ವರಾಜ್ ಅವರನ್ನು ಆಯ್ಕೆ ಮಾಡಿದ ಭಾರತೀಯ ಜನತಾ ಪಕ್ಷದ ನಕಾರಾತ್ಮವಾದಿ ನಾಯಕರು ಈ ಬಾರಿ ಮುಶಾರಫ್‌ರನ್ನು ಉದ್ವಿಗ್ನಗೊಳಿಸಲು ಆಕೆಯನ್ನೇ ಬಳಸಿಕೊಂಡಿದ್ದು ತೀರಾ ಅನುಚಿತ. ಒಂದರ್ಥದಲ್ಲಿ ಭಾರತೀಯ ಜನಸಂಘ ಹುಟ್ಟಿಕೊಂಡದ್ದೇ ಜಮ್ಮು-ಕಾಶ್ಮೀರದ ಘಟನೆಗಳ ಹಿನ್ನೆಲೆಯಲ್ಲಿ ಮತ್ತು ನಮ್ಮ ದೇಶದಲ್ಲಿ ಭಾವೋದ್ವೇಗ ಉಂಟುಮಾಡಲು ಶ್ರೀರಾಮಚಂದ್ರನ ಮೂರ್ತಿ ದೊರೆಯುವವರೆಗೆ ಆ ಪಕ್ಷ ಕಾಶ್ಮೀರವನ್ನೇ ಆಶ್ರಯಿಸುತ್ತಿತ್ತು. ಆ ಪಕ್ಷದ ನೇತಾರರು ಮೊದಲಿನಿಂದ ಹುಟ್ಟುಹಾಕಿದ ಒಂದು ದೊಡ್ಡ ಮೂರ್ಖವಾದವೆಂದರೆ ನೆಹರು ಮಾಡಿದರೆನ್ನಲಾದ ತಪ್ಪಿನಿಂದ ನಾವು ಕಾಶ್ಮೀರದ ಸಮಸ್ಯೆ ಎದುರಿಸಬೇಕಾಯಿತು ಎನ್ನುವುದು. ಸೈನ್ಯವನ್ನು ಹಿಂದೆಗೆದುಕೊಳ್ಳದಿದ್ದರೆ ೧೯೪೮ರಲ್ಲೇ ಸಮಸ್ಯೆಗೆ ಪರಿಹಾರ ದೊರಕಿಬಿಡುತ್ತಿತ್ತೆಂದು ಅಂದಿನಿಂದ ಅವರು ಹೇಳಿಕೊಂಡೇ ಬಂದಿದ್ದಾರೆ. ಪಾಕಿಸ್ತಾನದ ಹತೋಟಿಯಲ್ಲಿರುವ ಕಾಶ್ಮೀರದ ಭಾಗದಿಂದ ನಡೆಯುತ್ತಿರುವ ಧಾಳಿಯನ್ನು ಖುದ್ದು ಪಾಕಿಸ್ತಾನದಿಂದಲೂ ಆರಂಭಿಸಬಹುದಿತ್ತೆಂಬ ಸರಳ ವಿಷಯ ಅವರಿಗೆ ತಿಳಿಯದೆ ಇಲ್ಲ. ಕಳೆದ ದಶಕದ ಒಂದು ನಿದರ್ಶನವೇ ಸಾಕು : ಪಾಕಿಸ್ತಾನದಲ್ಲಿ ಖಲೀಸ್ತಾನದ ಪ್ರತಿಪಾದಕರು ನೆಲೆಗಳನ್ನು ಮಾಡಿಕೊಂಡಿದ್ದರೆಂಬುದನ್ನು ಮರೆಯಬಾರದು. ಇದು ಭೌಗೋಳಿಕ ರಾಜಕೀಯದ ಒಂದು ಭಾಗ. ಜೊತೆಗೆ, ತಮಗೆ ಅಧಿಕಾರ ಬಂದರೆ ಒಂದು ತಿಂಗಳೊಳಗಾಗಿ ಕಾಶ್ಮೀರದ ಸಮಸ್ಯೆ ಬಗೆಹರಿಸುವ ಸಾಮರ್ಥ್ಯ ತಮಗಿದೆಯೆಂದು ಪ್ರತಿ ಚುನಾವಣೆಯ ವೇಳೆಯಲ್ಲೂ ಅವರು ಹೇಳುತ್ತಾ ಬಂದಿದ್ದಾರೆ. ಕಾಶ್ಮೀರದ ಜನರನ್ನು ಒಲಿಸಿಕೊಳ್ಳದೆ ಅನ್ಯಮಾರ್ಗವಿಲ್ಲವೆಂದು ಈಗಲೂ ಅವರು ಭಾವಿಸಿದಂತಿಲ್ಲ. ಸಂವಿಧಾನದ ೩೭೦ನೇ ವಿಧಿಯನ್ನು ಕಿತ್ತುಹಾಕುವುದು, ಸೈನ್ಯದ ಕಾರ್ಯಾಚರಣೆಯನ್ನು ಹೆಚ್ಚಿಸುವುದು, ಅಮೆರಿಕಾಕ್ಕೆ ದುಂಬಾಲು ಬಿದ್ದು ಪರಿಹಾರಕ್ಕಾಗಿ ಅವರನ್ನು ಗೋಗರೆಯುವುದು, ಪಾಕಿಸ್ತಾನವನ್ನೇ ಕಬಳಿಸಿಬಿಡುತ್ತೇವೆಂದು ಆರ್ಭಟಿಸುವುದು, ಇವೆಲ್ಲಾ ಅವರ ಮಾರ್ಗಗಳು. ಇದಕ್ಕೆ ಪೂರಕವಾಗಿ ಪಾಕಿಸ್ತಾನದ ಕೆಲವು ರಾಜಕೀಯ ವ್ಯಕ್ತಿಗಳು ಮತೀಯ ಯುದ್ಧವನ್ನು ಘೋಷಿಸಿ, ಭಾರತದ ಮೇಲೆ ವಿಜಯ ಸಾಧಿಸಿ, ದೆಹಲಿಯ ಕೆಂಪುಕೋಟೆಯ ಮೇಲೆ ಹಸಿರು ಧ್ವಜ ಹಾರಿಸುವುದಾಗಿ ಘರ್ಜಿಸುತ್ತಾರೆ. ಇದಾವುದೂ ಕಾರ್ಯಸಾಧ್ಯವಲ್ಲವೆಂದು ಎರಡೂ ರಾಷ್ಟ್ರಗಳಿಗೆ ಮನವರಿಕೆಯಾಗಿದೆಯೆಂಬುದು ಆಗ್ರಾ ಸಭೆಯ ಒಂದು ಸ್ವಾಗತಾರ್ಹ ಪರಿಣಾಮ. ಆದರೆ ಎರಡೂ ಕಡೆ ಅಶುಭ್ರ ಮನಸ್ಸುಗಳು ಕೆಲವಿವೆ. ವಾಜಪೇಯಿ ಭೇಟಿಕೊಟ್ಟ ಸ್ಥಳವೊಂದನ್ನು ಪಾಕಿಸ್ತಾನದ ಒಂದಷ್ಟು ಹೊಲಸು ಮನಸ್ಸಿನ ಜನ ತೊಳೆದರೆ, ಮುಶಾರಫ್ ಭೇಟಿ ಮಾಡಿದ ಸ್ಥಳವನ್ನು ಶುದ್ಧಿಗೊಳಿಸಲು ಭಾರತದಲ್ಲಿ ಇನ್ನೊಂದಷ್ಟು ಜನ ಗಂಜಲವೇ ಗಂಗಾಜಲವೆಂದು ಅದನ್ನು ಹೊತ್ತು ಹೋಗುತ್ತಾರೆ. ಎರಡೂ ಗುಂಪುಗಳು ಮೊದಲು ತಮ್ಮ ಮನಸ್ಸುಗಳನ್ನು ತೊಳೆದುಕೊಂಡಿರುತ್ತಿದ್ದರೆ ಲಾಭವಾಗುತ್ತಿತ್ತು !

ಮೂಲಭೂತವಾಗಿ ನಮ್ಮ ಮುಂದಿರುವುದು ಎರಡೇ ಪ್ರಶ್ನೆಗಳು : ಅ) ಎರಡೂ ಕಡೆ ಇರುವ ಇಂತಹ ಮನಸ್ಸುಗಳನ್ನು ಬೆಳೆಸಿ ಬಳಸುವ ರಾಜಕೀಯ ಶಕ್ತಿಗಳು ಯಾವುವು ಮತ್ತು ಅವುಗಳ ಅಂತಿಮ ಉದ್ದೇಶವೇನು ? ಮತ್ತು ಆ) ಎರಡೂ ಕಡೆ ಇರುವ ಕಾಶ್ಮೀರದ ಜನರ ಸ್ಥಾನಮಾನ ಮತ್ತು ಪಾತ್ರಗಳೇನು ?

ಈ ಪ್ರಶ್ನೆಗಳನ್ನು ಮಾನವೀಯ, ಪ್ರಜಾಪ್ರಭುತ್ವವಾದಿ, ದೃಷ್ಟಿಗಳಿಂದ ನೋಡದೆ ನಾವೆಷ್ಟು ಹೆಣಗಾಡಿದರೂ, ಹಣ ಸುರಿದರೂ, ತೀವ್ರಗಾಮಿಗಳನ್ನು ಸೆಣಸಿದರೂ ನಾವು ನಿಂತಲ್ಲೇ ನಿಂತಿರುತ್ತೇವೆ. ಇತಿಹಾಸದ ಹಿಂದಿನ ಪುಟಗಳಿಂದ ಪುರಾಣಗಳನ್ನು ಹೆಕ್ಕಿ ತೆಗೆದು ಯಾರನ್ನು ದೂಷಿಸಿದರೂ ಅದು ನಿಷ್ಫಲ. ಸುಷ್ಮಾ ಸ್ವರಾಜರನ್ನು ಕೈದಾಳ ಮಾಡಿಕೊಂಡ ನಿಕೃಷ್ಟ ರಾಜಕೀಯ ಮತಿಭ್ರಷ್ಟರು ಇದನ್ನು ತಿಳಿಯುವುದಿಲ್ಲ ಮತ್ತು ಒಪ್ಪುವುದಿಲ್ಲ. ನಾವು ಹೇಳಿದಂತೆ ಕೇಳದಿರಲು ಇವರಿಗೆಷ್ಟು ಗರ್ವವೆಂದು ಕಾಶ್ಮೀರದ ಜನಸಾಮಾನ್ಯರನ್ನು ತುಚ್ಛೀಕರಿಸುವುದು ಯೋಗ್ಯ ನಡೆವಳಿಕೆಯಲ್ಲ. ಮುಶಾರಫ್ ಬಂದದ್ದೇ ಕಾಶ್ಮೀರದ ಬಗೆಗಿನ ಚರ್ಚೆಗೆ. ಅದು ಎರಡೂ ರಾಷ್ಟ್ರಗಳಿಗೂ ಗೊತ್ತಿತ್ತು. ಚರ್ಚಿಸುತ್ತಿದ್ದುದೂ ಅದನ್ನೇ. ಆದರೆ ಅದನ್ನು ಬಿಟ್ಟು ಬೇರೆಲ್ಲವನ್ನೂ ವಾಜಪೇಯಿ - ಮುಶಾರಫ್ ತೀರ್ಮಾನಿಸುತ್ತಿದ್ದಾರೆಂದು ಹೇಳಿದರೆ ಪಾಕಿಸ್ತಾನದ ಸ್ವಯಂ ಘೋಷಿತ ಅಧ್ಯಕ್ಷರು ಸುಮ್ಮನಿರಲು ಸಾಧ್ಯವೆ ? ಕಾಶ್ಮೀರದ ಜನರ ನಿಜವಾದ ಪ್ರತಿನಿಧಿಗಳು ಯಾರೆಂಬುದರ ಬಗ್ಗೆ ಒಮ್ಮತವಿಲ್ಲ, ನಿಜ. ಆದರೆ ನಾವು ಯಾರನ್ನು ಗುರುತಿಸುತ್ತೇವೋ ಅವರು

*(೮ನೇ ಪುಟಕ್ಕೆ)*




ಸಂಪುಟ-೩ ಸಂಚಿಕೆ - ೧ ಆಗಸ್ಟ್ ೨೦೦೧

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**

# ಸಂಪಾದಕೀಯ

**ಈ** ಬಾರಿ ವಾಜಪೇಯಿಯವರು ಕೆಂಪುಕೋಟೆಯ ಮೇಲಿಂದ ಸ್ವಾತಂತ್ರ್ಯೋತ್ಸವದ ಭಾಷಣ ಮಾಡುವಾಗ ಹಿಂದೆಂದಿಗಿಂತಲೂ ಹೆಚ್ಚಾಗಿ ತಮ್ಮ ಸರ್ಕಾರದ ಸಾಧನೆಗಳನ್ನು ಶ್ಲಾಘಿಸಿಕೊಳ್ಳುತ್ತಾರೆ: ಶಾಂತಿ ಸಂಧಾನಕ್ಕಾಗಿ ಪಾಕಿಸ್ತಾನ ಮುಂದಾಗಬೇಕಾಗಿದ್ದು ನಮ್ಮ ಪ್ರಾಬಲ್ಯದ ಕುರುಹು, ಕಾಶ್ಮೀರದಲ್ಲಿ ಭಯೋತ್ಪಾದಕರನ್ನು ನಿರ್ನಾಮ ಮಾಡುತ್ತೇವೆ, ಅಮೆರಿಕಾ ನಮ್ಮ ಅಮೋಘ ಮಿತ್ರನಾಗಿರುವುದು ನಮ್ಮ ನೀತಿಯ ಯಶಸ್ಸು, ಜಾಗತೀಕರಣವು ನಮ್ಮ ಮಾರುಕಟ್ಟೆಯನ್ನು ಹೆಚ್ಚಿಸಿದೆ, ಅದ್ಭುತವಾಗಿ ವಿದೇಶಿ ಬಂಡವಾಳ ಹರಿದುಬರುತ್ತಿದೆ, ಮಿತ್ರಪಕ್ಷಗಳು ನಮ್ಮ ಸರ್ಕಾರದಲ್ಲಿ ಪೂರ್ತಿ ನಂಬಿಕೆ ಇರಿಸಿವೆ, ಇತ್ಯಾದಿ. ಹೊಸ ಶತಮಾನದ ಮೊದಲ ವರ್ಷದ ಸಮಾರಂಭವು ನಮ್ಮ ೫೪ನೆಯ ವರ್ಷದ ಉತ್ಸವ. ಸ್ವಾತಂತ್ರ್ಯಕ್ಕಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದ ಎಲ್ಲ ಹಿರಿಯ ಚೇತನಗಳಿಗೆ, ಜನಸಮುದಾಯಕ್ಕೆ ನಮ್ಮ ನಮನ ಸಲ್ಲಿಸುತ್ತಾ ಅವರ ನಿರೀಕ್ಷೆಗಳು ಇಂದಿನ ಸನ್ನಿವೇಶದಲ್ಲಿ ಎಷ್ಟು ಫಲಿಸುತ್ತಿವೆ ಎಂಬುದನ್ನು ಮಾಪನ ಮಾಡಿಕೊಳ್ಳಬೇಕು.

ನಮ್ಮ ಗಣರಾಜ್ಯದ ಗತಿ ಎಲ್ಲಿಗೆ ಮುಟ್ಟಿದೆಯೆಂದರೆ ಆಕಾಶವಾಣಿಯಲ್ಲಿ ಸಂಸ್ಕೃತ ಪಾಠವನ್ನು ಕೂಡ ದೆಹಲಿಯ ವಿದ್ವಾಂಸ ನಡೆಸಿಕೊಡುತ್ತಾನೆ ! ಇಲ್ಲಿಯ ಪಂಡಿತರಲ್ಲಿ ದೆಹಲಿಯ ಪ್ರಭುವಿಗೆ ನಂಬಿಕೆಯಿಲ್ಲ. ರಾಜ್ಯಗಳ ಸ್ವಾಯತ್ತತೆಯು ಅತ್ಯಂತ ಹೀನಮಟ್ಟ ಮುಟ್ಟಿರುವುದಕ್ಕೆ ಇದೊಂದು ಅತಿ ಲಘುವಾದ ಉದಾಹರಣೆ. ಎಲ್ಲವೂ ದೆಹಲಿಯ ಸುಲ್ತಾನರ ಅಧೀನದಲ್ಲಿರಬೇಕಾದ ಒತ್ತಾಯವಿರುವಾಗ ರಾಜ್ಯಗಳು ಹಾಗೂ ಜನತೆಯು ದೇಶದಲ್ಲಿ ಯಾವ ಭಾವನೆಯೊಂದಿಗೆ ಸಮೀಕರಿಸಿಕೊಳ್ಳಬಹುದೆಂದು ಅಂದಾಜು ಮಾಡುವುದು ಕಷ್ಟವಲ್ಲ. ''ಕೇಶವ ಪ್ರಣೀತ ಪಥ''ದಲ್ಲಿ ರಾಷ್ಟ್ರವನ್ನು ಕೊಂಡೊಯ್ಯುತ್ತೇನೆಂದು ಸಾರುವ 'ದೇಶಭಕ್ತಿಗೀತೆ' ಇಂದು ಪ್ರಸಾರವಾಗುತ್ತಿದೆ. ಆರೆಸ್ಸೆಸ್‌ನ ಸ್ಥಾಪಕರ ಹೆಸರು ಕೇಶವ ಹೆಡ್ಗೆವಾರ್. ವಿಶ್ವ ವ್ಯಾಪಾರ ಸಂಸ್ಥೆ ಎಷ್ಟು ಉದಾತ್ತವಾದ ಕೆಲಸ ನಿರ್ವಹಿಸುತ್ತಿದೆ ಎಂಬುದನ್ನು ಉಪದೇಶಿಸಲು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ನವರು ಆಕಾಶವಾಣಿಯಲ್ಲಿ ಪ್ರತಿ ಬುಧವಾರ ಕಾರ್ಯಕ್ರಮ ಆಯೋಜಿಸುತ್ತಾರೆ. ಆ ಸಂಸ್ಥೆಯ ಕುತಂತ್ರಗಳನ್ನು ಬಯಲಿಗೆಳೆಯುವುದು ಸ್ವಾತಂತ್ರ್ಯದ ರಕ್ಷಣೆಯಲ್ಲ, ಅದರ ಬಲೆಗೆ ಬೀಳುವುದೇ ಔನ್ನತ್ಯದ ಕುರುಹು ! ಹಿಂದಿಯ ಹೇರಿಕೆಯು ಎಗ್ಗಿಲ್ಲದಂತೆ ಸಾಗುತ್ತಿದ್ದು ಪ್ರಾದೇಶಿಕ ಭಾಷೆಗಳು ಚೈತನ್ಯಹೀನವಾಗುತ್ತಿವೆ. ಅದೇ ಕೇಂದ್ರೀಕೃತ ಸಂಸ್ಕೃತಿಯ ಹಾದಿ ಎನ್ನಲಾಗುತ್ತಿದೆ. ಭಾರತ್ ಅಲ್ಯುಮಿನಿಯಂ ಕಂಪೆನಿಯಂತೆ ಏರ್ ಇಂಡಿಯಾ ಮುಂತಾದವೂ ಕವಡೆ ಕಿಮ್ಮತ್ತಿಗೆ ಖಾಸಗಿಯವರಿಗೆ ಬಳುವಳಿಯಾಗಿ ಹೋಗುತ್ತಿವೆ. ರಾಷ್ಟ್ರೀಯ ಆರ್ಥಿಕತೆಯ ಭದ್ರತೆಗೆ ಅದು ಅಗತ್ಯವೆಂದು ಸಾರಲು ಒಬ್ಬ ಹರಾಜು ಮಂತ್ರಿಯೇ ಕೇಂದ್ರ ಸಂಪುಟದಲ್ಲಿದ್ದಾರೆ ! ಅಮೆರಿಕಾ ಸರ್ಕಾರದೊಡನೆ ಮಿಲಿಟರಿ ಸಂಬಂಧಗಳನ್ನು ವಿಶಾಲಗೊಳಿಸಲು ನಮ್ಮ ಮಿಲಿಟರಿ ನೆಲೆಗಳನ್ನು ಆ ದೇಶದ ಉಪಯೋಗಕ್ಕೆ ತೆರವು ಮಾಡಿಕೊಡುವ ಹುನ್ನಾರ ನಡೆದಿದೆ. ಆ ಸರ್ಕಾರದ ಪೊಲೀಸ್ ಪಡೆ ಈಗಾಗಲೇ ದೆಹಲಿಯಲ್ಲಿ ತಳವೂರಿದೆ. ಇಂತಹ ಅವಕಾಶ ಆ ಪೊಲೀಸರಿಗೆ ಬೇರಿನ್ನಾವ ದೇಶದಲ್ಲೂ ಲಭ್ಯವಿಲ್ಲ. ಅದಕ್ಕಿಂತ ಮಿಗಿಲಾಗಿ, ಅಮೆರಿಕಾದ ಭಟ್ಟಂಗಿಗಳಾದ್ದು ಸಾಲದೆಂಬಂತೆ ಈಗ ಅದರ ವಿನಮ್ರ ಸೇವಕರಾಗಿ ನಾಲಿಗೆ ಕಪ್ಪು ಮಾಡಿಕೊಳ್ಳುವ ಸಚಿವ ವೃಂದ ದೆಹಲಿಯಲ್ಲಿ ದೊಡ್ಡದಾಗುತ್ತಿದೆ. ಅಮೆರಿಕಾಕ್ಕೆ ನೆಲೆ ಕೊಟ್ಟ ರಾಷ್ಟ್ರಗಳ ಅನುಭವ ತಿಳಿದಿದ್ದೂ ಅದನ್ನು ನಾವು ಮಾಡಹೊರಟಿರುವುದು ಚೀಣಾ ಎಂಬ ದೈತ್ಯನಿಂದ ರಕ್ಷಿಸಿಕೊಳ್ಳಲು, ಎಂದು ಹೇಳುತ್ತಾ ಚೀಣಾ-ಗುಮ್ಮನನ್ನು ಚಿತ್ರಿಸಲಾಗುತ್ತಿದೆ. ಚೀಣಾದ ''ಹೊಡೆತ''ದಿಂದ ವಿಯೆಟ್ನಾಂ - ಕಾಂಬೋಡಿಯಾಗಳನ್ನು ''ರಕ್ಷಿಸಿದ್ದು'' ಮುಗಿದು ಈಗ ಭಾರತದ ಸರದಿ ಬಂದಿದೆ. ಅಲಿಪ್ತ ನೀತಿಯನ್ನು ಧಿಕ್ಕರಿಸಿ ನಮ್ಮ ವಿದೇಶಾಂಗ ನೀತಿ ರೂಪುಗೊಳ್ಳುತ್ತಿದೆ. ಭಾಜಪದ ಮಿತ್ರ ಪಕ್ಷಗಳು ಇದನ್ನೆಲ್ಲ ನೋಡಿಯೂ ದಿವ್ಯ ನಿರ್ಲಕ್ಷ್ಯದಿಂದ ಕೂತಿವೆ. ಭಾರತದ ಸಾರ್ವಭೌಮತ್ವವನ್ನು ಹೂಳಲು ಗುಂಡಿ ತೋಡುವ ಆಜ್ಞಾಧಾರಕರು ಇವರು. ಭಾರತದ ಈಶಾನ್ಯ ಭಾಗದಲ್ಲಾಗಲಿ, ಕಾಶ್ಮೀರದಲ್ಲಾಗಲಿ, ಶಾಂತಿ ನೆಲೆಸಲು ದೈನ್ಯದಿಂದ ಅಮೆರಿಕಾದತ್ತ ನೋಡುವುದು ರೂಢಿಯಾಗಿಹೋಗುತ್ತಿದೆ.

ಖಾಸಗೀಕರಣದ ಅಗ್ನಿಕುಂಡದಲ್ಲಿ ನಮ್ಮೆಲ್ಲ ಆರ್ಥಿಕ ವ್ಯವಹಾರಗಳೂ ಸುಟ್ಟು ಬೂದಿಯಾದರೆ ನಾವು ಪಾವನರಾಗುತ್ತೇವೆಂಬ ನೀತಿ ಜಾರಿಗೆ ಬರುತ್ತಿರುವುದು ಸ್ವಾತಂತ್ರ್ಯವೆಂಬುದಕ್ಕೆ ಬೆಲೆಯಿಲ್ಲವೆಂಬುದನ್ನು ಘೋಷಿಸುತ್ತಿದೆ. ಇದೊಂದು ವಿಪರ್ಯಾಸ : ಅಮೆರಿಕಾದ ಅಧ್ಯಕ್ಷ ಸಹ ಅವನ ದೇಶದ ಖಾಸಗಿ ಕಂಪೆನಿಯಾದ ಎನ್ರಾನ್ ಪರವಾಗಿ ವಕಾಲತ್ತು ವಹಿಸುತ್ತಾನೆ. ಖಾಸಗಿ ವ್ಯಾಪಾರದ ಒಪ್ಪಂದಗಳಿರುವಾಗ ಸರ್ಕಾರ ಏಕೆ ಮಧ್ಯೆ ಬರಬೇಕೆಂದು ಯಾರೂ ಕೇಳುವುದಿಲ್ಲ. ಎನ್ರಾನ್‌ಗೆ ಸೌಲಭ್ಯ ನೀಡದಿದ್ದರೆ ವಿದೇಶಿ ಬಂಡವಾಳ ನಮ್ಮ ದೇಶಕ್ಕೆ ಬರಲೊಲ್ಲದು ಎಂಬ ಮಾತು ಸದಾ ಕೇಳಿಬರುತ್ತದೆ. ಎನ್ರಾನ್ ಅಧ್ಯಕ್ಷನು ಮುಂಬೈಗೆ ಬಂದು ಬಾಳ ಠಾಕ್ರೆ ಎಂಬ ನಾಯಕನನ್ನು ಭೇಟಿಯಾಗಿ ಆತನ ಬೆಂಬಲ ಕೋರುತ್ತಾನೆ. ಅಂದರೆ, ನಮ್ಮ ಆರ್ಥಿಕ ನೀತಿಗಳು ಯಾರಿಗಾಗಿ ಎಂಬ ಪ್ರಶ್ನೆ ಗೌಣವಾಗಿ ಉಳಿಯಬಾರದೆಂದರ್ಥ. ಖಾಸಗಿತನ-ಜಾಗತೀಕರಣದ ಮುಸುಕಿನಲ್ಲಿ ನಮ್ಮ ದೇಶದ ಸಂಪತ್ತು ಹೊರದೇಶಗಳಿಗೆ ರವಾನೆಯಾಗಲು ಸರ್ಕಾರವೇ ಮುಖ್ಯಪಾತ್ರ ವಹಿಸುತ್ತಿದೆ. ವಸಾಹತುಶಾಹಿಯ ಲೂಟಿಯನ್ನು ಅಂತ್ಯಗೊಳಿಸಿದ ದೇಶ ನವವಸಾಹತುಶಾಹಿಗೆ ಆಹ್ವಾನ ನೀಡಿದೆ. ಇದಕ್ಕೆ ಪರ್ಯಾಯವಾಗಿ ನಮಗಿಂತಲೂ ತಡವಾಗಿ ಸ್ವಾತಂತ್ರ್ಯ ಪಡೆದ ಪಾಪುವ - ನ್ಯೂಗಿನಿಯಂತಹ ಸಣ್ಣದೇಶದ ಧೃತಿ ಹೆಮ್ಮೆ ಎನಿಸುತ್ತದೆ. ನಮಗಿರುವ ಐದು ಸಾವಿರ ವರ್ಷಗಳ ಇತಿಹಾಸ ಆ ದೇಶಕ್ಕಿಲ್ಲ. ೧೮೭೦ರಷ್ಟು ಈಚೆಗೆ ರಷ್ಯಾದ ಮಿಕ್ಲುಹೊ-ಮಕ್ಲಾಯ್ ಎಂಬಾತ ಅಲ್ಲಿಗೆ ಭೇಟಿಯಿತ್ತಾಗ ಅವರಿನ್ನೂ ''ನವನಾಗರಿಕತೆ''ಯ ಹೆಸರನ್ನೂ ಕೇಳಿರಲಿಲ್ಲ. ಆದರೆ ಜಾಗತೀಕರಣ ಅವರನ್ನೂ ಇಂದು ಮುತ್ತಿದೆ. ಅಲ್ಲಿಯೂ ಟೆಲಿಕಾಂ, ಏರ್‌ಲೈನ್ಸ್ ಮುಂತಾದುವನ್ನು ವಿಶ್ವಬ್ಯಾಂಕಿನ ಒತ್ತಾಯದಿಂದ ಖಾಸಗೀಕರಣಗೊಳಿಸುವ ಪ್ರಯತ್ನ ನಡೆದಿದೆ. ವಿದ್ಯಾರ್ಥಿಗಳು ಅದರ ವಿರುದ್ಧ ಬಂಡೆದ್ದು ಇದೇ ತಿಂಗಳಲ್ಲಿ ಬಹುರಾಷ್ಟ್ರೀಯ ಕಂಪೆನಿಗಳ ದೌರ್ಜನ್ಯವನ್ನು ಹಿಮ್ಮೆಟ್ಟಿಸಿದರು. ಆದರೆ ನಮ್ಮ ''ರಾಷ್ಟ್ರೀಯ ಸಂಸ್ಕೃತಿ''ಯ ಸ್ವಯಂಘೋಷಿತ ಆರಾಧಕರು ದೇಶವನ್ನು ವಿದೇಶಿಯರಿಗೆ ಹಸ್ತಾಂತರಿಸುವ ತರಾತುರಿಯಲ್ಲಿದ್ದಾರೆ. ಸ್ವಾತಂತ್ರ್ಯ ಹೋರಾಟದ ಪ್ರಣಾಳಿಕೆಯಲ್ಲಿ ಇಂತಹ ತುಚ್ಛ ಆಕಾಂಕ್ಷೆಗಳಿಗೆ ಸ್ಥಾನವಿರಲಿಲ್ಲ.

ಶಿಕ್ಷಣದ ಇಂದಿನ ಪಾಡನ್ನು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಪರ್ಯಾಯ ವ್ಯವಸ್ಥೆಯೆಂದು ಸ್ಥಾಪಿಸಲಾದ ಸಂಸ್ಥೆಗಳ ಆಶಯಗಳೊಡನೆ ಹೋಲಿಸಿದರೆ ನಾವು ತಲೆತಗ್ಗಿಸಬೇಕು. ಮೊದಲನೆ ಮತ್ತು ಎರಡನೆ ಪೀಳಿಗೆಯ ಅಕ್ಷರಸ್ಥ ಕುಟುಂಬಗಳಿಂದ

ವಿದ್ಯಾರ್ಜನೆಗೆಂದು ಹೆಚ್ಚು ಹೆಚ್ಚು ಮಂದಿ ಪ್ರವೇಶ ಬಯಸುತ್ತಿರುವಾಗ ಒಂದು ಕಡೆ ಕರ್ಮಕಾಂಡ - ಅಗ್ನಿಹೋತ್ರ - ಜ್ಯೋತಿಷದ ಪಿಡುಗು ಅವರನ್ನು ಕಾಡುತ್ತಿದ್ದರೆ, ಇನ್ನೊಂದೆಡೆ ಮಾಹಿತಿ ತಂತ್ರಜ್ಞಾನವೇ ಸರ್ವಸ್ವವೆಂಬ ಅವಿವೇಕ ಮೆರೆದಾಡುತ್ತಿದೆ. ಕರ್ಮಕಾಂಡ-ಜ್ಯೋತಿಷಗಳನ್ನು ಉದ್ಯೋಗ ಮಾಡಿಕೊಳ್ಳಲು ಖಾಸಗಿಯಾಗಿ ಕಲಿಯುವುದು ಬೇರೆ, ಅದನ್ನು ವಿಜ್ಞಾನದ ಭಾಗಗಳೆಂದು ವಿಶ್ವವಿದ್ಯಾನಿಲಯಗಳಲ್ಲಿ ಬೋಧಿಸುವುದು ಬೇರೆ ಎಂಬ ಪ್ರಾಥಮಿಕ ಕಲ್ಪನೆಯೂ ಇಲ್ಲದ ಅಣು ವಿಜ್ಞಾನಿ ನಮ್ಮ ಮಾನವಿಕ ಸಂಪನ್ಮೂಲ ಸಚಿವರು. ಅಣುವಿನಷ್ಟೂ ವೈಜ್ಞಾನಿಕ ಶಿಸ್ತು ಇಲ್ಲದ ಮುರಳಿ ಮನೋಹರ ಜೋಶಿಯವರಿಗೆ ವಿಜ್ಞಾನದ ಮೂಲಸೂತ್ರಗಳಲ್ಲಿ ನಂಬಿಕೆಯಿಲ್ಲ. ವಿಶ್ವದ ಎಲ್ಲೆಡೆ ಖಗೋಳಶಾಸ್ತ್ರ ಒಂದೇ ರೀತಿಯ ಜ್ಞಾನವಾಗಿ ವಿಕಾಸಗೊಂಡಿದೆ. ಎಲ್ಲರಿಗೂ ರಾಶಿಗಳು, ನಕ್ಷತ್ರಗಳು, ಕ್ಷೀರಪಥ, ಗ್ರಹಣ ಇತ್ಯಾದಿಗಳು ಸಮಾನವಾಗಿವೆ. ಆದರೆ ಗ್ರಹಗಳ ತಥಾಕಥಿತ ಪ್ರಭಾವವನ್ನು ಕುರಿತಂತೆ ಏಕಾಭಿಪ್ರಾಯವಿಲ್ಲ. ಪ್ರಯೋಗಕ್ಕೆ ನಿಲುಕುವ ಅಂಶವೂ ಅದರಲ್ಲಿಲ್ಲ. ಆದರೂ ಜ್ಯೋತಿಷವನ್ನು ವಿಜ್ಞಾನದ ಭಾಗವಾಗಿ ಅಧ್ಯಯನ ಮಾಡಬೇಕೆಂದು ಜೋಷಿ ಹೇಳುತ್ತಾರೆ. ಪ್ರಾಚೀನ ಸಾಮಾಜಿಕ ವ್ಯವಸ್ಥೆಯ ಮೌಢ್ಯ ಮತ್ತು ಏರುಪೇರುಗಳನ್ನು ಹಾಗೆಯೇ ಉಳಿಸಿಕೊಳ್ಳುವ ಸಂಚು ಇದರಲ್ಲಿದೆ. ಮಾಹಿತಿ ತಂತ್ರಜ್ಞಾನಕ್ಕೆ ಎಲ್ಲಿಲ್ಲದ ಆದ್ಯತೆ ದೊರಕಿರುವುದು ಅಮೆರಿಕಾಕ್ಕೆ ನಮ್ಮ ಕಂಪ್ಯೂಟರ್-ಕೂಲಿಗಳು ಬೇಕಾಗಿರುವುದರಿಂದ ಎಂಬುದನ್ನು ಡಾ|| ಸಿ. ಎನ್. ಆರ್. ರಾವ್ 'ಹೊಸತು'ವಿಗೆ ನೀಡಿದ್ದ ಒಂದು ಸಂದರ್ಶನದಲ್ಲಿ ಸ್ಪಷ್ಟಪಡಿಸಿದ್ದರು. ಕೂಲಿಯನ್ನು ಯಾವಾಗ ಬೇಕಾದರೂ ಮನೆಗೆ ಕಳಿಸಬಹುದೆಂಬುದಕ್ಕೆ ನಮ್ಮೆದುರಿಗೆ ನಿದರ್ಶನಗಳು ಸಾಕಷ್ಟಿವೆ. ಮುಂದಿನ ದಿನಗಳಲ್ಲಿ ನಮ್ಮ ಶಾಲಾ-ಕಾಲೇಜುಗಳಿಗೆ ವಿಜ್ಞಾನ ಬೋಧಿಸಲು ಅಧ್ಯಾಪಕರನ್ನು ಆಮದು ಮಾಡಿಕೊಳ್ಳುತ್ತೇವೆಯೇ ? ಕರ್ನಾಟಕದ ಶಿಕ್ಷಣ ಸಚಿವರು ಶಾಲಾ ಬೋಧನೆಗೆ ಬೇಕಾದರೆ ಇಂಜಿನಿಯರುಗಳನ್ನು ನೇಮಕ ಮಾಡಿಕೊಳ್ಳುವುದಾಗಿ ಹೇಳಿದ್ದಾರೆ. ವೈಜ್ಞಾನಿಕ ಸಂಶೋಧನೆಗಳಿಗೂ ಅವರನ್ನೇ ತೊಡಗಿಸಬೇಕಾದೀತೇನೋ ! ಒಟ್ಟಿನಲ್ಲಿ, ನಮ್ಮ ಶಿಕ್ಷಣ ಕ್ಷೇತ್ರವನ್ನು ಗೋಜಲು ಮಾಡಿದ್ದೇವೆ. ಜನಪರವಾದ ಕಾಳಜಿ ಕ್ರಮೇಣ ಹೆಚ್ಚಬೇಕಾದ್ದು ಇಳಿಮುಖವಾಗಿದೆ. ಸ್ವಾತಂತ್ರ್ಯದ ಕಲ್ಪನೆ ಅದಾಗಿರಲಿಲ್ಲ.

ನಮ್ಮ ಮಾಧ್ಯಮಗಳನ್ನು ನೋಡಿದರೆ ವಸಾಹತು ಕಾಲದ ಕಳಪೆಯ ಸಂಸ್ಕಾರಗಳನ್ನು ನಾವಿನ್ನೂ ತೊಳೆದುಕೊಳ್ಳದಿರುವುದು ಗೋಚರಿಸುತ್ತದೆ. ನಮ್ಮ ಪತ್ರಿಕೆಗಳಲ್ಲಿ ಅಮೆರಿಕಾ-ಬ್ರಿಟನ್‌ಗಳಿಗಿರುವಷ್ಟು ಪ್ರಾಶಸ್ತ್ಯ ಭಾರತಕ್ಕಿಲ್ಲ. ಆ ದೇಶಗಳ ಸಿನಿಮಾ, ಸಾಹಿತ್ಯ, ವಾಣಿಜ್ಯ ಮುಂತಾದವು ದೀರ್ಘವಾಗಿ ಚಿತ್ರಿತವಾಗುತ್ತವೆ. ಬ್ರಿಟನ್ ರಾಜಮನೆತನದವರು ಎದ್ದಿದ್ದು, ಬಿದ್ದಿದ್ದು, ಕೆಮ್ಮಿದ್ದು, ಬಟ್ಟೆ ಬದಲಾಯಿಸಿದ್ದು, ಎಲ್ಲಾ ನಮಗೆ ಗಹನವಾದ ಸಮಾಚಾರಗಳು. ಅಲ್ಲಿಯ ಪತ್ರಿಕೆಗಳು ಭಾರತದ ಬಗ್ಗೆ ಎಷ್ಟು ಮತ್ತು ಏನು ಪ್ರಕಟಿಸುತ್ತವೆಂಬುದನ್ನು ನಮ್ಮ ಮಾಧ್ಯಮಗಳ ಉನ್ನತಮಟ್ಟದ ಜನ ಪರಿಶೀಲಿಸುವ ಅಗತ್ಯವಿದೆ. ಅಷ್ಟು ದೂರ ಬೇಡ. ನಮ್ಮ ಒಳಗಿನ ಸಂದರ್ಭವೇ ಕಣ್ಣು ತೆರೆಯಿಸಲು ಸಾಕು. ದಕ್ಷಿಣದ ಶೇಕಡ ಎಷ್ಟು ಮಂದಿಗೆ ಕಬೀರ್ ತಿಳಿದಿದ್ದಾನೋ ಅದರ ಶೇಕಡ ಹತ್ತರಷ್ಟು ಮಂದಿ ಉತ್ತರದವರಿಗೆ ಬಸವಣ್ಣ ತಿಳಿದಿಲ್ಲವೆಂಬುದು ಕಟುಸತ್ಯ. ನಮ್ಮ ಸಾಂಸ್ಕೃತಿಕ ವ್ಯಕ್ತಿತ್ವ-ಐಕ್ಯತೆಗಳಿಗೆ ಹಿಡಿದ ಕನ್ನಡಿ ಇದು. ವಸಾಹತುಶಾಹಿಯ ಸಂದರ್ಭದಲ್ಲಿ ಏರ್ಪಟ್ಟ ಬೌದ್ಧಿಕ ಮತ್ತು ಸಾಂಸ್ಕೃತಿಕ ಚೌಕಟ್ಟಿನಲ್ಲೇ ನಮ್ಮ 'ಬೆಳವಣಿಗೆ' ಮುಂದುವರಿದಿದೆ. ನಮ್ಮ ದೂರದರ್ಶನದಲ್ಲಿ ವಿದೇಶಗಳ ಚಾನೆಲ್‌ಗಳು ಎಷ್ಟಿವೆ ಮತ್ತು ಆ ದೇಶಗಳಲ್ಲಿ ನಮ್ಮ ದೇಶದ ಚಾನಲ್ ಯಾವುದಾದರೂ ಇದೆಯೇ ಎಂಬುದನ್ನು ಮಾನ್ಯರಾದ ಸುಷ್ಮಾ ಸ್ವರಾಜ್ ನಮಗೆ ತಿಳಿಸಿಕೊಟ್ಟರೆ ಉಪಕಾರವಾದೀತು. ಹೀಗಿರುವಾಗ, ಇರುವ ಅಲ್ಪಸ್ವಲ್ಪ ಸ್ವಾವಲಂಬನೆಯನ್ನೂ ಗಾಳಿಗೆ ತೂರುವ ದುಷ್ಕ್ರಿಯೆ ಇಂದಿನ ಸರ್ಕಾರದ್ದು. ನಮ್ಮ ಸ್ವಾತಂತ್ರ್ಯೋತ್ಸವದಂದು ಇದನ್ನು ಗಂಭೀರವಾಗಿ ಚಿಂತಿಸಬೇಕಾಗಿದೆ.

ಸಾರ್ವಜನಿಕರು ಕೂಡಿಟ್ಟ ಹಣವು ಸ್ಟಾಕ್ ಎಕ್ಸ್‌ಚೇಂಜ್ ದುರುಳ ಗೂಳಿಗಳಿಗೆ ಸಿಕ್ಕಿ ಜನ ಕಂಗಾಲಾಗಿರುವುದು ಈ ದಶಕದ ಒಂದು ದುರಂತ. ಇತ್ತೀಚೆಗೆ ಯು.ಟಿ.ಐ.ನಂತಹ ಹಣಕಾಸು ಸಂಸ್ಥೆಯಲ್ಲಿರುವ ಸಾರ್ವಜನಿಕರ ಹಣವನ್ನು ಕೂಡ ಅನರ್ಥ ಸಚಿವರಾದ ಯಶವಂತ ಸಿನ್ಹಾ ನಮ್ಮ ಔದ್ಯಮಿಕ ತಿಮಿಂಗಲಗಳಿಗೆ ತಿನಿಸಾಗಿ ಹಂಚಿಬಿಟ್ಟಿದ್ದಾರೆ. ಕೇತನ ಪಾರೇಖ್ ನಂತಹ ಖದೀಮನ ರಕ್ಷಣೆಗಾಗಿ ಯು.ಟಿ.ಐ. ಹಣ ದುರ್ವ್ಯಯವಾಗಿದೆ. ಮುಕ್ತ ಮಾರುಕಟ್ಟೆಯ ಪ್ರಭಾವಳಿಯ ಹಿನ್ನೆಲೆಯಲ್ಲಿ ನಡೆಯುತ್ತಿರುವುದು ಇದು. ನಮ್ಮ ದೊಡ್ಡ ಮತ್ತು ಚಿಕ್ಕ ಉದ್ಯಮಗಳು ವಿನಾಶದ ಅಂಚಿಗೆ ತಳ್ಳಲ್ಪಟ್ಟಿವೆ. ಉತ್ಪಾದನೆ ಕುಸಿದಿದೆ. ನಿರುದ್ಯೋಗ ಹೆಚ್ಚಿದೆ. ಆಹಾರದ ಬೆಲೆ ಇಳಿಸಿದರೂ ಅದನ್ನು ಕೊಳ್ಳುವ ಸಾಮರ್ಥ್ಯವಿಲ್ಲದವರು ನಮ್ಮ ಜನಸಂಖ್ಯೆಯ ಅರ್ಧಭಾಗದಷ್ಟಿದ್ದಾರೆ. ತಾವು ಬೆಳೆದ ಕೃಷಿ ಉತ್ಪನ್ನಗಳ ಬೆಲೆ ವಿಪರೀತವಾಗಿ ಇಳಿದು ಸಾಲ-ಸೋಲ ತೀರಿಸಲಾಗದಿದ್ದವರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಹೀಗೆ ಸಾಯುವ ಸ್ವಾತಂತ್ರ್ಯವನ್ನು ಇನ್ನಷ್ಟು ಜನಕ್ಕೆ ದೊರಕಿಸಿಕೊಡುತ್ತೇವೋ ಅಥವಾ ಇತರರಿಗೆ ಉಪದ್ರವ ಕೊಡದೆ ಜೀವಂತವಾಗಿರಲು ಅವಕಾಶ ಕಲ್ಪಿಸುತ್ತೇವೋ ಎಂಬುದು ಪ್ರಶ್ನೆ. ಕೆಂಪುಕೋಟೆಯ ಮೇಲೆ ನಿಂತಾಗ ವಾಜಪೇಯಿ ಆ ಪ್ರಶ್ನೆಯನ್ನು ಹಾಕಿಕೊಳ್ಳಲಿ ಮತ್ತು ಅದಕ್ಕೆ ಮೊದಲು ಈ ಅರ್ಥಸಚಿವರನ್ನು ಮಂತ್ರಿಮಂಡಲದಿಂದ ಕಿತ್ತೆಸೆಯಲಿ.

ವಿಶ್ವಸಂಸ್ಥೆಯು ತನ್ನ ವಾರ್ಷಿಕ ಮಾನವ ಸಂಪನ್ಮೂಲಾಭಿವೃದ್ಧಿ ವರದಿಯನ್ನು ಪ್ರಕಟಿಸಿದೆ. ಆ ವರದಿಯು ಅಮೆರಿಕೆಯ ಕಣ್ಣುಗಳಿಂದ ಪ್ರಪಂಚವನ್ನು ನೋಡಿ ವಿಶ್ಲೇಷಿಸುತ್ತದೆಂಬುದು ನಿಜವಾದರೂ ಅದರ ಒಂದೆರಡು ಅಂಶಗಳನ್ನು ನಾವು ಗಮನಿಸಬೇಕು. ವಿಶ್ವದಲ್ಲಿ ಭಾರತಕ್ಕೆ ೧೧೫ನೆಯ ಸ್ಥಾನವಂತೆ. ಪಾಕಿಸ್ತಾನ, ಬಂಗ್ಲಾದೇಶ, ನೇಪಾಳ ಮತ್ತು ಭೂತಾನಗಳಿಗಿಂತ ನಾವು ಮೇಲಿದ್ದೇವೆಂದು ಬೇಕಾದರೆ ಸಮಾಧಾನಪಟ್ಟುಕೊಳ್ಳಬಹುದು. ವರದಿಯ ಪ್ರಕಾರ ಒಂದು ವರ್ಷಕ್ಕೆ ನಮ್ಮ ದೇಶ ೯೦೦೦ ಕೋಟಿ ರೂಪಾಯಿಗಳಿಗೂ ಅಧಿಕವಾದ ನಷ್ಟವನ್ನು ಒಂದೇ ಒಂದು ಬಾಬ್ತಿನಲ್ಲಿ ಅನುಭವಿಸುತ್ತಿದ್ದೇವೆ. ಅದು ನಮ್ಮಲ್ಲಿ ಶಿಕ್ಷಣ ಪಡೆದು ಬೇರೆ ದೇಶಗಳಿಗೆ ಹಾರಿ ವೃತ್ತಿಯಲ್ಲಿ ತೊಡಗುವವರಿಂದ ಉಂಟಾಗುವ ನಷ್ಟ. ಕೌಶಲ್ಯವನ್ನು ಸೃಷ್ಟಿಸಲು ನಮ್ಮ ಜನರ ಹಣ ವ್ಯಯವಾಗುತ್ತದೆ; ಕೌಶಲ್ಯದ ಲಾಭ ಬೇರೆ ದೇಶಗಳಿಗೆ ಮತ್ತು ಈ ಕೌಶಲ್ಯದಿಂದ ಉತ್ಪನ್ನವಾದುದನ್ನು ಮತ್ತೆ ದುಬಾರಿ ಹಣ ಕೊಟ್ಟು ನಾವು ಕೊಳ್ಳುತ್ತೇವೆ. ಒಂದು ಸ್ವತಂತ್ರ ರಾಷ್ಟ್ರವು ಅಭಿವೃದ್ಧಿ ಹೊಂದುವ ಮಾರ್ಗ ಇದಲ್ಲ.

ಇನ್ನು ನಮ್ಮ ರಾಜಕೀಯ ತಂತ್ರಗಳ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ. ಇತ್ತೀಚೆಗೆ ಕರುಣಾನಿಧಿಯ ದಸ್ತಗಿರಿಯಾದಾಗ ಸಂವಿಧಾನದ ಮೌಲ್ಯಗಳು ನಾಶವಾದುವೆಂದು ಜಾರ್ಜ್ ಫರ್ನಾಂಡಿಸ್ ಹೇಳಿದರು. ಪ್ರಜಾಪ್ರಭುತ್ವದ ಕೊಲೆಯೂ

(೮ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆನ್ನೆಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ✆ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ✆ : ೪೪೧೦೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ✆ : ೪೨೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ✆ : ೨೪೩೦೨




**ಗಾ**ಂಧಿ-ಅಂಬೇಡ್ಕರ್ ಭೇಟಿ ಪ್ರಸಂಗ, ತಿರುಳು, ಸೈದ್ಧಾಂತಿಕ, ಬದುಕುವ ಕಲೆ, ತಿಂಗಳ ಕಥೆಯಾದ ಮರೆಯಬಾರದು ಒಲವ, ಎಚ್.ಎಮ್.ಟಿ. ಬಹುಮಾನಿತ ಲೇಖನ 'ಇನ್ನೆಲ್ಲಿ ಗುಡ್ಲು ಹಾಕೋದು ?' 'ಸಂದರ್ಶನ', ಬಡತನದ ಸಾಗರದಲ್ಲಿ ಸುಗ್ಗಿಯ ಸಮಸ್ಯೆ, ವೈಚಾರಿಕ, ಇವೆಲ್ಲಾ ಚೆನ್ನಾಗಿ ಮೂಡಿಬಂದಿವೆ. ಇದನ್ನೆಲ್ಲ ತಿಳಿಸಿಕೊಟ್ಟ ಲೇಖಕರಿಗೆ ಮತ್ತು ಪ್ರಕಟಿಸಿದ 'ಹೊಸತು'ವಿಗೆ ವಂದನೆಗಳು.

*ಶಿವಣಗಿ* — ***ದೇಜಪ್ಪ ಬಿ. ಭೀಮಾರಾವ್***
***ಎಸ್. ಅಗಸರ ಸಂಗಮೇಶಿ. ಎಮ್. ತೋಟದ***

'ಹೊಸತು' ಸಂಚಿಕೆ ಆಕರ್ಷಕ ಮುಖಪುಟದಿಂದ ಕಣ್ಮನ ಸೆಳೆಯಿತು.

'ತಿಳಿವು' ವಿಭಾಗದಲ್ಲಿನ 'ದೇಶಪ್ರೇಮ, ವಾರಸುದಾರರು' ಲೇಖನ ಚೆನ್ನಾಗಿತ್ತು. ಓದಿ ಮುಗಿಸಿದಾಗ ಚಿಕ್ಕಂದಿನಲ್ಲಿ ಓದಿದ ಪನ್ನಾದಾಸಿಯ ಕಥೆಯ ನೆನಪು ಒತ್ತರಿಸಿ ಬಂತು. ರಾಜಕುಮಾರನನ್ನು ರಕ್ಷಿಸಲೋಸುಗ ತನ್ನ ಹಸುಳೆಯನ್ನು ಬಲಿಕೊಟ್ಟ ಆ ಹೆತ್ತೊಡಲಿನ ದುಃಖವೆಷ್ಟಿದ್ದಿರಬಹುದು ? ಇಂದು ಇಂತಹ ತ್ಯಾಗ ಬಲಿದಾನಗಳಿಗೆ, ಕವಡೆಯಷ್ಟಾದರೂ ಬೆಲೆಯಿದೆಯೇ..? ಇಂತಹ ಪ್ರಶ್ನೆಗಳಿಗೆ - ನಾನು ಬುದ್ಧಿ ಬಂದಾಗಿನಿಂದ ಉತ್ತರವನ್ನು ಹುಡುಕುತ್ತಿದ್ದೇನೆ. ಇನ್ನೂ ಉತ್ತರ ಸಿಕ್ಕಿಲ್ಲ.

*ಕಳಸಾಡು* — ***ಮಾಲತಿ ಕಮಲಾಕ್ಷ***

''ಸೀಸದ ನಂಜು: ನಿಯಂತ್ರಿಸಬಹುದಾದ ಭಯಂಕರ ಪಿಡುಗು'' ಉತ್ತಮವಾಗಿದೆ. ತುಂಬಾ ಉಪಯುಕ್ತವಾದ ಮಾಹಿತಿಯನ್ನು ನೀಡಿದ್ದೀರಿ.

*ಬೆಂಗಳೂರು* — ***ಕೆ. ಎಸ್. ನವೀನ್***

ಜುಲೈ ತಿಂಗಳ 'ಹೊಸತು' 'ಬಡತನದ ಸಾಗರದಲ್ಲಿ ಸುಗ್ಗಿಯ ಸಮಸ್ಯೆ' ಲೇಖನವು ಸರಕಾರ, ಸರಕಾರಿ ಸಂಸ್ಥೆಗಳು ಸೃಷ್ಟಿಸಿದ ವಿಲಕ್ಷಣ ಸಮಸ್ಯೆಯೊಂದರ ಒಳನೋಟಗಳನ್ನು ವಿವರವಾಗಿ ಪರಿಚಯಿಸಿತು.

ಪುಣ್ಯಭೂಮಿ ಭಾರತದ ಬಹುತೇಕ ಅಧಿಕಾರಶಾಹಿ ಹಾಗೂ ಆಡಳಿತಶಾಹಿ ಮಂದಿಗೆ ಹಸಿವು, ಬಡತನ ಇತ್ಯಾದಿಗಳ ಅನುಭವವಿಲ್ಲ. ಹಾಗಾಗಿ ಈ ಮಂದಿಯಿಂದ ಹಸಿದವರ ಪರವಾಗಿ ನ್ಯಾಯ, ಸಾಂತ್ವನ ನಿರೀಕ್ಷಿಸಿ ಆಶಿಸಿ ಪ್ರಯೋಜನವಿಲ್ಲ.

ದೇಶದ ಆಡಳಿತವೀಗ ಆರ್ಥಿಕ ಲೆಕ್ಕಾಚಾರಗಳ ಮೇಲೆ ನಡೆಯುತ್ತಿದೆ. ಹಾಗಾಗಿ ಇಲ್ಲಿ ಮಾನವ ಜೀವಗಳು ಕೂಡ ಕೇವಲ ಲೆಕ್ಕಗಳು !

*ಮಂಗಳೂರು* — *ಶ್ರೀನಿವಾಸ ಕಾರ್ಕಳ*

*ಹಳದಿ ನಕ್ಷತ್ರ:* ಆತಂಕದ ಹೃದಯದಲ್ಲಿ ತುಮುಲವನ್ನೆಬ್ಬಿಸುವ ಅಪಾಯದ ಗಂಟೆ ಮೊಳಗಿದಂತಾಯಿತು; ಎದೆ ನಡುಗಿತು.

*ಫಲಜ್ಯೋತಿಷವು ವಿಜ್ಞಾನವೇ ?* ನಿಜವಾದ ವೈಜ್ಞಾನಿಕ ಮನೋಧರ್ಮದತ್ತ ಸಾಗದ ನಮ್ಮ ಮೂಢಜನ ಎಷ್ಟೊಂದು ಅನಾಡ್ಯ ಆಚಾರ-ವಿಚಾರಗಳಿಗೆ ಬಲಿಯಾಗುತ್ತಿದ್ದಾರೆ - ಎಂಬ ಕೊರಗು... ನನ್ನ ಹೃದಯವನ್ನು ಕೊರೆಯಿತು.

*ನನ್ನ ಕಥೆ :* ಮರಾಠಿ ಮೂಲ ಕಥೆಯಾದರೂ ಕನ್ನಡಾನುವಾದದ ನಿರೂಪಣಾಶೈಲಿಯು ನವೀನ ಕಥಾವಸ್ತುವಿಗೆ ತನ್ನ ಗುರಿಸಾಧಿಸುವಲ್ಲಿ ಅಂದರೆ 'ತಾಯಿಯ ಮನಸ್ಸಿನಲ್ಲಿ ನಿರ್ಮಾಣವಾಗುವ ವಿಚಾರತರಂಗಗಳು ಹೊಕ್ಕಳುಬಳ್ಳಿಯ ಮೂಲಕ ಗರ್ಭದವರೆಗೆ ತಲುಪುತ್ತವೆ' ಎಂಬ ವೈಜ್ಞಾನಿಕ ಸತ್ಯದ ಜೊತೆಗೆ ಸಮಾಜವು ಎದುರಿಸಲಾಗದ ಸತ್ಯವನ್ನು ಬಿಚ್ಚಿಟ್ಟಿದೆ.

ಹೀಗೆ ಸಂಚಿಕೆಯು ಓದಿಸಿಕೊಂಡು ಒಯ್ಯುವುದರ ಜೊತೆಗೆ ಹೊಸ-ಹೊಸ ವಿಚಾರಗಳಿಗೆ ಹೊಸಬೆಳಕು ನೀಡುತ್ತಿದೆ.

*ಶಿಂದೊಳ್ಳಿ* — ***ಪಂ.ಬ.ಬಾ. ಬಡಿಗೇರ***

**ಜೆ. ಹೆಚ್. ಪಟೇಲ್**
**ಕುರಿತ ಬರಹಗಳಿಗೆ ಆಹ್ವಾನ**

ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ದಿ|| ಜೆ. ಹೆಚ್. ಪಟೇಲ್ ಸಾವು ಕಂಡು ೨೦೦೧ರ ಡಿಸೆಂಬರ್ ೧೨ಕ್ಕೆ ಒಂದು ವರ್ಷವಾಗ ಲಿದೆ. 'ಪಟೇಲ್ ನೆನಪು' ಎಂಬ ವಿಶೇಷ ಪುಸ್ತಕವನ್ನು ಹೊರತರಲಾಗುತ್ತಿದ್ದು ಜೆ. ಹೆಚ್. ಪಟೇಲ್ ಕುರಿತ ಮುಕ್ತ ಬರಹಗಳನ್ನು ಆಹ್ವಾನಿಸಲಾಗಿದೆ.

ಜೆ. ಹೆಚ್. ಪಟೇಲರ ವ್ಯಕ್ತಿತ್ವದ ಎಲ್ಲಾ ಮುಖಗಳನ್ನೂ ಪರಿಚಯಿಸುವುದು ಈ ವಿಶೇಷ ಪುಸ್ತಕದ ಪ್ರಮುಖ ಆಶಯವಾಗಿದೆ. ಅನುಭವ ಬರಹ, ಸಂದರ್ಶನ, ವಿಮಾರ್ಶಾತ್ಮಕ ಲೇಖನ, ಅವರ ಜೋಕುಗಳ ಗಣೆಯನ್ನು - ***ಶಿ.ಜು. ಪಾಶ, ಕೇರಾಫ್ ವಿನಾಯಕ ಎಂಟರ್ ಪ್ರೈಸಸ್, ನಂ. ೭, ಬೇದ್ರೆ ಶಾಪಿಂಗ್ ಕಾಂಪ್ಲೆಕ್ಸ್, ನೆಹರು ರಸ್ತೆ, ಶಿವಮೊಗ್ಗ-೫೭೭೨೦೧*** ಈ ವಿಳಾಸಕ್ಕೆ ಆಗಸ್ಟ್ ೩೦ರೊಳಗೆ ಕಳುಹಿಸಲು ಕೋರಲಾಗಿದೆ.

**(ವಿ)ಫಲ ಜ್ಯೋತಿಷ**

ಸುಮಾರು ೧೬ ವರ್ಷಗಳ ಹಿಂದೆ ನಡೆದ ಘಟನೆಯೊಂದನ್ನು ನೆನಪಿಗೆ ತಂದಿತು.

ಬ್ಯಾಂಕ್ ಒಂದರ ಸೇಲಂ (ತಮಿಳುನಾಡು) ಶಾಖೆಯ ಮ್ಯಾನೇಜರ್‌ಗೆ ಜ್ಯೋತಿಷಿಯೊಬ್ಬ 'ನಿಮಗೆ ಲಾಟರಿಯಲ್ಲಿ ಬಹುಮಾನ ಬರುತ್ತದೆ. ನೀವು ಲಕ್ಷಾಧಿಪತಿಯಾಗಲಿದ್ದೀರಿ' ಎಂದು ಕಣಿ ನುಡಿದನಂತೆ. ಅದನ್ನೇ ಗಂಭಿರವಾಗಿ ನಂಬಿದ ಮ್ಯಾನೇಜರ್ ತಕ್ಷಣ ಕಾರ್ಯ ಪ್ರವೃತ್ತನಾದ. ಬ್ಯಾಂಕಿನಲ್ಲಿ ಜನರು ಒತ್ತೆ ಇಟ್ಟಿದ್ದ ಒಡವೆಗಳನ್ನು ಮಾರಿ ರಾಜ್ಯದ ಎಲ್ಲ ಕಡೆಗಳಿಂದಲೂ ವಿವಿಧ ಲಾಟರಿಗಳ ಟಿಕೆಟ್‌ಗಳನ್ನು ತರಿಸಿ ಲಕ್ಷಾಧೀಶ್ವರನಾಗುವ ಕನಸು ಕಾಣಹತ್ತಿದ. ಫಲಿತಾಂಶಗಳು ಹೊರಬೀಳುವ ಮೊದಲೆ ಅಪರಾಧ ಬಯಲಾಗಿ ಪೊಲೀಸರ ವಶವಾದ. ಫಲಜ್ಯೋತಿಷ ವಿಫಲವಾಯಿತು. ಋಣ ಋಣ ಹಣ ಎಣಿಸುವ ಬದಲು ಕಂಬಿ ಎಣಿಸಿದ. ಮಾಲು ಸಮೇತ ಒಂದು ದೊಡ್ಡ ಗೋಣಿಚೀಲದ ಭರ್ತಿ ಲಾಟರಿ ಟಿಕೆಟ್‌ಗಳು - ಅವನ ಚಿತ್ರ ಪತ್ರಿಕೆಯಲ್ಲಿ ಪ್ರಕಟವಾಗಿತ್ತು.

*ಬೆಂಗಳೂರು* — ***ಎಂ.ಕೆ. ರಾಜಗೋಪಾಲ್***

ಇಂದಿನ ಟೀವೀ ಮಾಧ್ಯಮದ ಪ್ರಬಲ ಪ್ರತ್ಯಾಘಾತದಲ್ಲಿ ಕನ್ನಡದ ಪತ್ರಿಕೆಗಳು ಬಹಳಷ್ಟು ಪ್ರಮಾಣದಲ್ಲಿ ಅನಗತ್ಯವಾದ ಕಣ್ಣುಕುಕ್ಕುವ ಬಣ್ಣ-ಸುಣ್ಣಗಳನ್ನು ಹೆಚ್ಚಿಸಿಕೊಂಡು ಪ್ರಕಟವಾಗುತ್ತಿವೆ. ಕೊಳ್ಳುವವರನ್ನು ಹೆಚ್ಚು ಹೆಚ್ಚಾಗಿ ಕದಿಯಲು ಸ್ಪರ್ಧಾತ್ಮಕವಾಗಿ ಸಮರ ಹೂಡಿದ ಈ ದಿನಗಳಲ್ಲಿ ಕೂಡ ''ಹೊಸತು'' ಪತ್ರಿಕೆ ತನ್ನ ಸಮಗ್ರ ಆದಿಮಧ್ಯಾಂತಗಳಲ್ಲಿ ಅಚಂಚಲವಾಗಿ ನೆಲೆನಿಂತು, ನಿರಲಂಕಾರ ಸುಂದರಿಯಾಗಿ ಮೂಡಿ ಬರುತ್ತಿರುವುದು ನಿಜಕ್ಕೂ ಆಶ್ಚರ್ಯ ! ಗಂಭೀರ ವಿಷಯಗಳ ವೈವಿಧ್ಯಪೂರ್ಣ ಆಯ್ಕೆಯೊಂದಿಗೆ ರುಚಿ ತುಂಬಿ ರಂಜಿಸುವ ಲಾಲಿತ್ಯದೊಂದಿಗೆ.. ''ಹೊಸತು'' ಪತ್ರಿಕೆಯಾಗಿ ಉಳಿದಿಲ್ಲ, ಹೊಸತರ ಮದುವಣಗಿತ್ತಿಯಾಗಿದ್ದಾಳೆ !

*ಬೆಂಗಳೂರು* — ***ಪ್ರೊ|| ಜಿ. ಹೆಚ್. ಹನ್ನೆರಡುಮಠ***

'ಹೊಸತು' ಜೂನ್ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀಯುತ ರಾಮಲಿಂಗಪ್ಪ. ಟಿ. ಬೇಗೂರು ಅವರ ಲೇಖನದಲ್ಲಿ 'ಸಂಸ್ಕೃತಿ, ಸಾಮಾಜಿಕತೆ ಮತ್ತು ಭಾಷಿಕ ಅಸ್ತಿತ್ವ' ದೇಸಿ ವಿಚಾರಗಳ ಬಗ್ಗೆ ಗಮನಾರ್ಹ ಚರ್ಚೆ ನಡೆದಿದೆ. ಆದರೆ ನಮ್ಮ ಹಳಗನ್ನಡ ಕವಿಗಳು ದೇಸಿ ಬಗ್ಗೆ ಒಲವು ವ್ಯಕ್ತಪಡಿಸಿ ಮಾರ್ಗದ ಹಾದಿ ಹಿಡಿಯುವಂತೆ ಇಲ್ಲಿಯೂ ಲೇಖಕರು ಮಾರ್ಗದ ಹಾದಿ ಹಿಡಿದಿದ್ದಾರೆ. ಅದರಲ್ಲೂ ವಿಶೇಷವಾಗಿ 'ಕಾದಂಬರಿ' ಬರೆದ ನಾಗವರ್ಮನ ಹಾದಿಯಲ್ಲಿ ನಡೆದಿದ್ದಾರೆ. ಅವರ ಲೇಖನವನ್ನು ಬಸವಣ್ಣ ಅಥವಾ ಅಕ್ಕಮಹಾದೇವಿಯವರ ಮೂಲಕ ಕನ್ನಡಕ್ಕೆ ತರ್ಜುಮೆ ಮಾಡಿಸಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು. ಪದಗಳ ಬಳಕೆ ಮತ್ತು ವಾಕ್ಯರಚನೆಯಲ್ಲಿ ಮಾರ್ಗ ಕವಿಗಳನ್ನು ಮೆಟ್ಟಿಕ್ಕುವ ಪ್ರಯತ್ನವಿಲ್ಲಿದೆ. ವಿಷಯ ಮಂಡನೆಯಲ್ಲಿ ಗೊಂದಲ ಮಾಡಿಕೊಂಡು, ಪರಸ್ಪರ ಹೋರಾಡುತ್ತಿರುವ ಎರಡೂ ಫುಟ್‌ಬಾಲ್ ತಂಡಗಳ ಪರವಾಗಿ ಆಡುತ್ತಿರುವ ಒಬ್ಬ ಆಟಗಾರನಂತೆ ಲೇಖಕರು ಕಂಡುಬರುತ್ತಾರೆ. ಆಲೋಚನೆ ಮತ್ತು ಅಭಿವ್ಯಕ್ತಿಗಳ ನಡುವೆ ಹೊಂದಾಣಿಕೆ ಇಲ್ಲದಿರಬಹುದೇನೊ !

*ಬೆಂಗಳೂರು* — ***ಕಮಲಾನಂದ ನಾಗೂರ್***

''ಮರೆಯಬಾರದು ಒಲವ'' ಜಾಂಗ್ ಜೈ ಅವರ ಚೀನೀ ಕಥೆಯೊಂದನ್ನು ಕನ್ನಡಕ್ಕೆ ತಂದ ಕಂಜರ್ಪಣೆ ಅವರಿಗೆ ಕೃತಜ್ಞತೆಗಳು.

ವಿವಾಹಿತ ಪ್ರೇಮಿಗಳಿಬ್ಬರು ಮಣ್ಣಿನ ಕಾನೂನು ಅಥವಾ ನೈತಿಕತೆಯಿಂದ ಒಂದಾಗದಿದ್ದರೂ, ಪರಸ್ಪರ ಕೈ-ಕುಲುಕದಿದ್ದರೂ ಅವರು ಪರಸ್ಪರ ಪೂರ್ಣ ಆವರಿಸಿಕೊಂಡ ಅದ್ಭುತ ಪ್ರೀತಿಯ ಅನುಭವ, ಕತೆಯನ್ನು ಮತ್ತೆ ಮತ್ತೆ ಆಸ್ವಾದಿಸುವಂತೆ ಮಾಡುತ್ತದೆ. ಇಂಥ ಉತ್ತಮ ಕತೆಯೊಂದನ್ನು ಪ್ರಕಟಿಸಿದ 'ಹೊಸತು'ವಿಗೆ ಧನ್ಯವಾದಗಳು.

*ಹುಬ್ಬಳ್ಳಿ* — ***ಸುನಂದಾ ಪ್ರಕಾಶ ಕಡಮೆ***

**ಬದುಕುವ ಕಲೆ**

ಲೇಖಕಿ ಹೇಳಿದಂತೆ : 'ಆಡ್ಕೊಳ್ಳಿ ಬಿಡಿ, ಅದ್ರಿಂದೇನಾಗುತ್ತೆ ?' ಎನ್ನುವ ದಪ್ಪ ಚರ್ಮ ಎಲ್ಲರಿಗೂ ಅತ್ಯಗತ್ಯ. ಆದರೆ, ಹೀಗೆ ಹೇಳಿಕೊಳ್ಳುವ ಜತೆಗೆ 'ನಮ್ಮ ಬದುಕು ನಮ್ಮದು' ಎಂಬ ವಿಶ್ವಾಸದಿಂದ ಮುನ್ನುಗ್ಗಿ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕು. ಅಪರೂಪದ ಉತ್ತಮ ಲೇಖನ.

*ಚಿಕ್ಕಮಗಳೂರು* — ***ನಾರಾಯಣ ಯಾಜಿ ಶಿರಾಲಿ***

## ಪತ್ರಗಳು

### ಗಾಂಧಿ - ಅಂಬೇಡ್ಕರ್ ಭೇಟಿ ಪ್ರಸಂಗ

ಜುಲೈ ೨೦೦೧ರಲ್ಲಿ ಪ್ರಕಟವಾಗಿರುವ ಪ್ರೊ॥ ಮ.ನ. ಜವರಯ್ಯ ಅವರ 'ಗಾಂಧಿ-ಅಂಬೇಡ್ಕರ್ ಭೇಟಿ ಪ್ರಸಂಗ'ವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಲು ಬಯಸುತ್ತೇನೆ.

೧. ೧೯೪೬ರಲ್ಲಿ ಚುನಾವಣೆ ಜರುಗಿದುದು ರಾಜ್ಯಾಂಗ ರಚನಾ ಸಭೆಗೆ. ಇದನ್ನು ಹೆಚ್ಚು ಸ್ಪಷ್ಟಪಡಿಸಬೇಕಿತ್ತು.

೨. ಡಾ॥ ಅಂಬೇಡ್ಕರ್ ಸ್ಪರ್ಧಿಸಿ ಸೋತುದು ಮುಂಬಯಿ ವಿಧಾನ ಮಂಡಲದಿಂದ, ಗೆದ್ದುದು ಬಂಗಾಳದಿಂದ, ಪಶ್ಚಿಮ ಬಂಗಾಳದಿಂದಲ್ಲ. ಆಗ ಪಶ್ಚಿಮ ಬಂಗಾಳವೇ ಇರಲಿಲ್ಲ. ಈಗಿನ ಪಶ್ಚಿಮ ಬಂಗಾಳ ಮತ್ತು ಬಾಂಗ್ಲಾದೇಶದ ಬಹುಭಾಗ ಆ ಪ್ರಾಂತದಲ್ಲಿತ್ತು.

೩. ಮುಂಬಯಿ ವಿಧಾನ ಸಭೆಯಲ್ಲಿ ಕಾಂಗ್ರೆಸ್, ಬಂಗಾಳ ವಿಧಾನ ಸಭೆಯಲ್ಲಿ ಮುಸ್ಲಿಂ ಲೀಗ್ ಬಹುಮತ ಹೊಂದಿದ್ದು ಪ್ರಾಂತಸರ್ಕಾರಗಳನ್ನು ರಚಿಸಿದ್ದುವು. ಬಿ. ಜಿ. ಖೇರ್ ಮುಂಬಯಿಗೂ ಹೆಚ್. ಎಸ್. ಸುಹ್ರಾವರ್ದಿ ಬಂಗಾಳಕ್ಕೂ ಪ್ರಧಾನ ಮಂತ್ರಿಗಳಾಗಿದ್ದರು. ಎರಡು ವಿಧಾನಸಭೆಗಳಲ್ಲೂ ಹಿಂದು ಮಹಾಸಭಾ, ಆರ್. ಎಸ್. ಎಸ್., ಗಣನೀಯ ಸ್ಥಾನ ಪಡೆದಿರಲಿಲ್ಲ. ಒಬ್ಬಿಬ್ಬರು ಸದಸ್ಯರೋ, ಸಹಾನುಭೂತಿ ಪರರೋ ಇದ್ದಿರಬಹುದಷ್ಟೆ.

೪. ಆ ವೇಳೆಗಾಗಲೇ ಬಾಬು ಜಗಜೀವನರಾಂ ಅವರು ಬಿಹಾರದ ರಾಜಕೀಯರಂಗದಲ್ಲಿದ್ದ ಪ್ರಮುಖ ಕಾಂಗ್ರೆಸ್ಸಿಗರಾಗಿದ್ದರು. ಕೇವಲ ವಿಧಾನಸಭಾ ಸದಸ್ಯರು ಮಾತ್ರ ಮತದಾರರಾಗಿದ್ದ ಆ ಚುನಾವಣೆಯಲ್ಲಿ ಪ್ರಾಂತದಿಂದ ಪ್ರಾಂತಕ್ಕೆ ಬಂದು ಪ್ರಚಾರ ಮಾಡುವ ಅಗತ್ಯ ಇದ್ದಿರಲಾರದು. ಮುಂಬಯಿ ವಿಧಾನ ಸಭೆಯ ಸದಸ್ಯರು ಖೇರರ ಮಾತನ್ನು ಮುರಿಯುವ ಸಂಭವ ಇರಲಿಲ್ಲ.

೫. ಅಂಬೇಡ್ಕರ್ ಅವರು ಗೆದ್ದುದು ಮುಸ್ಲಿಂ ಲೀಗ್ ಬೆಂಬಲ ದಿಂದ. ಅದು ಒಂದು ಒಡಂಬಡಿಕೆಯ ಪ್ರಕಾರ. ಅದರ ಪ್ರಮುಖ ಕರ್ತೃ ಮಾನ್ಯ ಲೇಖಕರು ಹೇಳಿರುವಂತೆ ಪ್ರಭಾಕರ್ ಮಂಡಲ್ ಅಲ್ಲ; ಅವರ ಹೆಸರು ಜೋಗೇಂದ್ರ ನಾಥ್ ಮಂಡಲ್. ಇದೇ ಒಡಂಬಡಿಕೆಯ ಪ್ರಕಾರವಾಗಿ ಮಂಡಲ್ ಅವರು ನೆಹರು ಅವರ ತಾತ್ಕಾಲಿಕ ಸರ್ಕಾರದಲ್ಲಿ ಮುಸ್ಲಿಂ ಲೀಗಿನ ಪರವಾದ ಹಿಂದು ಮಂತ್ರಿಗಳಾದರು. ಅದು ಮಾತ್ರವಲ್ಲ, ೧೯೪೭ರ ಆಗಸ್ಟ್ ೧೪ರಂದು ಸ್ಥಾಪನೆಯಾದ ಪಾಕಿಸ್ತಾನದ ಕೇಂದ್ರ ಸರ್ಕಾರದಲ್ಲೂ ಮಂತ್ರಿಗಳಾಗಿದ್ದರು. ಅನಂತರ ಭಾರತಕ್ಕೆ ಅವರು ಹಿಂದಿರುಗಬೇಕಾಯಿತು.

೬. ೧೯೪೬ರಲ್ಲಿ ಲೇಖಕರು ಹೇಳಿರುವಂತೆ ಮಹದೇವ ದೇಸಾಯಿಯವರು ಮಹಾತ್ಮಾ ಗಾಂಧಿಯವರ ಕಾರ್ಯದರ್ಶಿಯಾಗಿರಲಿಲ್ಲ. ದೇಸಾಯರು ೧೯೪೨ರ ಆಗಸ್ಟಿನಲ್ಲಿ ಸೆರೆಮನೆಯಲ್ಲಿ ಕಾಲವಾದರು. ಆದ್ದರಿಂದ ಬಹುಶಃ ಪ್ಯಾರೇಲಾಲ್ ಅವರು ಮಹಾತ್ಮರ ಕಾರ್ಯದರ್ಶಿಯಾಗಿದ್ದರು ಎಂದು ಕಾಣುತ್ತದೆ.




ಲೇಖನದ ಆಶಯದ ಬಗ್ಗೆ ನನ್ನ ಸಂಪೂರ್ಣ ಸಹಮತವಿದೆ.

*ಬೆಂಗಳೂರು* ***ಎನ್. ಪಿ. ಶಂಕರನಾರಾಯಣ ರಾವ್***

ಗಾಂಧಿ-ಅಂಬೇಡ್ಕರ್ ಭೇಟಿ ಪ್ರಸಂಗ ಕುರಿತು ಪ್ರತಿಕ್ರಿಯೆ...

ಸಂವಿಧಾನ ರಚನಾ ಅಸೆಂಬ್ಲಿಗೆ ಚುನಾವಣೆ ನಡೆದದ್ದು ಯಾವಾಗ ? ಆ ಚುನಾವಣೆಯಲ್ಲಿ ಸೋತ ಅಂಬೇಡ್ಕರರನ್ನು ಭೇಟಿಯಾಗಬೇಕೆಂದು ಬಯಸಿದ ಗಾಂಧೀಜಿಯವರು ತಮ್ಮ ಕಾರ್ಯದರ್ಶಿ ಮಹಾದೇವ ದೇಸಾಯಿಯವರಿಗೆ ತಿಳಿಸಿದ್ದು ಯಾವಾಗ ?

ಮಹಾದೇವ ದೇಸಾಯಿಯವರು ೧೯೪೨ರ ಆಗಸ್ಟ್ ೧೫ರಂದು ಪುಣೆಯ ಆಗಾಖಾನ್ ಅರಮನೆ-ಸೆರೆಮನೆಯಲ್ಲಿ ನಿಧನರಾದರು. ಆಗಸ್ಟ್ ೧೬ರಂದು ಅರಮನೆಯ ಆವರಣದಲ್ಲೇ ಅವರ ಪಾರ್ಥಿವ ಶರೀರದ ಅಂತ್ಯಸಂಸ್ಕಾರ(ದಹನ) ನಡೆಯಿತು.

ಈ ಕುರಿತು ಲೇಖಕರು ಸ್ಪಷ್ಟಪಡಿಸಿದ್ದರೆ ಲೇಖನ ತರ್ಕಬದ್ಧವಾಗಿರುತ್ತಿತ್ತು.

*ಬೆಂಗಳೂರು* ***ಎ. ಆರ್. ನಾರಾಯಣ ಘಟ್ಟ***

### ದ್ರಾವಿಡರು ಯಾರು ?

ಏಪ್ರಿಲ್ ತಿಂಗಳ 'ಹೊಸತು' ಪತ್ರಿಕೆಯಲ್ಲಿ ಕಾ.ವೆಂ. ಶ್ರೀನಿವಾಸಮೂರ್ತಿಯವರ 'ಕನ್ನಡಿಗರು ದ್ರಾವಿಡರೇ ?' ಹೆಸರಿನ ಲೇಖನ ಪ್ರಕಟವಾಗಿದೆ. ಅದರಲ್ಲಿ ಕೆಲವೊಂದು ಸಾಮಾನ್ಯ ಉಲ್ಲೇಖಗಳನ್ನು ಕೊಡುತ್ತ ದ್ರಾವಿಡರೆಂದರೆ ತಮಿಳರೆಂದೂ ಕನ್ನಡಿಗರಲ್ಲವೆಂದೂ ತರ್ಕಿಸಲಾಗಿದೆ. ಇವುಗಳು ಸಾಮಾನ್ಯ ಉಲ್ಲೇಖಗಳೆಂದು ಹೇಳಿದುದೇಕೆಂದರೆ ಅಷ್ಟರಿಂದಲೇ ಯಾವ ನಿರ್ಣಯಕ್ಕೂ ಬರಲಾಗುವುದಿಲ್ಲ. ಅಷ್ಟು ಮಾತ್ರವಲ್ಲ, ಈಗಾಗಲೇ ಆ ಬಗೆಗೆ ಚರ್ಚಿಸಿದ ವಿದ್ವಾಂಸರು ಇದಕ್ಕಿಂತ ಪ್ರಮಾಣಬದ್ಧ ಸಾಕ್ಷ್ಯಾಧಾರಗಳನ್ನು ನೀಡಿಯೂ ಇದ್ದಾರೆ.

ಸೇಡಿಯಾಪು ಕೃಷ್ಣಭಟ್ ಅವರ 'ತಥ್ಯದರ್ಶನ' ಕೃತಿಯಲ್ಲಿ ದ್ರಾವಿಡ ಪದ ಮತ್ತು ಜನಗಳ ಬಗೆಗೆ ವಿಸ್ತೃತವಾದ ಚರ್ಚೆಯಿದೆ. (ಪು. ೪೭-೯೫). ಅದು ಕಾರಣವಾಗಿ, ಶ್ರೀನಿವಾಸಮೂರ್ತಿ ಮತ್ತು ರಾ. ಸತ್ಯನಾರಾಯಣ ಅವರ ಚರ್ಚೆಗಳು ಅದಕ್ಕಿಂತ ಮುಂದೆ ಹೋಗಿಲ್ಲ. ದ್ರಾವಿಡರು ತಮಿಳರೆಂದು ಇವರೀರ್ವರ ಅಭಿಪ್ರಾಯವಾದುದಾಗಿ, ಅದು ನಿರಾಧಾರವಾದ ತರ್ಕವೆಂಬುದನ್ನು 'ತಥ್ಯದರ್ಶನ'ದಲ್ಲಿ ಪ್ರತಿಪಾದಿಸಲಾಗಿದೆ. ಆಸಕ್ತರು ದಯಮಾಡಿ ಆ ಕೃತಿಯನ್ನು ಓದಬೇಕಾಗಿ ಬಿನ್ನಹ. ಅಲ್ಲಿಯ ವಿವರಗಳನ್ನು ಮತ್ತು ಇಲ್ಲಿ ಪುನರಾವರ್ತನೆ ಮಾಡಬೇಕಾಗಿಲ್ಲ. ಮುಖ್ಯವಾದುದೇನೆಂದರೆ ದ್ರವಿಡ, ತಮಿಳ ಎಂಬೀ ನಿಷ್ಪತ್ತಿಯೇ ನಿರಾಧಾರವಾದುದೆಂಬುದೇ ಈಗಿನ ನಿರ್ಣಯ. 'ದ್ರವಿಡವೆಂದರೆ ಕಾಡುಗಳಿಂದ ತುಂಬಿದ ಪ್ರದೇಶ'ವೆಂಬ ಅವರ ಅರ್ಥನಿಷ್ಪತ್ತಿ ಪ್ರಬಲವಾದ ಆಧಾರಗಳಿಂದ ಮಂಡಿತವಾದುದು.

ಆದರೆ ದ್ರಾವಿಡರ ಬಗೆಗಿನ ಶ್ರೀನಿವಾಸಮೂರ್ತಿಯವರ ಲೇಖನದಲ್ಲಿ ರಾಷ್ಟ್ರಗೀತೆಯನ್ನು ಕನ್ನಡಿಗರು ಹಾಡಬೇಕೇ ಎನ್ನುವ ಪ್ರಶ್ನೆಯೂ ಇದೆ. ದ್ರಾವಿಡರು ಕನ್ನಡಿಗರೇ ಎಂಬ ಪ್ರಶ್ನೆ ಬೇರೆ, ಕನ್ನಡಿಗರು ರಾಷ್ಟ್ರಗೀತೆಯನ್ನು ಹಾಡಬೇಕೇ ಎನ್ನುವ ಪ್ರಶ್ನೆ ಬೇರೆ. ಆದುದರಿಂದಲೇ ಇದೀಗ ಅದು ಸಂಶೋಧನೆಯ ಹೆಸರಲ್ಲಿ ನಡೆಯುವ ಕುಚೋದ್ಯ. ರಾಷ್ಟ್ರಗೀತೆಯ ಬಗೆಗೆ ಈಗಾಗಲೇ ಬೇರೆ ಬೇರೆ ಚರ್ಚೆಗಳು ನಡೆದು ಅವೆಲ್ಲವೂ ಒಂದು ನಿಲುಗಡೆಗೆ ಬಂದಿರುವ ಸಮಯದಲ್ಲಿ ಅನಗತ್ಯವಾಗಿ ಸಮಸ್ಯೆಯನ್ನುಂಟುಮಾಡುವುದು ರಾಷ್ಟ್ರಗೀತೆಗೆ ಅಪಚಾರ ಮಾಡುವುದಾಗಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಸೇಡಿಯಾಪು ಉಲ್ಲೇಖಿಸಿರದ, ರಾಬರ್ಟ್ ಕಾಲ್ಡ್‌ವೆಲ್ ಅವರು ನೀಡುವ ಇನ್ನೊಂದು ಆಧಾರವನ್ನು ಇಲ್ಲಿ ಓದುಗರ ಗಮನಕ್ಕೆ ತರುತ್ತೇನೆ. ಅದರಂತೆ ಸಂಸ್ಕೃತದಲ್ಲಿ, ಕುಮಾರಿಲ ಭಟ್ಟನು (ಕಾಲ ಸು.ಕ್ರಿ.ಶ. ಏಳನೇ ಶತಮಾನ) ನಿರ್ದೇಶಿಸುವ ಆಂಧ್ರ-ದ್ರಾವಿಡ ಭಾಷಾ ಎಂಬ ನಿರೂಪವೇ ಅತ್ಯಂತ ಪ್ರಾಚೀನವಾದುದು (ನೋಡಿ, ಕಾಲ್ಡ್‌ವೆಲ್ ಪು. ೪). ಇದರ ಪ್ರಕಾರ ಕೇರಳದವರು ಈ ವ್ಯಾಖ್ಯಾನಕ್ಕೆ ಹೊರಗಾಗುತ್ತಾರೆ. ಇದೇ ಪ್ರಶ್ನೆಯನ್ನು ತುಳುವರೂ ಎತ್ತಬಹುದಲ್ಲ? ಅರ್ಥಾತ್ ದ್ರಾವಿಡರೆಂದರೆ ತಮಿಳರೆಂಬ ನಿರ್ಣಯವೇ ದೋಷಪೂರ್ಣವಾದುದು. ಆ ಬಗೆಗೆ ಸೇಡಿಯಾಪು ಅವರ ನಿಲುವೇ ಈಗ ನಿರ್ಣಾಯಕವಾದುದು. ವಿದ್ವತ್ ವಲಯದಲ್ಲಿ, ಪ್ರಬಲವಾದ ಮಂಡನೆಯಾಗಿರುವಾಗ – ಅದನ್ನು ಅಲ್ಲಗಳೆಯುವ ಅಷ್ಟೇ ಪ್ರಬಲವಾದ ಇನ್ನೊಂದು ವಾದವನ್ನು ಮಂಡಿಸದ ಹೊರತು – ಅಲ್ಲಿಯವರೆಗೆ ಹಿಂದಿನ ವಾದವನ್ನೇ ಒಪ್ಪಿಕೊಳ್ಳುವುದು ಒಂದು ರೂಢಿಯೇ ಆಗಿದೆ. ಹಾಗಿರುವಾಗ ದ್ರಾವಿಡ ಮತ್ತು ರಾಷ್ಟ್ರಗೀತೆಯ ಬಗೆಗೆ ಮುಗಿದು ಹೋದ ಚರ್ಚೆಯನ್ನು ಚರ್ವಿತಚರ್ವಣಗೊಳಿಸುವ ಅಗತ್ಯ ಸರ್ವಥಾ ಇಲ್ಲವೆಂದು ಭಾವಿಸಬೇಕಾಗುತ್ತದೆ.

**ಮಾಧವ ಪೆರಾಜೆ**
ಅಧ್ಯಾಪಕ, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬, ಹೊಸಪೇಟೆ, ಬಳ್ಳಾರಿ ಜಿಲ್ಲೆ

*(೩ನೇ ಪುಟದಿಂದ)*

ಮಾತ್ರವೇ ಪ್ರತಿನಿಧಿಗಳೆಂದು ಹೇಳುವುದು ಅತಿ ಸರಳೀಕೃತವಾದ. ಅದನ್ನು ಒಪ್ಪುವಂತಿದ್ದರೆ ಕಾಶ್ಮೀರದಲ್ಲಿ ಸಮಸ್ಯೆಯೇ ಇರುತ್ತಿರಲಿಲ್ಲ. ಕಾಶ್ಮೀರದವರೇ ಆದ ಪಂಡಿತ ಸಮುದಾಯವನ್ನು ಕಾಶ್ಮೀರದಿಂದ ಹೊರಗೆ ಅಟ್ಟಲಾಗಿರುವುದು ಸರ್ವಥಾ ಖಂಡನೀಯ; ಆದರೆ ಅದನ್ನು ಬೇರೆಲ್ಲದರಿಂದ ಪ್ರತ್ಯೇಕಿಸಿ ನೋಡುವಂತಿಲ್ಲ. ಹಲವಾರು ಸಂಗತಿಗಳ ಪರಿಣಾಮವಾಗಿ ಕಾಶ್ಮೀರದಲ್ಲಿ ಕ್ಷೋಭೆ ಉಂಟಾಗಿದೆ. ಅವುಗಳ ಮೂಲಕ್ಕೆ ಹೋಗದೆ ಸುಮ್ಮನೆ ಮೈ ಪರಚಿಕೊಂಡರೆ ಏನು ಸಾಧಿಸಲಾದೀತು ! ನಾಗಾಲ್ಯಾಂಡ್, ಮಣಿಪುರ, ತ್ರಿಪುರ ಮುಂತಾದೆಡೆ ಇಸ್ಲಾಮಿ ಮೂಲಭೂತವಾದಿಗಳ ಪ್ರವೇಶವಿಲ್ಲದಿದ್ದರೂ ಅಲ್ಲೆಲ್ಲಾ ಏಕೆ ವಾತಾವರಣ ಹದಗೆಟ್ಟಿದೆಯೆಂಬುದಕ್ಕೆ ಆದ್ವಾನಿ ಬಣದ ಉತ್ತರವೇನು ? ಮತ್ತೆ ಯಾವುದೋ ಮತೀಯ ಶಕ್ತಿಗಳನ್ನು ದೂಷಿಸುವುದೆ ? ಕಳೆದ ಐವತ್ತೂರು ವರ್ಷಗಳಲ್ಲಿ ಸೈನ್ಯದ ತುಕಡಿಗಳ ಮೇಲೆ ಕಾಶ್ಮೀರದಲ್ಲಿ ಖರ್ಚು ಮಾಡಿರುವುದರ ಹತ್ತನೆಯ ಒಂದು ಭಾಗದಷ್ಟನ್ನು ನಾವು ಜನಸಾಮಾನ್ಯರ ಏಳಿಗೆಗಾಗಿ ವಿನಿಯೋಗ ಮಾಡಿದ್ದಿದ್ದರೆ ಅವರ ಪ್ರತ್ಯೇಕತಾ ಮನೋಭಾವ ಇಷ್ಟು ಅಗಾಧವಾಗಿ ಬೆಳೆದಿರುತ್ತಿತ್ತೆ ? ನಮಗೆ ಹುರಿಯತ್ ಹುರಿಯಾಳುಗಳು ಬೇಡ, ದೆಹಲಿಯ ಧೀಮಂತರೇ ಸಾಕು, ಎನ್ನುವ ಭಾವನೆ ಮೂಡುವಂತಾಗಲು ನಾವು ಮಾಡಿರುವುದೇನು ? ಆ ದಿಕ್ಕಿನಲ್ಲಿ ಆತ್ಮಾವಲೋಕನ ಮಾಡಿಕೊಳ್ಳದೆ ಗಡಿಯಾಚೆಯಿಂದ ಆತಂಕವಾದಿಗಳು ನುಸುಳಿ ಘೋರ ಸನ್ನಿವೇಶ ಸೃಷ್ಟಿಸಿದ್ದಾರೆಂದು ವಿಶ್ವಕ್ಕೆಲ್ಲಾ ಕೂಗಿ ಹೇಳಿದರೆ ಪ್ರತಿಕ್ರಿಯೆಯು ನಮ್ಮ ಪರವಾಗಿರುತ್ತದೆಂದು ಯಾವ ಖಾತ್ರಿಯೂ ಇಲ್ಲ. ಅಮೆರಿಕಾದ ಬೆಂಗಾವಲಿನಲ್ಲಿ ನಮ್ಮ ಆಕಾಂಕ್ಷೆ ಫಲಿಸುತ್ತದೆಂಬ ಭ್ರಮೆಯೇನಾದರೂ ಇದ್ದರೆ ಅದು ದೇಶದ್ರೋಹದ ಪ್ರಪಾತಕ್ಕೆ ನಮ್ಮನ್ನು ನೂಕುತ್ತದೆ.

ಅಂದರೆ, ಆತಂಕವಾದಿಗಳ ಹಿಂಸೆ - ದೌರ್ಜನ್ಯ - ಕೊಲೆ– ಸುಲಿಗೆ ಇವೆಲ್ಲಾ ಸಮರ್ಥನೀಯವೆಂದಾಗಲಿ, ಪಾಕಿಸ್ತಾನದ ನಿಲುವು ಹಿಮಾಲಯದಷ್ಟು ಬಿಳಿಯೆಂದಾಗಲಿ ಅರ್ಥವಲ್ಲ. ಭಾರತವು ಕಾಶ್ಮೀರದ ಜನರ ಭಕ್ಷಕನೆಂದು ಜರಿಯುವ ಹುರಿಯತ್ ಮುಂದಾಳುಗಳು, ಪಾಕಿಸ್ತಾನವು ಅವರ ರಕ್ಷಕನೆಂಬ ಮಾತನ್ನು ಕಾಶ್ಮೀರದ ಜನಕ್ಕೆ ಹೇಳಿದರೆ ಅವರು ಅದನ್ನು ಸ್ವೀಕರಿಸಿದ್ದಾರೆಯೆ ? ಇಲ್ಲವೆ ? – ಇದಕ್ಕೆ ಉತ್ತರ ಕೊಡಲಾಗದಂತಹ ಬಿಕ್ಕಟ್ಟು ಕಾಶ್ಮೀರದಲ್ಲಿದೆ. ಕರುಣಾನಿಧಿ ಸೋತದ್ದು ನೇರ ಪ್ರಜಾಪ್ರಭುತ್ವದ ಮಾರ್ಗದಲ್ಲಿ ಅಲ್ಲ ಎನ್ನುವ ಜಾರ್ಜ್ ಫರ್ನಾಂಡೀಸ್, ಕಾಶ್ಮೀರದ ಅಬ್ದುಲ್ಲಾ ಗೆಲ್ಲುವುದನ್ನು ಉಜ್ವಲ ಪ್ರಜಾಪ್ರಭುತ್ವದ ಕ್ರಮವೆಂದು ಬಣ್ಣಿಸಿದರೆ ಏನು ತಲೆ ಚಚ್ಚಿಕೊಳ್ಳಬೇಕು ! ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಸಹ ಸಾಧ್ಯವಾಗದಷ್ಟು ಪ್ರಕ್ಷುಬ್ಧ ಸನ್ನಿವೇಶ ಇಂದು ಕಾಶ್ಮೀರದಲ್ಲಿದೆ. ಅದನ್ನು ಸ್ವಲ್ಪವಾದರೂ ತಿಳಿಗೊಳಿಸಿ ಕ್ರಿಯಾತ್ಮಕವಾಗಿ ಮಧ್ಯಪ್ರವೇಶ ಮಾಡಲು ಭಾರತ ಸರ್ಕಾರಕ್ಕೆ ಆಗ್ರಾ ಸಭೆಯಿಂದ ಅನುವಾಗುವ ಸಾಧ್ಯತೆಯಿತ್ತು. ಆದರೆ ವಾಜಪೇಯಿಯವರ ಪಕ್ಷದ ಕೆಲವು ಮುಂದಾಳುಗಳು ಸುಷ್ಮಾ ಅವರನ್ನು ಬಳಸಿಕೊಂಡು ಅದಕ್ಕೆ ಕಲ್ಲು ಹಾಕಿದರು. ಭಾರತೀಯ ಸೈನ್ಯದ ತುಕಡಿಗಳ ಸಹಾಯದಿಂದ ಹಿಂದೊಮ್ಮೆ ಶ್ರೀನಗರದ ಲಾಲ್‌ಚೌಕದಲ್ಲಿ ಭಾಜಪದ ಅಂದಿನ ಅಧ್ಯಕ್ಷ ಮುರಳಿ ಮನೋಹರ ಜೋಶಿ ತ್ರಿವರ್ಣ ಧ್ವಜವನ್ನು ಹಾರಿಸಿ ಧೀರರೆನಿಸಿಕೊಂಡರು. ಆದರಿಂದ ಕಾಶ್ಮೀರದ ಯಾವೊಬ್ಬ ಪ್ರಜೆಯ ಮನಸ್ಸನ್ನೂ ಜೋಶಿ ಗೆಲ್ಲಲಿಲ್ಲ. ಆ ಘಟನೆಗಿಂತಲೂ ಕೀಳಾದ್ದು ಈ ತಿಂಗಳ ಘಟನೆ : ಸುಷ್ಮಾ ಅವರ ತಲೆಯ ಮೇಲೆ ಗೂಬೆ ಕೂರಿಸಿ ಆಗ್ರಾ ಸಭೆಯನ್ನು ನುಚ್ಚುನೂರುಗೊಳಿಸಿದ್ದು. ಭಾಜಪದ ಯಾವ ಬಣ ಇದನ್ನು ಮಾಡಿದ್ದೆಂದು ಜೋಶಿ - ಆದ್ವಾನಿ - ಸುದರ್ಶನ್ ಹೇಳಬಲ್ಲರೇನೋ. ಸ್ವಲ್ಪಮಟ್ಟಿಗೆ ಪಾಕಿಸ್ತಾನದ ವಿದೇಶಾಂಗ ಮಂತ್ರಿ ಸತ್ತಾರ್ ಸಹ ಹೇಳಬಲ್ಲರೆಂಬುದು ಸರ್ವವಿದಿತ.

ಇಷ್ಟಾಗಿಯೂ ನಮ್ಮೆರಡು ರಾಷ್ಟ್ರಗಳು ಮಾತುಕತೆಗಳನ್ನು ಮತ್ತೊಮ್ಮೆ ಆರಂಭಿಸುವ ಅಭಿಲಾಷೆಯನ್ನು ಎರಡೂ ರಾಷ್ಟ್ರಗಳ ಪ್ರಮುಖರು ವ್ಯಕ್ತಪಡಿಸಿದ್ದಾರೆ. ಘೋರಾರಣ್ಯದ ಕಾರ್ಗತ್ತಲೆಯಲ್ಲಿ ಇದೊಂದು ಅತಿಸ್ತುತ್ಯರ್ಹವಾದ ದೀವಿಗೆ. ಕಡೆಗೆ ಸುಕೃತದ ಹಾದಿಯನ್ನು ಇಂತಹ ದೀವಿಗೆಗಳಿಂದಲೇ ನಾವು ಕಂಡುಕೊಳ್ಳಬೇಕು. ವ್ಯರ್ಥ ಆಟಾಟೋಪಗಳು ಮತ್ತು ಮೂದಲಿಕೆಯ ಮಾತುಗಳು ನಮ್ಮನ್ನು ಮೇಲಕ್ಕೆತ್ತುವುದಿಲ್ಲ.

---

*(೫ನೇ ಪುಟದಿಂದ)*

ಆಯಿತೆಂದರು. ಅವರಿಗೆ ಬರೋಡ ಡೈನಮೈಟ್ ಪ್ರಕರಣವು ಜ್ಞಾಪಕದಲ್ಲಿ ಉಳಿಯುವುದಿಲ್ಲ. ಕರುಣಾನಿಧಿಗೆ ಜೈಲಿನಲ್ಲಿ ಹವಾನಿಯಂತ್ರಿತ ಕೊಠಡಿ ಕೊಡಲಿಲ್ಲವೆಂದು ನಮ್ಮ ಪತ್ರಿಕೆಗಳು ಹೌಹಾರಿದವು; ವಯಸ್ಸಾದವರು, ಹೃದಯದ ತೊಂದರೆ ಇರುವವರು ಆದ ಕರುಣಾನಿಧಿಗೆ ಹೀಗೆ ಮಾಡಬಹುದೇ ಎಂದು ಪರಿತಪಿಸಿದವು. ಇದೊಂದು ಕೌತುಕ : ಮುಖ್ಯಮಂತ್ರಿಯಾಗಿರಲು ವಯಸ್ಸು, ಹೃದಯ, ಎಲ್ಲಾ ಸಹಕರಿಸುತ್ತವೆ; ಜೈಲಿಗೆ ಹೋಗಬೇಕೆಂದಾಗ ಕೂಡಲೆ ಆಸ್ಪತ್ರೆಗೆ ದಾಖಲಾಗುವ ಅಗತ್ಯ ಹುಟ್ಟಿಕೊಳ್ಳುತ್ತದೆ. ಕ್ರಿಕೆಟ್ ದಾಂಡಿಗ ಪ್ರಭಾಕರನಿಗೂ ಇದೇ ಬೇನೆ. ಚುರುಕಾಗಿ ಓಡಾಡಿ ಹಣ ಮಾಡುತ್ತಾನೆ. ಆದರೆ ಬಂಧನಕ್ಕೊಳಗಾದ ಮಾರನೆಯ ನಿಮಿಷದಲ್ಲಿ ಹೃದಯರೋಗ ಕಾಣಿಸಿಕೊಂಡು ಆಸ್ಪತ್ರೆಗೆ ಹೋಗುತ್ತಾನೆ ! ಟಿ.ವಿ. ಕ್ಯಾಮೆರಾಗಳು, ಜನ, ಎಲ್ಲಾ ಸೇರುವವರೆಗೆ ಕರುಣಾನಿಧಿ ಬಂಧನಕ್ಕೊಳಗಾಗಿ ಮನೆಯಿಂದ ಹೊರ ಬರುವುದಿಲ್ಲ; ಆಮೇಲೆ, ಬಂಧಿಸಿದ ಪ್ರಕರಣವನ್ನು ದೊಡ್ಡದು ಮಾಡಿ ಅಬ್ಬರ ಮಾಡುತ್ತಾರೆ. ಸುಮ್ಮನೆ ಜೈಲಿಗೆ ಹೋಗಿ ನಂತರ ನ್ಯಾಯಾಲಯದಲ್ಲಿ ಹೋರಾಟ ನಡೆಸಲು ಆತ ಸಿದ್ಧನಿಲ್ಲ. ಇತ್ತೀಚೆಗಷ್ಟೇ ಮುಲಾಯಂಸಿಂಗ್ ಯಾದವ್‌ರವರನ್ನು ಮಧ್ಯರಾತ್ರಿಯಲ್ಲಿ ಬಂಧಿಸಿದಾಗ ನಮ್ಮ ಮಾಧ್ಯಮಗಳು ಕಿರುಚಾಡಲಿಲ್ಲ. ನಾಳೆ ಆತ ಮುಖ್ಯಮಂತ್ರಿಯಾದರೆ ಆದ್ವಾನಿ - ಜೋಶಿ- ಉಮಾ ಮುಂತಾದವರನ್ನು ಬಂಧಿಸುವ ಕತೆ. ಇಷ್ಟೇ ರಾಜಕೀಯ. ವಾಜಪೇಯಿಯವರ ಸಂಮಿಶ್ರ ಸರ್ಕಾರದಲ್ಲಿರುವವರು ಶ್ರೇಷ್ಠರು, ನ್ಯಾಯವಾದಿಗಳು, ಪ್ರಜಾಪ್ರಭುತ್ವದ ರಕ್ಷಕರು; ಇತರರು ಬರ್ಬರ ಯುಗದ ಜನ,– ಇದು ಸಾಮಾನ್ಯವಾಗಿ ನಮ್ಮ ಮಾಧ್ಯಮಗಳ ಧೋರಣೆ. ಜಯಲಲಿತಾ-ಲಾಲುಪ್ರಸಾದ್ ಮುಂತಾದವರು ಭ್ರಷ್ಟರು; ಯು.ಟಿ.ಐ., ಬಾಲ್ಕೋ, ಏರ್‌ಲೈನ್ಸ್ ಮುಂತಾದವನ್ನೆಲ್ಲಾ ನುಂಗುವ ಹೆಗ್ಗಣಗಳು ದೈವಾಂಶ ಸಂಭೂತರು. ಅರುಣ್ ಶೌರಿ - ಯಶವಂತ ಸಿಹ್ನಾ ಬಹಳ ಸಂಭಾವಿತರು ! ಚುನಾವಣೆಯಲ್ಲಿ ಆರಿಸಿಬರುವುದು ಪ್ರತೀಕಾರವನ್ನು ಹರಿಯಬಿಡುವುದಕ್ಕೋ, ರಾಜ್ಯಗಳಲ್ಲಿ ಕ್ರಿಯಾತ್ಮಕವಾಗಿ ಅಭಿವೃದ್ಧಿಗೆ ಗಮನಕೊಡುವುದಕ್ಕೋ ? ಪ್ರಧಾನಿಯಾಗುವುದು, ಸಮ್ಮಿಶ್ರ ಸರ್ಕಾರ ನಡೆಸುವುದು ದೇಶದ ಸ್ವಾತಂತ್ರ್ಯ-ಸಾರ್ವಭೌಮತ್ವಗಳನ್ನು ಕಾಪಾಡಿ ವರ್ಧಿಸುವುದಕ್ಕೋ ಅಥವಾ ಪರಭಾರೆ ಮಾಡಿ ಸ್ವಾತಂತ್ರ್ಯ ಹೋರಾಟದ ದಿನಗಳ ಕನಸುಗಳನ್ನೆಲ್ಲಾ ನುಚ್ಚುನೂರು ಮಾಡುವುದಕ್ಕೋ ? ನಮ್ಮ ಸಾಮಾಜಿಕ-ಆರ್ಥಿಕ ಬೇರುಗಳನ್ನು ಬಲಪಡಿಸುವುದು ಆದ್ಯ ಕರ್ತವ್ಯವೋ ಅಥವಾ ಜನಕ್ಕೆ ಆಗಾಗ್ಗೆ ರಾಮಮಂದಿರದ ಅಫೀಮನ್ನು ತಿನ್ನಿಸುತ್ತಾ ಮತೀಯ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿ ದೇಶವನ್ನು ಹೋಳು ಮಾಡುವುದು ಪ್ರಸ್ತುತ ಜವಾಬ್ದಾರಿಯೋ ?

- ಕೆಂಪುಕೋಟೆಯ ಮೇಲೆ ನಿಂತು ಹುರುಪಿನಿಂದ ಸ್ವಾತಂತ್ರ್ಯದಿನದ ಭೀಷಣ ಭಾಷಣ ಮಾಡುವಾಗ ವಾಜಪೇಯಿಯವರ ಮನಸ್ಸಿನಲ್ಲಿ ಈ ಪ್ರಶ್ನೆಗಳೆಲ್ಲಾ ಏಳಲೆಂದು ಆಶಿಸೋಣ. ಹಾಗೆ ಈ ಪ್ರಶ್ನೆಗಳು ಅವರನ್ನು ಬಾಧಿಸದಿದ್ದಲ್ಲಿ ಜನರ ಸಾಮೂಹಿಕ ಮಧ್ಯ ಪ್ರವೇಶದಿಂದ ಈ ವಾಜಪೇಯಿ ಸಂಮಿಶ್ರ ಸರ್ಕಾರವನ್ನು ಕಿತ್ತುಹಾಕಿ ಚಾರಿತ್ರಿಕವಾದ ನಮ್ಮ ವಸಾಹತುಶಾಹಿ ವಿರೋಧಿ ಹೋರಾಟದ ಮೌಲ್ಯಗಳನ್ನು, ಆಕಾಂಕ್ಷೆಗಳನ್ನು ಜೋಪಾನವಾಗಿ ಭದ್ರಪಡಿಸಿಕೊಳ್ಳೋಣ ಮತ್ತು ಅವನ್ನು ಕಾರ್ಯಗತಗೊಳಿಸುವ ದಿಕ್ಕಿನಲ್ಲಿ ನೀತಿ-ಕ್ರಿಯೆಗಳನ್ನು ರೂಪಿಸೋಣ.



# ಅರಿವಿಲ್ಲದೇ ತಳವೂರಿರುವ ಮರೆವು – ಸಂಸ್ಕೃತಿ ವಿಸ್ಮರಣೆ

ನನ್ನ ಹತ್ತಿರದ ಬಂಧುಗಳ ಮಗನೊಬ್ಬನ ಸ್ಥಿತಿ ಇದು. ಇತ್ತೀಚಿನ ಜಾಗತೀಕರಣದ ಫಲವಾದ ತಂತ್ರಜ್ಞಾನ ವಿಸ್ತರಣೆಯ ಫಲವಾಗಿ ತುಂಬ ಅನುಕೂಲ ಪಡೆದಿರುವ ಜನಗಳ ಗುಂಪಿನಲ್ಲಿ ಈ ಕುಟುಂಬವೂ ಇದೆ. ಸಾಫ್ಟ್‌ವೇರ್ ತಂತ್ರಜ್ಞಾನ ಎನ್ನುವ ಮಾಯಾ ಕೀಲು ಕುದುರೆ ಏರಿ ಕೊಂಡು ಈ ಯುವಕ ಫ್ರಾನ್ಸ್ ದೇಶಕ್ಕೆ ಹಾರಿದ್ದಾನೆ. ಬೇಗ ಶ್ರೀಮಂತನಾಗಿಬಿಡುವ ಹಗಲುಗನಸಲ್ಲಿ ತನ್ನ ಯೌವನದ ಹಗಲುಗಳನ್ನೂ ರಾತ್ರಿಗಳನ್ನೂ ಒಂದು ಬಹುರಾಷ್ಟ್ರೀಯ ಕಂಪನಿಗೆ ಒತ್ತೆಯಿಟ್ಟು ದುಡಿಯುತ್ತಿದ್ದಾನೆ. ಫ್ರಾನ್ಸ್‌ನ ಒಂದು ಚಿಕ್ಕ ಊರಲ್ಲಿ ಆ ಕಂಪೆನಿಯ ಶಾಖೆಯಲ್ಲಿ ಇವನು ದುಡಿಯಬೇಕಿದೆ. ಅವನ ಬಹುದೊಡ್ಡ ಕೊರಗು ಇದು: ''ತನ್ನ ಈ ಊರಲ್ಲಿ ಎಲ್ಲೂ ಇಂಗ್ಲಿಷ್‌ನ ಸೊಲ್ಲು ಕೂಡಾ ಇಲ್ಲ! ಇಡೀ ಊರಲ್ಲಿ ಒಂದು ಬುಕ್ ಸ್ಟಾಲಿನಲ್ಲೂ ಇಂಗ್ಲಿಷ್ ಪುಸ್ತಕಗಳು ಸಿಗುವುದಿಲ್ಲ! ತನ್ನ ಡೆಸ್ಕ್‌ನ ಮೇಲಿರುವ ಕಂಪ್ಯೂಟರ್ ಕೀ ಬೋರ್ಡ್ ಕೂಡ ಬರೀ ಫ್ರೆಂಚ್ ಬರೆಯಲು ರೂಪುಗೊಂಡಂಥದು ! ಥೂ, ಈ ಫ್ರೆಂಚ್ ಎಂಥ ದರಿದ್ರ ಕಷ್ಟದ ಭಾಷೆ ! ಹಾಳಾದ್ದು ಎಲ್ಲೆಲ್ಲೂ ಫ್ರೆಂಚ್ ! ಚೂರೂ ಇಂಗ್ಲಿಷು ತಿಳಿಯದ ಇವರೆಂಥ ಜನರು !''

ಪರದೇಶದಲ್ಲಿ ಪರಭಾಷಿಗರೊಂದಿಗೆ ಆ ಭಾಷೆಯ ಪರಿಚಯವಿಲ್ಲದೆ ಎದುರಾಗುವ ಏಕಾಕಿತನ, ತಬ್ಬಲಿತನ ಸಹಜವೇ. ಆದರೆ ಈ ಹುಡುಗ ಆ ತಬ್ಬಲಿತನದ ಹತಾಶೆಯಲ್ಲಿ ಏನನ್ನು ಹಂಬಲಿಸುತ್ತಿದ್ದಾನೆ ? ಅದು ತನ್ನ ಮಾತೃಭಾಷೆಯ ತನ್ನ ಹುಟ್ಟೂರಿನ ಹಂಬಲವಲ್ಲ ! ಅವನಿಗೆ ತನಗೊಂದು ಮಾತೃಭಾಷೆ ಇತ್ತು ಎನ್ನುವುದೇ ಈಗ ನೆನಪಿರಲಾರದು. ಬದಲಾಗಿ ನರ್ಸರಿಯಿಂದ ಈವರೆಗಿನ ಅವನ ಕಲಿಕೆ ಎಲ್ಲ ಇಂಗ್ಲಿಷಿನಲ್ಲೇ. ಅಪ್ಪ-ಅಮ್ಮನ ಜೊತೆಗೆ ಮನೆಯಲ್ಲೂ ಇಂಗ್ಲಿಷೇ ಆಡಿ ಬೆಳೆದಿದ್ದಾನೆ.

ಅವನ ತಂದೆ ತಾಯಿಯರು ಎಂದೂ ಅವನಿಗೆ ನಮ್ಮ ದೇಶ ಶತಮಾನಗಳ ಕಾಲ ಬ್ರಿಟಿಷರ ಗುಲಾಮಗಿರಿಗೆ ಬದ್ಧಿದ್ದರಿಂದ ಇಂಗ್ಲಿಷು ನಮ್ಮಲ್ಲಿ ಬೇರೂರಿದೆ ಎಂಬುದನ್ನು ತಿಳಿಯ ಹೇಳಿದವರಲ್ಲ. ಸ್ವತಃ ಅವರೇ, ಇಂಗ್ಲಿಷ್ ಕಲಿಕೆ ಎನ್ನುವುದು ಈ ನಾಡಿನಲ್ಲಿ ಉದ್ಯೋಗ ಗಳಿಕೆಗೆ, ಸಂಪತ್ತು ಬೆಳೆಸಲಿಕ್ಕೆ, ಸಾಮಾಜಿಕ ಪ್ರತಿಷ್ಠೆಗೆ ಎಷ್ಟು ಉಪಯುಕ್ತ ಎಂದು ಅನುಭವದಿಂದ ಕಂಡುಕೊಂಡಿದ್ದವರು. ಅದೇ ಸೂತ್ರದಲ್ಲಿ ಮಕ್ಕಳನ್ನೂ 'ಮುಂದಕ್ಕೆ ತಂದ'ವರು !

ಭಾರತ ಸ್ವತಂತ್ರವಾಗಿರಬಹುದು. ಆದರೆ ಆಳುತ್ತ ಬಂದ ಎಲ್ಲ ಬಗೆಯ ಸರ್ಕಾರಗಳೂ ಜನರ ತಲೆಗಳೂ ಇಂಗ್ಲಿಷಿಗೆ ಮಾರಿಕೊಂಡ ಗುಲಾಮಿ ಭಾರತೀಯ ಸಂಸ್ಕೃತಿಯ ತಲೆಗಳೇ. ಆದ್ದರಿಂದ ಇಂಗ್ಲಿಷ್ 'ಅಂತರ ರಾಷ್ಟ್ರೀಯ ಭಾಷೆ' ಎಂದು ಈ ದೇಶದಲ್ಲಿ ಪ್ರಗತಿಯ ಬಲು ದೊಡ್ಡ ಸಾಧನ ಹಾಗೂ ಮಾನದಂಡವಾಗಿ, ಶಿಕ್ಷಣದ ಬೇರು, ಕಾಂಡ, ಚಿಗುರು, ಹೂವು, ಹಣ್ಣು ಎಲ್ಲವೂ ಆಗಿ ಕೂತಿರುವುದು ಸಾಧ್ಯವಾಗಿದೆ ! ಬ್ರಿಟನ್ – ಗ್ರೇಟ್ ಬ್ರಿಟನ್ ಕೇವಲ ಒಂದು ಚಿಕ್ಕ ದ್ವೀಪ – ಅಮೆರಿಕಾ ಸಂಯುಕ್ತ ಸಂಸ್ಥಾನ, ಆಸ್ಟ್ರೇಲಿಯಾ ಬಿಟ್ಟರೆ ದಕ್ಷಿಣ ಆಫ್ರಿಕಾ, ಏಷ್ಯಾದಲ್ಲಿ ಬ್ರಿಟಿಷರ ವಸಾಹತುಗಳಾದ ಭಾರತದಂಥ ಕೆಲವೇ ಬಡದೇಶಗಳು ಮಾತ್ರ ಇಂಗ್ಲಿಷನ್ನು 'ಅಂತರರಾಷ್ಟ್ರೀಯ ಭಾಷೆ' ಎಂದು ನಂಬುತ್ತವೆ. ಜಗತ್ತಿನಲ್ಲಿ ನಮಗೆ ಯಾವ ಹೊರಗಿನ ಮಾಹಿತಿ ಬರಬೇಕಾದರೂ ಕೇವಲ ಇಂಗ್ಲಿಷಿನ ಮೂಲಕ ಬರಬೇಕಾಗಿರುವುದರಿಂದ ಬ್ರಿಟಿಷರ 'ಲಂಡನ್' ಮತ್ತು 'ಅಮೆರಿಕಾ'ದಂಥ ಸಾಂಸ್ಕೃತಿಕ ಮಾದರಿಗಳಷ್ಟೇ ನಮ್ಮ ಮಟ್ಟಿಗೆ 'ವಿಶ್ವ'ವಾಗಿ ಕಾಣಿಸುತ್ತವೆ. ತಲೆ ತಲಾಂತರಗಳಿಂದ ಭಾರತೀಯರು ತಮ್ಮ ಮಕ್ಕಳಿಗೆ ಇಷ್ಟೇ ತಿಳಿವಳಿಕೆ ನೀಡುತ್ತಾ ಬೆಳೆಸುತ್ತಾ ಬಂದಿದ್ದಾರೆ. ಆದರೆ, ನಮ್ಮ ಶಿಕ್ಷಣವಾಗಲಿ, ಮೊದಲ ಪಾಠಶಾಲೆ ಅನ್ನಿಸಿಕೊಳ್ಳುವ ಕುಟುಂಬವಾಗಲಿ, ಪ್ರಪಂಚದಲ್ಲಿ ಬೇರೆ ಬೇರೆ ದೇಶಗಳ ಭಾಷೆ, ಸಂಸ್ಕೃತಿ, ಬದುಕಿನ ಆದ್ಯತೆಗಳು ಇಂಗ್ಲಿಷರದಕ್ಕಿಂತ ಭಿನ್ನಭಿನ್ನವಾದಂಥವು ಎಂಬ ಸಾಮಾನ್ಯ ಜ್ಞಾನವನ್ನೂ ಯುವಪೀಳಿಗೆಗೆ ಕೊಡಲಾರವು. ಆದ್ದರಿಂದಲೇ ನನ್ನ ಬಂಧು ಫ್ರಾನ್ಸ್‌ನಲ್ಲಿ 'ದರಿದ್ರ ಬರೀ ಫ್ರೆಂಚ್' ಎಂದು ಕೊರಗುವುದರ ಹಿಂದೆ ಲಕ್ಷಾಂತರ ಅನಿವಾಸಿ ಭಾರತೀಯ ಯುವಜನರ ಕೊರಗಿನ ಧ್ವನಿ ಆಲಿಸಬಹುದಾಗಿದೆ.

ರಷ್ಯಾ, ಫ್ರಾನ್ಸ್, ಜರ್ಮನಿ, ಇಟಲಿಗಳು ಹಾಗಿರಲಿ, ಸ್ವೀಡನ್, ಡೆನ್ಮಾರ್ಕ್‌ಗಳಂಥ ಅತ್ಯಂತ ಪುಟ್ಟ ದೇಶಗಳಲ್ಲಿ ಕೂಡ ಜನರು ಕೇವಲ ತಮ್ಮ ತಮ್ಮ ಮಾತೃಭಾಷೆಯಲ್ಲೇ ಎಲ್ಲಾ ವ್ಯವಹಾರ, ಶಿಕ್ಷಣ, ವಿಜ್ಞಾನ, ತಂತ್ರಜ್ಞಾನ ಪಡೆದೂ ಅಷ್ಟೊಂದು ಅಭಿವೃದ್ಧಿ ಸಾಧಿಸಿದ್ದಾರೆ. ಅವರಾರಿಗೂ ತಮ್ಮ ಪ್ರಗತಿಗೆ ಇಂಗ್ಲಿಷು ಬೇಕಿಲ್ಲ ಎನ್ನುವುದು ಪಾಪ ನಮ್ಮ ಹುಡುಗನಂಥವರಿಗೆ ಅರಿವಿಲ್ಲ. ಆ ದೇಶಗಳಲ್ಲಿ ಇಂಗ್ಲಿಷು ಆಡಲೇಬೇಕು ಎನ್ನುವುದು ಅನಿವಾರ್ಯವಾದಲ್ಲಿ, ಅದು ಗೊತ್ತಿರುವವರು ಮಾತ್ರ, ಅದೂ ತಾತ್ಕಾಲಿಕ ಮಾತುಕತೆಗಾಗಿ ಬಳಸಬಲ್ಲರು. ಅಂಥವರು ಅಕಾಡೆಮಿಕ್ ವಲಯಗಳಲ್ಲಿ ಮಾತ್ರ ಸಿಗಬಹುದು. ಸಾಮಾನ್ಯರಿಗೆ ಅಂಥ ಯಾವ ಮುಲಾಜೂ ಇಂಗ್ಲಿಷಿನ ಬಗ್ಗೆ ಇಲ್ಲ ಅನ್ನುವುದು ಫ್ರಾನ್ಸ್‌ನ ಯಾವುದೋ ಹಳ್ಳಿಯಲ್ಲಿ ದುಡಿಯುತ್ತಿರುವ ನನ್ನ ಬಂಧುವಿಗೆ ಈಗೀಗ ಅರಿವು ಮೂಡುತ್ತಿದೆ. ಆದರೆ ಇಂಗ್ಲಿಷಿನಲ್ಲೇ ಉಸಿರಾಡಿ, ಊಟ ಮಾಡಿ, ಇಂಗ್ಲಿಷಿನಲ್ಲೇ ನಕ್ಕು-ಅತ್ತು ಆಡಿ ಬೆಳೆದ ಈ ಭಾರತೀಯ ಭಾವಿ ಪ್ರಜೆಗೆ ತನ್ನದೊಂದು ತಾಯಿನುಡಿ ಇತ್ತು ಎಂಬುದೇ ಗೊತ್ತಿಲ್ಲ. ಹಾಗಾಗಿ ಫ್ರೆಂಚರ ಸ್ವಭಾಷಾಭಿಮಾನ ಇವನಿಗೆ ಅರ್ಥವಾಗದ ಸಂಗತಿ. ಹಾಗಾಗಿ ಇವನು ಫ್ರಾನ್ಸಿನಿಂದ ಹಣ ಗಳಿಸಿದರೂ ಇವನ ನಿಷ್ಠೆ ಇಂಡಿಯಾಕ್ಕೆ, ಕರ್ನಾಟಕಕ್ಕೆ, ಕನ್ನಡಕ್ಕೆ ಖಂಡಿತಾ ಅಲ್ಲ. ಅದು ಮಿಡಿಯುವುದು ಯಜಮಾನರಾಗಿ ಎಂದೋ ಆಳಿ ಹೋದವರ ಪಾಪದ ದೂಳಿಗಾಗಿ ! ಜೈ ಕರ್ನಾಟಕ 'ಮಾತೇ', ಜೈ ಭಾರತ 'ಮಾತೇ' !


ಡಾ|| ಬಿ. ಎನ್. ಸುಮಿತ್ರಾಬಾಯಿ
೫೦೯, ೧೬ನೇ ಮುಖ್ಯ ರಸ್ತೆ, ಬನಶಂಕರಿ ೧ನೇ ಹಂತ
ಶ್ರೀನಗರ, ಬೆಂಗಳೂರು-೫೬೦ ೦೫೦


## ಮ್ಯಾಚ್ ಫಿಕ್ಸರನಿಗೆ....

(ಶ್ರೀ ಗೋಪಾಲಕೃಷ್ಣ ಅಡಿಗರ ಕ್ಷಮೆ ಕೋರಿ)

ಯಾವ ಬುಕ್ಕಿಯ ಧನವು ಕರೆಯಿತು ಪೆವಿಲಿಯನ್‌ಗೆ ನಿನ್ನನು ?
ಯಾವ ಬೆಟ್ಟಿಂಗ್ ಹೇಗೆ ಕಸಿಯಿತು ನಿನ್ನ ಟೀಮಿನ ಗೆಲುವನು ?
ಹಿಡಿದ ಬ್ಯಾಟು, ತಲೆಯ ಹ್ಯಾಟು, ತೊಟ್ಟ ಶರ್ಟು, ಪ್ಯಾಂಟು, ಬೂಟು
ಯಾವ ಜಾಗವೂ ಖಾಲಿಯಿಲ್ಲ ತುಂಬಿಕೊಂಡಿದೆ ಜಾಹೀರಾತು
ಫ್ಲಾಟು, ಕಾರು, ಬ್ಯಾಂಕ್ ಲಾಕರು, ಪಂಚತಾರಾ ಹೋಟೆಲ್ಲು
ದೇಶವಿದೇಶದಿ ಹೆಸರು ಗಿಫ್ಟು ದುಡ್ಡೇ ದುಡ್ಡು ಎಲ್ಲೆಲ್ಲು
ಏನಿದೇನಿದು ಹಣದ ರಾಶಿಯು, ಸೆಲ್‌ಫೋನಿನ ಸಂದೇಶವು ?
ಇಷ್ಟು ಜನರ ಟೀಮಿನಲ್ಲಿ ನಿನಗೆ ಸಿಕ್ಕವರೆಷ್ಟವು ?
ಸಪ್ತ ಸಾಗರದಾಚೆಯೆಲ್ಲೋ ಗುಪ್ತ ಅಕೌಂಟೊಂದಿದೆ
ತಪ್ತ ಮನಗಳ ಜ್ವಲಿಸಿ ಹೀರಿದ ಧನದ ರಾಶಿ ಅಲ್ಲಿದೆ
ಸನ್ನೆಯಲಡಗಿದ ಡೀಲಿನಂತೆ ಎಲ್ಲೋ ಅಡಗಿದೆ ಸತ್ಯವು
ಚಲನವಲನ ಆಸ್ತಿ ತನಿಖೆಯು ಹೊರತರುವುದು ಎಲ್ಲವು
ಯಾವ ಆಮಿಷ ಕರೆದೊಯ್ಯಿತು ಡೀಲಿನೆಡೆಗೆ ನಿನ್ನನು ?
ಯಾವ ದಾಹ ಕುರುಡು ಮಾಡಿತು ನಿನ್ನ ವಿವೇಕದ ಕಣ್ಣನು ?





ಎ. ನಾಗರಾಜ ಶೆಣೈ
೨೮೬೦, 'ಶಿವಕೃಪಾ', ಮೊದಲನೆ ಮಹಡಿ, ೧೪ನೇ 'ಡಿ' ಮುಖ್ಯರಸ್ತೆ
೮ನೇ 'ಇ' ಅಡ್ಡರಸ್ತೆ, ಅತ್ತಿಗುಪ್ಪೆ, ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೦೪೦

# ಹೂಳೆತ್ತುವುದಕ್ಕೂ ಇತರರ ಹಂಗೆ?

ವಿಶ್ವಬ್ಯಾಂಕಿನಿಂದ ಆರ್ಥಿಕ ನೆರವು ಪಡೆಯುವ ಸಂಬಂಧದಲ್ಲಿ ಸಣ್ಣ ಕೆರೆಗಳ ಜೀರ್ಣೋದ್ಧಾರಕ್ಕಾಗಿ ಕರ್ನಾಟಕ ಸರಕಾರ ಕೇಂದ್ರ ಸರಕಾರದ ಜಲ ಸಂಪನ್ಮೂಲ ಇಲಾಖೆಗೆ ಸಲ್ಲಿಸಿರುವ ಮನವಿಯ ಬಗ್ಗೆ ಶ್ರೀ ಭವಾನಿ ಶಂಕರ್ ಅವರ ಅಭಿಪ್ರಾಯಗಳು:

ಹಣದ ಅಭಾವದಿಂದ ಕಳೆದ ಹಲವಾರು ವರುಷಗಳಿಂದ ಅಸಡ್ಡೆಗೊಳಗಾಗಿರುವ ರಾಜ್ಯದ ಕೆರೆಗಳ ಜೀರ್ಣೋದ್ಧಾರದ ಬಗ್ಗೆ ತನ್ನ ನ್ಯಾಯಬದ್ಧ ಬೇಡಿಕೆಗಳನ್ನು ಪರಿಣಾಮಕಾರಿಯಾಗಿ ಒತ್ತಾಯಿಸಲು ರಾಜ್ಯ ಸರಕಾರ ವಿಫಲವಾಗಿದೆ. ಈಗಾಗಲೇ ಕಾವೇರಿ ನದಿಯ ವಿವಾದ ವಿರುವುದರಿಂದ ಅಲ್ಲಿನ ಜಲಾನಯನ ಪ್ರದೇಶದ ಕೆರೆಗಳ ಜೀರ್ಣೋದ್ಧಾರದ ಕಾಮಗಾರಿಯನ್ನು ಕೈಬಿಡಬೇಕೆಂದು ಕೇಂದ್ರ ಜಲ ಸಂಪನ್ಮೂಲ ಇಲಾಖೆಯು ಮಾಡಿರುವ ಸಲಹೆಗಳಿಗೆ ವಿನಮ್ರವಾಗಿ ಮಣಿದದ್ದೇ ಅಲ್ಲದೆ ತಮಿಳುನಾಡಿನ ಅಸಂಬದ್ಧ ಆಕ್ಷೇಪಣೆಗಳನ್ನು ಅಲ್ಲಗಳೆಯುವುದರಲ್ಲೂ ಸರಕಾರ ಎಡವಿದೆ. ಕೆರೆಗಳ ದುರಸ್ತಿ ಮತ್ತು ಅವುಗಳ ಜೀರ್ಣೋದ್ಧಾರ ಯೋಜನಾ ಕಾರ್ಯಗಳು ರಾಜ್ಯ ಸರಕಾರದ ಪರಿಧಿಯಲ್ಲಿಯೇ ಬರುತ್ತದೆ. ಏನಾದರೂ ವಿವಾದವಿದ್ದ ಪಕ್ಷದಲ್ಲಿ ಕೇಂದ್ರ ಸರಕಾರ ಎಲ್ಲ ಅಂಶಗಳನ್ನೂ ಸಮಗ್ರವಾಗಿ ಪರಿಶೀಲಿಸಿ ಸಂಬಂಧಪಟ್ಟ ರಾಜ್ಯಗಳಿಗೆ ನ್ಯಾಯಯುತವಾದ ಸಲಹೆಗಳನ್ನು ನೀಡಬಹುದಷ್ಟೆ. ಸರಕಾರದ ಮನವಿಯಲ್ಲಿ ರಾಜ್ಯದ ಹಿತಾಸಕ್ತಿಗಳಿಗೆ ವಿರುದ್ಧವಾಗಿರುವ ಕೆಲವು ಅಂಶಗಳು ಹಾಗೂ ನ್ಯೂನತೆಗಳು

**ಬಿ. ಎಸ್. ಭವಾನಿಶಂಕರ್**

ಯಾವುವು ಎಂಬುದನ್ನು ಹೀಗೆ ಗುರುತಿಸಬಹುದು:

೧. ಕೆರೆಗಳಿಂದ ನೀರಾವರಿಗಾಗಿ ಒದಗುವ ಪ್ರದೇಶ ಅಥವಾ ಅಚ್ಚುಕಟ್ಟನ್ನು ಮನವಿಯಲ್ಲಿ ನಿರ್ದಿಷ್ಟವಾಗಿ ಗುರುತಿಸುವ ಅವಶ್ಯಕತೆಯೇ ಇರಲಿಲ್ಲ. ಏಕೆಂದರೆ, ಕಳೆದ ಐದು ದಶಕಗಳಲ್ಲಿ ಕೃಷಿ ಹಾಗೂ ನೀರಾವರಿಯ ವಿಧಾನಗಳಲ್ಲಿ ತಾಂತ್ರಿಕವಾಗಿ ಗಣನೀಯವಾದ ಬದಲಾವಣೆಗಳು ರೂಢಿಗೆ ಬಂದಿರುವ ಇಂದಿನ ಸಂದರ್ಭದಲ್ಲಿ ಕೆರೆಗಳ ನೀರಿನ ಮೊತ್ತವನ್ನು ನಿರ್ಧರಿಸಲು ಆಯಾ ಪ್ರದೇಶ ಅಥವಾ ಅಚ್ಚುಕಟ್ಟನ್ನು ಆಧಾರವಾಗಿಟ್ಟುಕೊಳ್ಳುವುದು ಸಮಂಜಸವಲ್ಲ. ಗೊತ್ತಾದ ನಿಗದಿಗನುಸಾರವಾಗಿ ನೀರಿನ ಬಳಕೆ, ಹೊಲಗದ್ದೆಗಳನ್ನು ಮಟ್ಟಸ ಮಾಡುವಲ್ಲಿನ ತಾಂತ್ರಿಕತೆ, ಸೂಕ್ತವಾದ ಹಾಗೂ ವಿವಿಧ ತಳಿಯ ಬೆಳೆ, ಇವುಗಳಿಂದ ಬಳಸುವ ನೀರಿನ ಪ್ರಮಾಣದಲ್ಲಿ ಉಳಿತಾಯವಾಗುವುದಲ್ಲದೆ ಕೃಷಿಗೆ ಉಪಯೋಗವಾಗುವ ಪ್ರದೇಶದ ವಿಸ್ತೀರ್ಣವನ್ನೂ ಕೂಡ ಹೆಚ್ಚಿಸಿಕೊಳ್ಳಬಹುದು. ಈ ಅಂಶಗಳಲ್ಲದೆ ಮನವಿಯ ಮೂರನೆಯ ಪ್ಯಾರಾದಲ್ಲಿ ಪ್ರಸ್ತಾಪಿಸಿರುವಂತೆ ಕೆರೆಗಳ ಅಭಿವೃದ್ಧಿ ಯೋಜನೆಯಲ್ಲಿ ಸಂಯೋಜಿತ ಉಪಯೋಗದಿಂದ ನೀರಿನ ಗುಣಮಟ್ಟವೂ ಹೆಚ್ಚಾಗುವುದಲ್ಲದೆ ಕೃಷಿಗೆ ಒದಗಿಬರುವ ಒಟ್ಟಾರೆ ಪ್ರದೇಶವನ್ನೂ ಅಷ್ಟೇ ನೀರಿನ ಬಳಕೆಯಿಂದ ಎರಡು ಅಥವಾ ಮೂರು ಪಟ್ಟು ವಿಸ್ತರಿಸಿಕೊಳ್ಳಬಹುದೆಂಬುದನ್ನು ಗಮನಿಸಬೇಕಾಗಿದೆ. ಅಂದರೆ, ಪ್ರದೇಶದ ವಿಸ್ತೀರ್ಣಕ್ಕಿಂತ ನೀರಿನ ಮೊತ್ತವು ಮುಖ್ಯವಾಗುತ್ತದೆ.

೨. ಮನವಿಯಲ್ಲಿ ಜೀರ್ಣೋದ್ಧಾರವೆಂಬುದನ್ನು ತಪ್ಪಾಗಿ ಅರ್ಥೈಸಲಾಗಿದೆ. ಜೀರ್ಣೋದ್ಧಾರವೆಂದರೆ ವರ್ಷಾನುಗಟ್ಟಲೆ ಹೂಳೆತ್ತದೆ ಅಸಡ್ಡೆಗೊಳಗಾಗಿರುವ ಕೆರೆಗಳು ತಂತಮ್ಮ ಮೂಲ ವಿನ್ಯಾಸ ಮತ್ತು ಧಾರಣಶಕ್ತಿಯನ್ನು ದುರಸ್ತಿಯ ಮೂಲಕ ಮತ್ತೆ ಪಡೆಯುವುದಷ್ಟೆ ಎಂದು ವಾದಿಸಿದ್ದರೆ ಸೂಕ್ತವಾಗಿರುತ್ತಿತ್ತು. ಅದು ವಾಸ್ತವವೂ ಕೂಡ. ಅಂದಿನ ಮೈಸೂರು ಸರಕಾರವು ೧೯೩೦ರ ತನ್ನ ಕೈಪಿಡಿಯಲ್ಲಿ ಇದೇ ವಿವರಣೆ ನೀಡಿದೆ. ತಾಂತ್ರಿಕವಾಗಿ ಪ್ರಗತಿ ಹೊಂದಿರುವ ಇಂದಿನ ಸಂದರ್ಭದಲ್ಲಿ ಜೀರ್ಣೋದ್ಧಾರದ ಬಗ್ಗೆ ಇದೇ ಪರಿಭಾಷೆಯನ್ನು ಬಳಸಬೇಕಾಗಿತ್ತೇ ಹೊರತು ಕೃಷಿಗೆ ಒಳಪಟ್ಟಿರುವ ಪ್ರದೇಶ ಅಥವಾ ಅಚ್ಚುಕಟ್ಟಿನ ಬಗ್ಗೆ ತೀರಾ ಹಳತೆನ್ನಿಸುವ ವಿಷಯಗಳನ್ನು ಪ್ರಸ್ತಾಪಿಸಲೇಬಾರದಿತ್ತು.

೩. ಬಡತನವನ್ನು ತಗ್ಗಿಸುವ ದೃಷ್ಟಿಯಿಂದ ಹಳೆಯ ಕೆರೆಗಳ "ಅಭಿವೃದ್ಧಿ"ಗಾಗಿ ಈ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆಯೆಂದು ಅದೇ ೩ನೆಯ ಪ್ಯಾರಾದಲ್ಲಿ ಹೇಳಲಾಗಿದೆ. ಇಲ್ಲಿ, 'ಅಭಿವೃದ್ಧಿ' ಎಂಬುವ ಪದಪ್ರಯೋಗ ಇಲ್ಲದ ಅಪಾರ್ಥಗಳಿಗೆ ಎಡೆಮಾಡಿ ಕೊಡುತ್ತದೆ. ಮೈಸೂರು ಸರಕಾರದ ಕೈಪಿಡಿಯಲ್ಲಿ

*ಇಡೀ ರಾಷ್ಟ್ರದಲ್ಲಿಯೇ ಹೆಚ್ಚು ಕೆರೆಗಳನ್ನು ಹೊಂದಿರುವ ನಾಡು ಕರ್ನಾಟಕ. ಶತಮಾನಗಳಿಂದಲೂ ರೈತಾಪಿ ಜನರ ಜೀವನಾಧಾರವಾಗಿರುವ ಈ ಕೆರೆಗಳು ಅವರ ಬದುಕಿನ ಭಾಗವಾಗಿವೆ. ಒಂದರ್ಥದಲ್ಲಿ ರಾಜ್ಯದ ಆರ್ಥಿಕದಲ್ಲಿ ಅವುಗಳ ಪಾತ್ರವೂ ಇದೆ.*

*ಈಗ ಕಾವೇರಿ ಜಲಾನಯನ ಪ್ರದೇಶದಲ್ಲಿನ ಕೆರೆಗಳ ಹೂಳೆತ್ತುವ ವಿಷಯದಲ್ಲಿ ಕರ್ನಾಟಕ ತಮಿಳುನಾಡುಗಳ ನಡುವೆ ಅನಗತ್ಯವಾದ ವಿವಾದ ಉಂಟಾಗಿದೆ. ಹೂಳೆತ್ತುವುದರಿಂದ ಕೆರೆಗಳಲ್ಲಿ ಹಿಂದಿಗಿಂತ ಹೆಚ್ಚು ನೀರು ಶೇಖರಣೆಯಾಗುತ್ತದೆಂಬುದು ತಮಿಳುನಾಡಿನ ಅಬ್ಬರ. ವೈಜ್ಞಾನಿಕವಾಗಿ ಪರಿಶೀಲಿಸಿದರೆ ಕೃಷಿಗೆ ಆಧಾರವಾಗಿರುವ ಕೆರೆಗಳ ಹೂಳೆತ್ತುವುದಕ್ಕೂ ಕಾವೇರಿ ಜಲಾನಯನ ಪ್ರದೇಶದಿಂದ ಹರಿಯುವ ನೀರಿಗೂ ಯಾವ ಸಂಬಂಧವೂ ಇಲ್ಲ. ನಿಜವಾದ ಅರ್ಥದಲ್ಲಿ ಹೂಳೆತ್ತುವುದೆಂದರೆ ಕೆರೆಗಳಲ್ಲಿ ಶೇಖರಿಸಿಕೊಂಡಿರುವ ಮೆಕ್ಕಲು ಮಣ್ಣನ್ನು ಹೊರತೆಗೆಯುವುದು. ಇದರಿಂದಾಗಿ ಮೂಲತಃ ಇದ್ದ ಅದರ ಧಾರಣ ಶಕ್ತಿಯನ್ನು ಕೆರೆಗಳು ಮತ್ತೆ ಪಡೆದಂತಾಗುತ್ತದೆ. ಈ ಪ್ರಕ್ರಿಯೆಯಿಂದ ಹೊಸದಾಗಿ ಹೆಚ್ಚಿನ ನೀರು ಶೇಖರಣೆಯಾಗುತ್ತದೆಂಬುವ ವಾದ ಅವೈಜ್ಞಾನಿಕ. ಅನೇಕ ತಜ್ಞರ ಅಭಿಪ್ರಾಯವೂ ಇದೇ ಆಗಿದೆ. ಈ ನಿಟ್ಟಿನಲ್ಲಿ ಇಂದು ಭುಗಿಲೆದ್ದಿರುವ ವಿವಾದದಲ್ಲಿ ಕೇಂದ್ರ ಜಲ ಸಂಪನ್ಮೂಲ ಇಲಾಖೆಯು ಕರ್ನಾಟಕದ ಹಿತಾಸಕ್ತಿಗಳಿಗೆ ವಿರುದ್ಧವಾದ ನಿಲುವು ತಳೆಯುತ್ತಿರುವುದು ಸ್ಪಷ್ಟ. ಅಲ್ಲದೆ, ತಮಿಳುನಾಡಿನ ಪರವಾದ ಪಕ್ಷಪಾತದ ಧೋರಣೆಯನ್ನೂ ತಾಳುತ್ತಿದೆ. ಇಷ್ಟರಲ್ಲಿಯೇ, ಕೃಷ್ಣಾ ನದಿಯ ವಿವಾದವೂ ಇದೇ ಜಾಡು ಹಿಡಿದು ಆಂಧ್ರಪ್ರದೇಶ ಸರಕಾರ ತಮಿಳುನಾಡಿನ ವಾದವನ್ನೇ ಮುಂದಿಡುವ ಸಾಧ್ಯತೆಯೂ ಇದೆ.*

*ಈ ಕೆರೆಗಳ ಹೂಳೆತ್ತುವ ವಿವಾದಕ್ಕೆ ಸಂಬಂಧಪಟ್ಟಂತೆ ರಾಜ್ಯ ಸರಕಾರ ಕೇಂದ್ರ ಸಂಪನ್ಮೂಲ ಇಲಾಖೆಗೆ ಮನವಿಯನ್ನು ಸಲ್ಲಿಸಿದೆ. ಈ ಮನವಿಯಲ್ಲಿ ನಮೂದಿಸಿರುವ ಹಲವಾರು ಅಂಶಗಳು ರಾಜ್ಯದ ಹಿತಾಸಕ್ತಿಗಳಿಗೆ ವಿರುದ್ಧವಾಗಿರುವುದು ದುರದೃಷ್ಟಕರ. ಇಂತಹ ಘೋರ ಪ್ರಮಾದಕ್ಕೆ ಕಾರಣರಾಗಿರುವ ಸರಕಾರದ ಪ್ರತಿನಿಧಿಗಳು, ಸಚಿವಾಲಯದ ಅಧಿಕಾರಿಗಳು ಜನತೆಗೆ ಸೂಕ್ತವಾದ ವಿವರಣೆ ನೀಡಬೇಕಾಗಿದೆ.*

*ಈ ಎಲ್ಲ ಅಂಶಗಳನ್ನು ಒಳಗೊಂಡಂತೆ ಜಲ ಸಂವರ್ಧನೆ ಯೋಜನಾ ಸಮಿತಿಯ ಸದಸ್ಯರೂ, ಖ್ಯಾತ ತಜ್ಞರೂ ಆಗಿರುವ ಶ್ರೀ ಭವಾನಿಶಂಕರ್ ಅವರು ಸರಕಾರ ಸಲ್ಲಿಸಿರುವ ಮನವಿಯಲ್ಲಿರುವ ಅವೈಜ್ಞಾನಿಕ ಹಾಗೂ ತಪ್ಪು ಮಾಹಿತಿಗಳನ್ನು ಗುರುತಿಸಿ ಮಾನ್ಯ ಮುಖ್ಯಮಂತ್ರಿ ಶ್ರೀ ಎಸ್. ಎಂ. ಕೃಷ್ಣ ಅವರಿಗೆ ಪತ್ರವನ್ನು ಬರೆದು ಈ ಬಗ್ಗೆ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. ಅಂತೆಯೇ ಸರಕಾರದ ಮುಖ್ಯ ಕಾರ್ಯದರ್ಶಿಗಳಾದ ಶ್ರೀಮತಿ ಥೆರೆಸಾ ಭಟ್ಟಾಚಾರ್ಯ ಮತ್ತು ಹೆಚ್ಚುವರಿ ಕಾರ್ಯದರ್ಶಿ ಶ್ರೀ ಎನ್. ವಿಶ್ವನಾಥನ್ ಅವರಿಗೂ ಬರೆದು ತಮ್ಮ ಅಭಿಪ್ರಾಯಗಳನ್ನು ಅವರ ಗಮನಕ್ಕೂ ತಂದಿದ್ದಾರೆ.*

*ಕೃಷಿ ಹಾಗೂ ನೀರಾವರಿ ಯೋಜನೆಗಳಿಗೆ ಸಂಬಂಧಪಟ್ಟಂತೆ ರಾಜ್ಯ, ಕೇಂದ್ರ ಸರಕಾರಗಳು ಮತ್ತು ವಿಶ್ವಬ್ಯಾಂಕ್‌ನ ಅನೇಕ ಹುದ್ದೆಗಳಲ್ಲಿ ಗಮನೀಯವಾದ ಸೇವೆ ಸಲ್ಲಿಸಿರುವ ಶ್ರೀ ಭವಾನಿಶಂಕರ್ ಅವರ ಅಪಾರ ಅನುಭವದಿಂದ ಮೂಡಿಬಂದಿರುವ ಈ ಟೀಕೆಗಳು ಮತ್ತು ಅಭಿಪ್ರಾಯಗಳನ್ನು ಸರಕಾರ ಕೂಡಲೇ ಗಣನೆಗೆ ತೆಗೆದುಕೊಂಡು ಈಗಾಗಲೆ ಸಂಭವಿಸಿರುವ ಪ್ರಮಾದವನ್ನು ಸರಿಪಡಿಸಿಕೊಳ್ಳಬೇಕಾದ ಅಗತ್ಯವಿದೆ.*

ಉಲ್ಲೇಖಿಸಿರುವಂತೆ 'ಅಭಿವೃದ್ಧಿ'ಯೆಂದರೆ ಕೃಷಿಗಾಗಿ ಇನ್ನೂ ಹೆಚ್ಚುವರಿಯಾಗಿ ಕೆರೆಯ ನೀರನ್ನು ಒದಗಿಸುವುದು ಅಥವಾ ಅದರ ಉದ್ದೇಶಕ್ಕಾಗಿ ಕೆರೆಯನ್ನು ಹೆಚ್ಚು ಉಪಯುಕ್ತವಾಗಿ ಮಾಡುವುದು ಎಂದರ್ಥ. ಸರಕಾರ ಹಮ್ಮಿಕೊಂಡಿರುವ ಯೋಜನೆಯ ಉದ್ದೇಶ ಇದಲ್ಲವೆಂದು ನನ್ನ ಅಭಿಪ್ರಾಯ. ಏಕೆಂದರೆ ಕೆರೆಗಳ ಹೂಳೆತ್ತುವ ನಿಟ್ಟಿನಲ್ಲಿ ತಮಿಳುನಾಡಿನ ಹಿತಾಸಕ್ತಿಗೆ ವಿರುದ್ಧವಾಗಿರುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಹಾಗಿದ್ದಿದ್ದರೆ, ಕೇಂದ್ರದ ಆದೇಶಗಳನ್ನು ನಾವು ಪಾಲಿಸಲೇಬೇಕಿತ್ತು. ಇಷ್ಟಾದರೂ, ಕಾರಣವಿಲ್ಲದೆ ಕೇಂದ್ರದ ತಪ್ಪು ಆದೇಶಗಳಿಗೆ ನಮ್ಮ ಸರಕಾರ ಶರಣು ಬೀಳುವ ಅಗತ್ಯವಾದರೂ ಏನಿತ್ತು ?

ಕೇಂದ್ರ ಸರಕಾರಕ್ಕಾಗಲಿ ಜಲ ಸಂಪನ್ಮೂಲ ಇಲಾಖೆಗಾಗಲಿ ಇದಾವುದೂ ತಿಳಿಯದ ವಿಷಯವೇನಲ್ಲ. ನಿಷ್ಪಕ್ಷಪಾತವಾದ ಧೋರಣೆ ತಳೆದು ತಮಿಳುನಾಡು ಸರಕಾರಕ್ಕೆ ಸೂಕ್ತವಾದ ವಿವರಣೆ ನೀಡಬೇಕಾಗಿದ್ದ ಜವಾಬ್ದಾರಿ ಕೇಂದ್ರದ್ದು. ಆ ಇಲಾಖೆಯದು. ನೀರಿನ ವಿವಾದದಲ್ಲಿ ತಮಿಳುನಾಡು ಇಲ್ಲಸಲ್ಲದ ತರ್ಕಗಳನ್ನು ಮುಂದಿಟ್ಟಿದೆ. ಕರ್ನಾಟಕ ತನ್ನ ನ್ಯಾಯಯುತ ಹಕ್ಕುಗಳನ್ನು ಚಲಾಯಿಸುವುದಕ್ಕೆ ಅಡ್ಡಗಾಲು ಹಾಕುತ್ತಿದೆ. ನ್ಯಾಯಸಮ್ಮತ ವಲ್ಲದ ಮೇಲುಗೈ ಪಡೆಯಲು ಹಾತೊರೆಯುತ್ತಿದೆ.

೪. ಈಗಾಗಲೇ ನಿಗದಿಪಡಿಸಿರುವ ಪ್ರದೇಶದ ವಿಸ್ತೀರ್ಣವನ್ನು ಹೆಚ್ಚು ಮಾಡಿಲ್ಲವೆಂದು ಅದೇ ಪ್ಯಾರಾದಲ್ಲಿ ಮತ್ತೆ ಒತ್ತಿ ಹೇಳಲಾಗಿದೆ. ಆಗಲೇ ತಿಳಿಸಿದಂತೆ ಎಷ್ಟೋ ಕೆರೆಗಳು ಶತಮಾನಗಳಷ್ಟು ಹಿಂದಿನವು. ಅಂದು ರೂಢಿಯಲ್ಲಿದ್ದದ್ದು ಒಬಿರಾಯನಕಾಲದ ವ್ಯವಸಾಯ ಪದ್ಧತಿ. ನೀರು ವ್ಯರ್ಥವಾಗುತ್ತದೆಂಬ ಕಲ್ಪನೆಯೇ ಇರದಿದ್ದ ಕಾಲ. ಇಂದು ಹಾಗಿಲ್ಲ. ತಾಂತ್ರಿಕವಾಗಿ ಪ್ರಗತಿ ಆಗಿದೆ. ಆಗುತ್ತಿದೆ. ಇಂದಿನ ಸಂದರ್ಭದಲ್ಲಿ ಎಷ್ಟು ಎಕರೆಗಳನ್ನು ಕೃಷಿಗೆ ಉಪಯೋಗಿಸಲಾಗಿದೆ ಎಂಬುದಕ್ಕಿಂತಲೂ ಎಷ್ಟು ಟಿ.ಎಂ.ಸಿ. ನೀರು ಬಳಸಲಾಗಿದೆ ಎಂಬುವ ಅಂಶ ಪ್ರಸ್ತುತವಾಗುತ್ತದೆ. ಈ ನಿಟ್ಟಿನಲ್ಲಿ ನಮ್ಮ ಸರಕಾರ ತನ್ನ ನಿಲುವಿನಲ್ಲಿಯೇ ಸ್ವಯಂಕೃತ ವಿರೋಧಾಭಾಸಗಳನ್ನು ನಿರ್ಮಾಣ ಮಾಡಿಕೊಂಡು ಗೊಂದಲಕ್ಕೀಡಾಗಿದೆ. ಹಳತಾದ ಆಧಾರಗಳು, ಅಂಶಗಳನ್ನಿಟ್ಟುಕೊಂಡು ನಮ್ಮ ಪ್ರತಿನಿಧಿಗಳು ವಾದ ಹೂಡಿದ್ದರ ಫಲವಾಗಿ ೧೯೯೧ರ ನ್ಯಾಯಾಧಿಕರಣವು ಮಧ್ಯಂತರ ಆದೇಶವನ್ನು ನೀಡಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ೧೧.೨ ಲಕ್ಷ ಎಕರೆಗಳಿಗೆ ನಮ್ಮನ್ನು ನಾವೇ ಮಿತಿಗೊಳಿಸಿಕೊಂಡಿದ್ದೇವೆ. ಅದೇ ಸಂದರ್ಭದಲ್ಲಿ ವರುಷಕ್ಕೆ ಶೇ. ನೂರಕ್ಕೆ ನೂರರಷ್ಟು ನೀರನ್ನು ಅತಿಕ್ರಮಿಸಿ ಬಳಸುವ ಚಾಕಚಕ್ಯತೆಯನ್ನು ತಮಿಳು ನಾಡು ಪ್ರದರ್ಶಿಸಿದೆ. ನೀರಿನ ಮೊತ್ತಕ್ಕೆ ಪ್ರಾಮುಖ್ಯತೆ ನೀಡುವ ಚಮತ್ಕಾರದ ಫಲವಾಗಿ ಯಾರ ಹಂಗೂ ಇಲ್ಲದೆ ಪರಿಣಾಮಕಾರಿ ವಿಧಾನಗಳನ್ನು ಅಳವಡಿಸಿಕೊಂಡು ಕೃಷಿಗೆ ಬಳಸಲಾಗುವ ಪ್ರದೇಶವನ್ನು ತಾನು ಹೆಚ್ಚಿಸಿಕೊಳ್ಳುವುದಕ್ಕೆ ಅವಕಾಶಗಳನ್ನು ನಿರ್ಮಿಸಿಕೊಂಡಿದೆ.

೫. ಸರಕಾರದ ಮನವಿಯಲ್ಲಿರುವ ಕೆಲವು ಅನುಚಿತ ಪದಪ್ರಯೋಗಗಳು, ಪರಿಭಾಷೆಗಳನ್ನು ಅರ್ಥೈಸಲು ಹೋಗುವುದು ಈಗ ಬೇಡ. ಗಮನಿಸಬೇಕಾದ ಅಂಶವೆಂದರೆ ಅದರ ಐದನೆಯ ಪ್ಯಾರಾದಲ್ಲಿರುವ ಹೇಳಿಕೆಗಳನ್ನು ನೋಡಿದರೆ ಯಾವ ರೀತಿಯ ಪ್ರತಿಭಟನೆಯನ್ನೂ ತೋರದೆ ಕಾವೇರಿ ಜಲಾನಯನದ ಪ್ರದೇಶದಲ್ಲಿರುವ ಕೆರೆಗಳ ಪ್ರಸ್ತಾಪವನ್ನೇ ಕೈಬಿಟ್ಟು ಜಲ ಸಂಪನ್ಮೂಲ ಇಲಾಖೆಯ ಸಲಹೆಗಳಿಗೆ ಒಪ್ಪಿಗೆ ನೀಡಿ ಅದರಂತೆ ನಮ್ಮ ಸರಕಾರ ಆರ್ಥಿಕ ವ್ಯವಹಾರ ಇಲಾಖೆಗೆ ಕೂಡ ಸೂಚನೆ ನೀಡಿದೆ. ೧೧.೨ ಲಕ್ಷ ಎಕರೆಗಳಿಗೆ ಸೀಮಿತಗೊಳಿಸುವಂತೆ ೧೯೯೪ರಲ್ಲಿಯೇ ನ್ಯಾಯಾಧಿಕರಣ ಈ ನಿಟ್ಟಿನಲ್ಲಿ ಆದೇಶವನ್ನು ನೀಡಿರುವುದು ತಿಳಿದ ವಿಷಯವೇ. ಇದನ್ನು ಪುನರುಚ್ಚರಿಸುವ ಅವಶ್ಯಕತೆಯೇ ಇರಲಿಲ್ಲ. ಕೇವಲ ಅಲಕ್ಷ್ಯದಿಂದ ೧೯೯೦ರಲ್ಲಿಯೇ ಇಂತಹ ಪರಿಸ್ಥಿತಿ ಉಂಟಾಯಿತೆಂಬುದು ನಿರ್ವಿವಾದ. ಇದರಿಂದಾಗಿ ತಮಿಳುನಾಡಿನ ನಿಲುವಿನ ಪುಷ್ಟೀಕರಣಕ್ಕೆ ನಮ್ಮ ಅಧಿಕಾರಿಗಳ ಕಾಣಿಕೆಯೂ ಇದ್ದಂತಾಗಿದೆ. ಒಟ್ಟು ಸಾರಾಂಶವಿಷ್ಟು. ತಪ್ಪು ಮಾಹಿತಿಗಳಿಂದ ಕೂಡಿದ, ನಿರ್ದಿಷ್ಟವಾದ ದೃಷ್ಟಿಕೋನವಿಲ್ಲದ ಈ ಮನವಿಯನ್ನು ನೀಡಿದ್ದರ ಫಲವಾಗಿ ನ್ಯಾಯಸಮ್ಮತವಲ್ಲದ, ಪಕ್ಷಪಾತ ದಿಂದ ಕೂಡಿದ ಕೇಂದ್ರದ ಆದೇಶಗಳಿಗೆ ನಮ್ಮ ರೈತಾಪಿ ಜನರು ಬಲಿಪಶುಗಳಾಗಿದ್ದಾರೆ. ಸಂವಿಧಾನದ ಪ್ರಕಾರವೇ ನದಿಗಳ ನೀರಿನ ವಿಷಯ ರಾಜ್ಯ ಸರಕಾರಗಳಿಗೆ ಸಂಬಂಧಿ ಸಿದ್ದು. ಇಷ್ಟಾದರೂ ಸರಕಾರ ಕಿಂಚಿತ್ತು ಪ್ರತಿರೋಧವನ್ನೂ ಪ್ರದರ್ಶಿಸದೇ ಇದ್ದದ್ದು ಒಂದು ದುರಂತ.



*ನಮ್ಮೂರ ಕೆರೆಯಲ್ಲಿ ಹೂಳೆತ್ತಲು ಯಾರದೋ ತಕರಾರು ಯಾಕೆ ?*

ಇನ್ನು ಕೃಷ್ಣಾ ನದಿಗೆ ಸಂಬಂಧಿಸಿದಂತೆ ಆಂಧ್ರಪ್ರದೇಶದೊಡನೆಯೂ ವಿವಾದವಿದೆ. ಈ ಆಗುಹೋಗುಗಳ ಹಿನ್ನೆಲೆಯಲ್ಲಿ ತಮಿಳುನಾಡಿನ ವಾದವನ್ನು ಆಂಧ್ರವೂ ಮುಂದಿಟ್ಟರೆ ಆಶ್ಚರ್ಯವಿಲ್ಲ. ಎಂದಿನಂತೆ, ಕೇಂದ್ರವೂ ಆಂಧ್ರದ ಪರವಾಗಿ ನಮಗೆ ಆದೇಶ ನೀಡುವುದಕ್ಕೆ ಮತ್ತೊಂದು ಅವಕಾಶ. ಒಟ್ಟಾರೆ, ಪಶ್ಚಿಮ ಘಟ್ಟದಲ್ಲಿ ಹೇಗೂ ಹೇಳಹೆಸರಿಸುವ ಕೆರೆಗಳಂತೂ ಇಲ್ಲ. ಅಲ್ಲಿ ಮಳೆಗೂ ಕೊರತೆಯಿಲ್ಲ. ಆದ್ದರಿಂದ ಕೆರೆಗಳ ಹೂಳೆತ್ತುವ ಯೋಜನೆಯ ಅವಶ್ಯಕತೆಯಾದರೂ ಏಕೆ ? ತಮಿಳುನಾಡು – ಕೇರಳ ನಡುವಿನ ಪೆರಿಯಾರ್ ಅಣೆಕಟ್ಟಿನ ಬಗ್ಗೆ ಇದ್ದ ವಿವಾದದಲ್ಲಿ ನಾವು ಎದುರಿಸುತ್ತಿರುವ ಪರಿಸ್ಥಿತಿಯನ್ನೇ ತಮಿಳುನಾಡು ಎದುರಿಸುತ್ತಿತ್ತು. ಆದರೆ ಆಗ ಕೇಂದ್ರ ವಾಲಿದ್ದು ತಮಿಳುನಾಡಿನ ಕಡೆಗೆ. ಆದರೆ ಈಗ ಹೀಗೇಕೆ ? ಇಂತಹ ಅಂತರರಾಜ್ಯ ಬಿಕ್ಕಟ್ಟು, ವಿವಾದಗಳು ಇರುವ ಸಂದರ್ಭದಲ್ಲಿ ಕೇಂದ್ರ ಸರಕಾರವಾಗಲಿ, ಜಲ ಸಂಪನ್ಮೂಲ ಇಲಾಖೆಯಾಗಲಿ ಪ್ರತ್ಯೇಕವಾದ ಅಳತೆಗೋಲನ್ನು ಇಟ್ಟುಕೊಳ್ಳುವುದು ನ್ಯಾಯವಲ್ಲ. ಅದನ್ನು ಜನತೆ ಪ್ರತಿಭಟಿಸಬೇಕಾಗಿದೆ.

ಮನವಿಯಲ್ಲಿ ಲೋಪದೋಷಗಳಿವೆ. ಸಾಕಷ್ಟು ಮುನ್ನೋಟವಿಲ್ಲದ ಕಾರಣ ಅಸಂಬದ್ಧ ಅಂಶಗಳು ಅದರಲ್ಲಿ ನುಸುಳಿವೆ. ಆದರೂ ದಿಟ್ಟತನದಿಂದ ಮತ್ತು ಜನಸಾಮಾನ್ಯರ, ರೈತಾಪಿ ಜನರ ಹಿತದೃಷ್ಟಿಯಲ್ಲಿ ಸಂಬಂಧಪಟ್ಟ ತಜ್ಞರ ಸಲಹೆಗಳನ್ನು, ಗಣನೆಗೆ ತೆಗೆದುಕೊಳ್ಳುವುದಲ್ಲದೆ ಇಲ್ಲಿ ಚರ್ಚಿಸಲಾಗಿರುವ ಲೋಪಗಳನ್ನೂ ಸರಿಪಡಿಸಿಕೊಂಡು ಕರ್ನಾಟಕ ಸರಕಾರ ಕೇಂದ್ರ ಸರಕಾರಕ್ಕೆ ಬೇರೊಂದು ಮನವಿಯನ್ನು ಸಲ್ಲಿಸಬೇಕೆಂಬುದು ನನ್ನ ಸ್ಪಷ್ಟ ಅಭಿಪ್ರಾಯ.

*(ಈ ಲೇಖನವನ್ನು ಕನ್ನಡದಲ್ಲಿ ಸಿದ್ಧಪಡಿಸಿಕೊಟ್ಟವರು ಶ್ರೀ ಎಸ್. ಸುರೇಂದ್ರ)*

ಬಿ. ಎಸ್. ಭವಾನಿಶಂಕರ್
ಅಧ್ಯಕ್ಷರು, ಸಹಯೋಗ, "ಮಂಜೂಷ"ನಂ ೭೩
೭ನೇ ಮುಖ್ಯ ರಸ್ತೆ, [illegible] ಅಡ್ಡ ರಸ್ತೆ, ಕೆ. ಎಸ್. ಆರ್. ಟಿ. ಬಡಾವಣೆ
ಜೆ.ಪಿ.ನಗರ, ೨ನೇ ಹಂತ, ಬೆಂಗಳೂರು [illegible] ೦೭೮

# ಇತಿಹಾಸದಲ್ಲಿ ಗಣಿತಶಾಸ್ತ್ರ

ಡಾ॥ ಕೆ. ಕೆ. ಥೇಕೆಡತ್

ಗಣಿತಶಾಸ್ತ್ರವು ಬೆಳೆಯುವ ಹಾದಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಮಾನವ ಸಂಸ್ಕೃತಿಯ ಮೊದಲ ಹೆಜ್ಜೆಗಳತ್ತ ಗಮನ ಹರಿಸಬೇಕಾಗುತ್ತದೆ. ಪ್ರಾಚೀನ ಸಮಾಜಗಳಲ್ಲಿ ಎಣಿಕೆ ಮಾಡಬೇಕಾದ ಅವಶ್ಯಕತೆ ಕೃಷಿ ಸಂಬಂಧವಾದ ಕಾಲಗತಿಯನ್ನು ಗುರುತಿಸಿಟ್ಟುಕೊಳ್ಳಲು ಅಥವಾ ಪಶು ಸಂಪತ್ತಿನ ಎಣಿಕೆ ಮಾಡಬೇಕಾದ ಸಂದರ್ಭದಲ್ಲಿ ಅಥವಾ ಅಂತಹುದೇ ಇತರ ದೈನಂದಿನ ವ್ಯವಹಾರದ ಅವಶ್ಯಕತೆಯನ್ನು ಪೂರೈಸಲು ಮೂಡಿಬಂದಿದೆಯೆನ್ನಬಹುದು. ತನ್ನ ವಶದಲ್ಲಿರುವ ಹಸುಗಳ ಸಂಖ್ಯೆಯನ್ನು ಅಷ್ಟೇ ಸಂಖ್ಯೆಯ ಕಲ್ಲು ಹರಳುಗಳ ರಾಶಿಯಿಂದ ಎಣಿಸಿಟ್ಟುಕೊಳ್ಳಬಹುದೆಂಬ ಆರಂಭದ ಅರಿವಿನಿಂದ, ಒಂದು ನಿರ್ದಿಷ್ಟ ಸಂಖ್ಯೆಯ ಕಲ್ಲುಹರಳುಗಳ ರಾಶಿ ಅಷ್ಟೇ ಸಂಖ್ಯೆಯ ಬೇರೆ ಯಾವುದೇ ವಸ್ತುರಾಶಿಯನ್ನೂ ಎಣಿಸಲು ಉಪಯುಕ್ತವಾಗುತ್ತದೆ ಎಂಬ ಹೆಚ್ಚಿನ ಅರಿವಿನಿಂದ ಸಂಖ್ಯೆಗಳ ಅಮೂರ್ತ ಕಲ್ಪನೆಯತ್ತ ಮಾನವ ಪ್ರಥಮ ಹೆಜ್ಜೆಯನ್ನಿಟ್ಟಿರಬೇಕು. ಉದಾಹರಣೆಯಾಗಿ : ನಾಲ್ಕು ಹಸುಗಳು, ನಾಲ್ಕು ಕುದುರೆಗಳು, ನಾಲ್ಕು ಗೋಧಿ ಹರಳುಗಳು ಮುಂತಾದ ನಾಲ್ಕು ವಸ್ತುಗಳನ್ನು ಇತರ ಯಾವುದೇ ವಸ್ತುರಾಶಿಗಳೆಲ್ಲಕ್ಕೂ ಸಮಾನವಾಗಿ ಕಂಡುಬರುವ ಎಣಿಕೆಯ ಅಂಶವೇ ಸಂಖ್ಯೆ ನಾಲ್ಕರ ಅಮೂರ್ತ ಕಲ್ಪನೆಯ ಆಧಾರ. ಎಣಿಕೆಗೆ ಸಾಧನವಾಗಿರುವ ಸಂಖ್ಯೆಗಳಾದ ೧, ೨, ೩, ೪...., ಇತ್ಯಾದಿ ಧನ ಪೂರ್ಣಾಂಕಗಳನ್ನು ಸ್ವಾಭಾವಿಕ ಸಂಖ್ಯೆಗಳೆಂದು ಕರೆಯಲಾಗುತ್ತದೆ. ಸ್ವಾಭಾವಿಕ ಸಂಖ್ಯೆಗಳು, ಅನೇಕ ಸಮುದಾಯಗಳ ತಮ್ಮ ದೈನಂದಿನ ನೈಜ ವ್ಯವಹಾರಗಳಲ್ಲಿ ಸ್ಫುರಿಸಿದ ಅನುಭವವನ್ನು ಸಂಚಯಿಸಿದ, ಚರಿತ್ರೆಯ ಒಂದು ನಿಡಿದಾದ ಕಾಲಗತಿಯ ನಂತರ ಲಭ್ಯವಾದ, ಒಂದು ಗಣಿತ ಪ್ರಕಾರ. ''ಸ್ವಾಭಾವಿಕ ಸಂಖ್ಯೆಗಳು ದೈವದತ್ತ, ಉಳಿದೆಲ್ಲ ಸಂಖ್ಯೆಗಳು ಮಾನವ ನಿರ್ಮಿತ'' ಎಂಬ ಆಧುನಿಕ ಗಣಿತಶಾಸ್ತ್ರದ ಮೂಲಪುರುಷರಲ್ಲೊಬ್ಬನಾದ ಲಿಯೋಪಾಲ್ಡ್ ಕ್ರಾನೆಕರ್ (೧೮೨೩-೧೮೯೧)ನ ಉಕ್ತಿಯನ್ನು ಸಂಖ್ಯೆಗಳ ಚಾರಿತ್ರಿಕ ಬೆಳವಣಿಗೆಯನ್ನು ಸ್ಪಷ್ಟಪಡಿಸುವ ಅನೇಕ ಸಂದರ್ಭಗಳಲ್ಲಿ ಉತ್ಸಾಹಪೂರಿತವಾದ ಅನುಮೋದನಾ ಧ್ವನಿಯೊಡನೆ ಉದಾಹರಿಸುವುದುಂಟು. ಆದರೂ ಸ್ವಾಭಾವಿಕ ಸಂಖ್ಯೆಗಳು ಮಾನವನಿಗೆ ಇದ್ದಕ್ಕಿದ್ದಂತೆಯೇ ಈಡನ್ನಿನ ತೋಟದಲ್ಲಿದ್ದ ಸೇಬಿನ ಹಣ್ಣಿನಷ್ಟೇ 'ಸ್ವಾಭಾವಿಕ'ವಾಗಿ ಲಭಿಸಿದ್ದೇನಲ್ಲ! ಸಂಸ್ಕೃತಿ ಆರಂಭದ ದಿನಗಳಿಂದ ಸಾವಿರಾರು ವರ್ಷಗಳು ಸಂದ ನಂತರವೇ ಮಾನವನ ಸಾಮಾಜಿಕ ಜೀವನದ ಕ್ರಿಯಾಶೀಲತೆಯ ಫಲವಾಗಿ ಸ್ವಾಭಾವಿಕ ಸಂಖ್ಯೆಗಳು ಮಾನವನ ಉಪಯೋಗಕ್ಕೆ ಒದಗಿಬಂದಿವೆ ಎಂಬುದು ಗಣಿತಶಾಸ್ತ್ರ ಚರಿತ್ರೆಯಿಂದ ಸ್ಪಷ್ಟವಾಗುತ್ತದೆ. ದೈನಂದಿನ ವ್ಯವಹಾರದಿಂದಲೇ ಸ್ವಾಭಾವಿಕ ಸಂಖ್ಯೆಗಳೆಂಬ ಅಮೂರ್ತ ಕಲ್ಪನೆಗಳೂ ಉದಯವಾಗಿರುವುದು ಸರಿಯಷ್ಟೆ. ಆದರೆ ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಮಾನವ ಪ್ರಜ್ಞೆಯು ದೈನಂದಿನ ಎಣಿಕೆಯ ಮೂರ್ತ ವ್ಯವಹಾರದಿಂದ ಹಿಂದೆ ಹೇಳಿದ ಅಮೂರ್ತ ಕಲ್ಪನೆಯೆಡೆಗೆ ಸಾಗಿದಾಗಲೇ ಎಣಿಕೆಯ ಪ್ರಕ್ರಿಯೆಯಲ್ಲೂ ಕ್ರಾಂತಿಯುಂಟಾಗಿ ಎಣಿಕೆಯು ಅಂಕಗಣಿತ ರೂಪದಲ್ಲಿ ಇಡೀ ಸಮಾಜಕ್ಕೆ ಒದಗಿಬಂದು ಒಂದು ಉಪಯುಕ್ತ ತಂತ್ರಜ್ಞಾನವಾಗಿ ಪರಿಣಮಿಸಲು ಸಾಧ್ಯವಾಯಿತು. ಅಮೂರ್ತ ಪರಿಕಲ್ಪನೆಗಳಾಗಿರುವ ಶುದ್ಧ ಗಣಿತಶಾಸ್ತ್ರ ಪ್ರಕಾರಗಳ ಮೂಲ ನೆಲೆಗಳು ವ್ಯಾವಹಾರಿಕ ಜೀವನದ ಅನುಭವದಲ್ಲಿ ಜನ್ಯವಾಗಿ, ಮೂರ್ತ ಪ್ರಪಂಚದ ಪ್ರಕಾರಗಳ ಪರಸ್ಪರ ಸಂಬಂಧಗಳ ಸಂಕೀರ್ಣತೆಯ ಕೆಲವೇ ಅಂಶಗಳನ್ನು ಮಾತ್ರ ಒಳಗೊಂಡು, ಒಂದು ಪರಿಮಿತಿಯಲ್ಲಿ ಮಾತ್ರ ಮೂರ್ತ ಪ್ರಪಂಚವನ್ನು ಪ್ರತಿಫಲಿಸಲು ಯೋಗ್ಯವಾಗಿರುತ್ತವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಫ್ರೆಡ್ರಿಕ್ ಎಂಗಲ್ಸ್ ಹೇಳುವಂತೆ ''ಈ ಪರಿಮಿತಿಯಲ್ಲಿಯೇ ಶುದ್ಧ ಗಣಿತಶಾಸ್ತ್ರವು ಆನ್ವಯಿಕಶಾಸ್ತ್ರವೂ ಆಗಿ ಒದಗಿ ಬಂದಿರುವುದರ ರಹಸ್ಯ ಅಡಗಿದೆ.''

ಸ್ವಾಭಾವಿಕ ಸಂಖ್ಯೆಗಳ ನಂತರದ ಲಭ್ಯವಾದ ಸಂಖ್ಯೆಗಳು ಭಿನ್ನರಾಶಿಗಳು. ಇದಕ್ಕೆ ಕಾರಣ ಮತ್ತೊಮ್ಮೆ ವ್ಯವಹಾರದ ಅವಶ್ಯಕತೆ : ಹಂಚುವಿಕೆ, ಅಳೆಯುವಿಕೆ ಇತ್ಯಾದಿ ಪ್ರಕ್ರಿಯೆಗಳು. ಹೊಸ ಹೊಸ ರೂಪದ ಸಂಖ್ಯೆಗಳ ಆವಿಷ್ಕಾರ ಮುಂದುವರಿದು ಒಂದು ಹಂತದಲ್ಲಿ ನೈಜ ಸಂಖ್ಯೆಗಳೆಂಬ ಸಂಖ್ಯಾರಾಶಿಗಳಲ್ಲೂ ಮತ್ತು ಬೆಳವಣಿಗೆಯ ಇನ್ನೊಂದು ಹಂತದಲ್ಲಿ ಮಿಶ್ರ ಸಂಖ್ಯೆಗಳೆಂಬ ಸಂಖ್ಯಾರಾಶಿಗಳಲ್ಲೂ ಪರ್ಯವಸಾನವಾಯಿತು. ಈ ಎಲ್ಲ ಬೆಳವಣಿಗೆಗಳನ್ನು ಚಾರಿತ್ರಿಕವಾಗಿ ವಿಶ್ಲೇಷಿಸಿ ನೋಡಿದಾಗ ಎಂಗಲ್ಸ್ ಹೇಳಿದ ಮೂರ್ತ ಮತ್ತು ಅಮೂರ್ತ ಕಲ್ಪನೆಗಳ ನಡುವಣ ಸಂಬಂಧವನ್ನು ಪ್ರತಿಘಟ್ಟದಲ್ಲೂ ಗುರುತಿಸಬಹುದಾಗಿದೆ.

ಎಣಿಕೆಯ ಪ್ರಕ್ರಿಯೆಯ ನಂತರ ಐತಿಹಾಸಿಕವಾಗಿ ಉದಯಿಸಿಬಂದ ಗಣಿತಶಾಸ್ತ್ರ ಪ್ರಕಾರವೆಂದರೆ - ರೇಖಾಗಣಿತ (ಜ್ಯಾಮಿತಿ). ನದೀತೀರದ ವ್ಯವಸಾಯವನ್ನು ರೂಢಿಸಿಕೊಂಡ ಸಂಸ್ಕೃತಿಯಲ್ಲಿ ಸಹಜವಾಗಿ ಮೂಡಿಬಂದ, ನೆಲವನ್ನು ಅಳೆಯುವ ಪ್ರಕ್ರಿಯೆಯೊಡನೆ ಜ್ಯಾಮಿತಿಯ ಉದಯವಾಯಿತೆಂದು ಕೆಲವರ ಅಭಿಪ್ರಾಯ. ಆಂಗ್ಲಭಾಷೆಯ 'ಜ್ಯಾಮಿಟ್ರಿ' ಎಂಬ ಪದದ ಮೂಲದಲ್ಲಿ ಭೂಮಿಯನ್ನು ಅಳೆಯುವಿಕೆ ಎಂಬ ಅರ್ಥವನ್ನು ಗಮನಿಸಬಹುದು. ಇನ್ನೂ ಕೆಲವರ ಅಭಿಪ್ರಾಯದಂತೆ ಮೊಟ್ಟಮೊದಲು ನಗರೀಕರಣವನ್ನು ಕಂಡ ಸಂಸ್ಕೃತಿಗಳ (ಉದಾ : ಹರಪ್ಪ ಸಂಸ್ಕೃತಿ) ನಿರ್ಮಾಣ ಕಾರ್ಯಗಳ ಅವಶ್ಯಕತೆಯನ್ನು ಪೂರೈಸಲು ಜ್ಯಾಮಿತಿಯಂತಹ ಶಾಸ್ತ್ರವು ಉದಯವಾಯಿತು. ಅದು ಹೇಗಾದರೂ ಇರಲಿ, ರೇಖಾಗಣಿತವು ಶಾಸ್ತ್ರ ಸ್ವರೂಪವನ್ನು ಪಡೆಯುವುದಕ್ಕೂ ಮುಂದಾಗಿಯೇ, ವ್ಯವಹಾರಕ್ಕೆ ಬೇಕಾದ ತಾಂತ್ರಿಕ ಜ್ಞಾನ ಸ್ವರೂಪದಲ್ಲಿ ಹಲವಾರು ಜನಾಂಗಗಳ ಅನುಭವದ ಫಲ ಸ್ವರೂಪವಾಗಿ ಲಭ್ಯವಾಗಿತ್ತೆಂಬುದು ಸತ್ಯ. ಆರಂಭದಲ್ಲಿ ವ್ಯವಹಾರಕ್ಕೆ ಸಂಬಂಧಿಸಿದ ತಾಂತ್ರಿಕ ಜ್ಞಾನವಷ್ಟೇ ಆಗಿದ್ದ ರೇಖಾಗಣಿತವು ಗ್ರೀಕ್ ಜನಾಂಗದ ಸಂಸ್ಕೃತಿಯಲ್ಲಿ ಮಾನವನ ಭೌತಿಕ ಕ್ರಿಯೆಯ ಒಂದು ಶುದ್ಧ ಪ್ರಕಾರವೆಂಬಂತೆ ರೂಪುಗೊಂಡಿತು. ಹೀಗೆ ರೂಪುಗೊಂಡ ಬಗೆಯನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡಿ ನೋಡಿದಾಗ ಸಂಸ್ಕೃತಿಯೊಂದರ ಸಾಮಾಜಿಕ ಮತ್ತು ಆರ್ಥಿಕ ರೂಪುರೇಷೆಗಳಿಗೂ ಆ ಸಂಸ್ಕೃತಿಯಲ್ಲಿ ಪೋಷಿಸಿ ಬೆಳೆಸಲಾಗುವ 'ದರ್ಶನ', 'ಶಾಸ್ತ್ರ'ಗಳ ಸ್ವರೂಪಕ್ಕೂ ಆಳವಾದ ಅನ್ಯೋನ್ಯತೆ ಇರುತ್ತದೆ ಎಂಬ ಅಂಶ

ಸಂಖ್ಯೆಗಳು ಕೇವಲ ಬೌದ್ಧಿಕ ಅಥವಾ ತಾರ್ಕಿಕ ಸೃಷ್ಟಿಗಳಾಗಿದ್ದರೆ ಸ್ವಾಭಾವಿಕ ಸಂಖ್ಯೆಗಳ ನಂತರ ಬೆಳವಣಿಗೆಯು ಋಣಾತ್ಮಕ ಸಂಖ್ಯೆಗಳ ಆವಿಷ್ಕಾರದಲ್ಲಿ ಕೊನೆಗೊಳ್ಳಬಹುದಾಗಿತ್ತು. ಒಂದು ದೊಡ್ಡ ಸ್ವಾಭಾವಿಕ ಸಂಖ್ಯೆಯಿಂದ ಅದಕ್ಕಿಂತ ಸಣ್ಣ ಸ್ವಾಭಾವಿಕ ಸಂಖ್ಯೆಯನ್ನು ಕಳೆಯುವ ಪ್ರಕ್ರಿಯೆ ಅನುಭವಜನ್ಯವಾಗಿ ಒದಗಿಬಂತು. ಒಂದು ಸಂಖ್ಯೆಯಿಂದ ಇನ್ನೊಂದು ಸಂಖ್ಯೆಯನ್ನು ಕಳೆಯುವ ಒಂದು 'ಶುದ್ಧ ಗಣಿತ' ಪ್ರಕ್ರಿಯೆಯನ್ನು ಅನಿರ್ಬಂಧಿತವಾಗಿ ನಡೆಸಬೇಕಾದರೆ ಸೊನ್ನೆ ಮತ್ತು ಅದಕ್ಕಿಂತ ಕಡಿಮೆಯಾದ ಋಣಾತ್ಮಕ ಧನಪೂರ್ಣಾಂಕಗಳ ಅವಶ್ಯಕತೆಯನ್ನು ತಾರ್ಕಿಕವಾಗಿ ಕಂಡುಕೊಳ್ಳಬಹುದಾಗಿತ್ತು. ಆದರೆ ಚಾರಿತ್ರಿಕವಾಗಿ ಹಾಗಾಗಲಿಲ್ಲ. ಸ್ವಾಭಾವಿಕ ಸಂಖ್ಯೆಗಳ ಉಪಯೋಗದ ಸಾವಿರಾರು ವರ್ಷಗಳ ನಂತರವೇ ಋಣಾತ್ಮಕ ಸಂಖ್ಯೆಗಳನ್ನು ಗಣಿತದಲ್ಲಿ ಉಪಯೋಗಿಸಲಾಯಿತು. ಹದಿನಾರನೇ ಶತಮಾನದಲ್ಲಿದ್ದ ಸ್ಟೀಫೆಲ್ ಎಂಬ ಗಣಿತಶಾಸ್ತ್ರಜ್ಞ ತನ್ನ ಒಂದು ಗ್ರಂಥದಲ್ಲಿ (ಕ್ರಿ.ಶ. ೧೫೪೪) ಋಣಾತ್ಮಕ ಸಂಖ್ಯೆಗಳನ್ನು 'ಅಸಂಗತ' ಎಂದು ವರ್ಣಿಸಿದರೆ ಡೇಕಾರ್ಟ್‌ನಂತಹ ಮೇಧಾವಿ ಅವುಗಳನ್ನು 'ಸುಳ್ಳು' ಸಂಖ್ಯೆಗಳೆಂದು ಕರೆದ. ಅದಕ್ಕೂ ನೂರಾರು ವರ್ಷಗಳ ಮೊದಲಿನ ಭಾರತೀಯ ಗಣಿತವಿದ ಬ್ರಹ್ಮಗುಪ್ತನಿಗೆ (ಕ್ರಿ.ಶ. ೬೨೮) ಋಣಾತ್ಮಕ ಸಂಖ್ಯೆಗಳ ಉಪಯೋಗವು ಗೊತ್ತಿತ್ತು. ವ್ಯಾಪಾರ ವ್ಯವಹಾರದ 'ಸಾಲ'ದ ಭಾಗವನ್ನು ಋಣಾತ್ಮಕ ಸಂಖ್ಯೆಗಳನ್ನಾಗಿ ಮಾನ್ಯ ಮಾಡುವ ಪದ್ಧತಿ ಭಾರತದಲ್ಲಿ ಬ್ರಹ್ಮಗುಪ್ತನ ಕಾಲಕ್ಕಾಗಲೇ ಇತ್ತು! ಆದರೂ ಯಾವುದೇ ಸಮಸ್ಯೆಯನ್ನು ಬೀಜಗಣಿತ ರೀತ್ಯಾ ಬಿಡಿಸಿದಾಗ ಋಣಸಂಖ್ಯೆಗಳು ಉತ್ತರವೆಂಬಂತೆ ತೋರಿದರೆ ಅದನ್ನು ಸಲ್ಲದ ಉತ್ತರವೆಂಬಂತೆ ಪರಿಗಣಿಸಲಾಗುತ್ತಿತ್ತು (ಭಾಸ್ಕರಾಚಾರ್ಯ ಕ್ರಿ.ಶ. ೧೧೧೪). ಆಧುನಿಕ ಗಣಿತಶಾಸ್ತ್ರದ ಅಮೂರ್ತ ಪ್ರಕಾರಗಳ ವಿಶ್ವದಲ್ಲಿ ಧನಾತ್ಮಕ ಸಂಖ್ಯೆಗಳು ಮತ್ತು ಋಣಾತ್ಮಕ ಸಂಖ್ಯೆಗಳು ಸಮಾನ ಅಸ್ತಿತ್ವವನ್ನು ಹೊಂದಿವೆ. ಈ ಸಮಾನತೆಯ ಪರಿಕಲ್ಪನೆಯು ಚಾರಿತ್ರಿಕವಾಗಿ ಬೆಳೆದು ಒದಗಿಬಂದ ಒಂದು ಬೌದ್ಧಿಕ ಸಂಗತಿ ಎಂಬುದನ್ನು ಮುಖ್ಯವಾಗಿ ಗಮನಿಸಬೇಕು.

ಸ್ಪಷ್ಟವಾಗುತ್ತದೆ. ಅಂದಿನ ಗ್ರೀಕ್ ಸಮಾಜದ ವ್ಯವಸ್ಥೆಯ ತಳದಲ್ಲಿ ಗುಲಾಮ ವರ್ಗವಿದ್ದರೆ ಪ್ರಭುತ್ವ ನಡೆಸುವ ವರ್ಗ 'ಉಚ್ಚ' ಕುಲದವರೆನಿಸಿಕೊಳ್ಳುತ್ತಿದ್ದರು. ಕೈ ಕೆಸರಾಗುವ ಶ್ರಮದ ಕೆಲಸವು ಗುಲಾಮರ ಪಾಲಾದರೆ ಪ್ರಭುತ್ವವನ್ನು ನಡೆಸುವವರು 'ಬುದ್ಧಿಜೀವಿ'ಗಳಾಗಿದ್ದುಕೊಂಡು ಅಮೂರ್ತ ತತ್ವಗಳ ಆದರ್ಶ ಪ್ರಪಂಚದಲ್ಲಿ ವಿಹರಿಸಿಕೊಂಡಿರುವ 'ಅಧಿಕಾರ'ವನ್ನು ಹೊಂದಿದ್ದರು. ಮೂರ್ತ ಪ್ರಪಂಚದ ಉತ್ಪಾದನಾ ಕಾರ್ಯಗಳ ತಾಂತ್ರಿಕ ಪ್ರಕ್ರಿಯೆಯಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಳ್ಳುವುದು ಗುಲಾಮ ವರ್ಗಕ್ಕೆ ಪತನಗೊಳ್ಳುವ ದುರಂತವೆಂಬ ನಂಬಿಕೆ ಆ ಸಮಾಜದ ಬುದ್ಧಿಜೀವಿಗಳಿಗೆ ಸಹಜವಾಗಿತ್ತು. ವಾಸ್ತವ ಜೀವನದ ಗೌಣ ಪ್ರಕ್ರಿಯೆಗಳಿಂದ ವಿಮುಖಗೊಂಡ 'ಪ್ರಭು'ಗಳ ವರ್ಗವು ವಾಸ್ತವ ಜೀವನವನ್ನು ಅಲ್ಲಗಳೆದು ಶುದ್ಧ ತಾತ್ವಿಕ ಸತ್ವಗಳ ರೂಪಗಳನ್ನೊಳಗೊಂಡ ಆದರ್ಶ ಪ್ರಪಂಚದ ವಿಶ್ಲೇಷಣೆಯನ್ನು ವೈಭವೀಕರಿಸುವುದು ಸಹಜವಾಗಿದೆ. ಜ್ಯಾಕ್ ಶಾಪೆಲೋನ್ ಎಂಬ ಚಿಂತಕನು ವಿಮರ್ಶಿಸುವಂತೆ ''ತಾರ್ಕಿಕತೆ ಮತ್ತು ಅಮೂರ್ತ ತತ್ವಗಳೆಡೆಗೆ ಗ್ರೀಕ್ ಸಮಾಜಕ್ಕಿದ್ದ ಒಲವಿನ ಮೂಲ ಬಲವು ಆ ಸಮಾಜದ ರಚನೆಯ ಸ್ವರೂಪದಲ್ಲಿಯೇ ಹುದುಗಿದೆ.'' ಅವರ ತರ್ಕಪಾರಮ್ಯವಾದ ಮತ್ತು ಶುದ್ಧ ವೈಚಾರಿಕತೆಯ ದಾರಿಯಿಂದ ಸತ್ಯವನ್ನು ಕಂಡುಕೊಳ್ಳಬಹುದೆಂಬ ಅಪರಿಮಿತ ನಂಬಿಕೆಯ ಹಿಂದೆಯೂ, ಪ್ರಮೇಯವನ್ನು ಪ್ರಮಾಣೀಕರಿಸುವ ಅವರ ಶ್ಲಾಘನೀಯವಾದ ತಂತ್ರಗಳ ಹಿಂದೆಯೂ, ಅವರು ಬದುಕಿದ್ದ ಸಮಾಜದ ಸ್ವರೂಪವೇ ಹುದುಗಿದೆ.

ಗಣಿತಶಾಸ್ತ್ರದ (ಮುಖ್ಯವಾಗಿ ಜ್ಯಾಮಿತಿ) ಪ್ರಕಾರಗಳನ್ನು 'ಆದ್ಯುಕ್ತಿ'ಗಳ ಆಧಾರದ ಮೇಲೆ ನಿಲ್ಲಿಸಿ ಬೆಳೆಸುವ 'ಆದ್ಯುಕ್ತಿ ವಿಧಾನ'ವೂ ಕೂಡ ಗ್ರೀಕ್ ಸಂಸ್ಕೃತಿಯ ಕೊಡುಗೆ. ನಿಗಮನ ತಂತ್ರದಿಂದ ಪ್ರಮೇಯವನ್ನು ಪ್ರಮಾಣೀಕರಿಸಿ ತೋರಿಸುವ ತಾರ್ಕಿಕ ವಿಧಾನದಲ್ಲಿ ವಾದವನ್ನು ಒಂದು ನಿರ್ದಿಷ್ಟ ಕ್ರಮದಲ್ಲಿ ಮಂಡಿಸಲಾಗುತ್ತದೆ. ಈ ಕ್ರಮದಲ್ಲಿ, ಪ್ರತಿಯೊಂದು ಸ್ತರದಲ್ಲಿ ಮಂಡಿಸಲಾದ ವಾದದ ಸತ್ಯಾಸತ್ಯತೆಯು ಅದರ ಹಿಂದಿನ ಸ್ತರದಲ್ಲಿ ಮಂಡಿಸಲಾದ ವಾದದಿಂದ ಅತಿ ಸರಳವಾಗಿ ಗೋಚರವಾಗುತ್ತದೆ. ವಾದದ ಸರಣಿಯನ್ನು ನಿರಂತರವಾಗಿ ಹಿಂದಕ್ಕೆ ಕೊಂಡೊಯ್ಯಲು ಸಲ್ಲದಾದುದರಿಂದ ಆದಿಯಲ್ಲಿರುವ ಕೆಲವು ಉಕ್ತಿಗಳನ್ನು ಈಗಾಗಲೇ ಸತ್ಯವೆಂದು ಅಂಗೀಕರಿಸಬೇಕಾಗುತ್ತದೆ. ಹೀಗೆ ಪ್ರಶ್ನೆ ಮಾಡದೇ ಅಂಗೀಕರಿಸಿದ ತತ್ವಗಳನ್ನು 'ಆದ್ಯುಕ್ತಿ'ಗಳೆಂದು ಕರೆಯಲಾಗುತ್ತದೆ. ಆದ್ಯುಕ್ತಿಗಳಿಂದ ಆರಂಭಿಸಿ ಮುಂದೆ ಬರುವ ಎಲ್ಲಾ ವಾದಗಳ ಸತ್ಯಾಸತ್ಯತೆಯನ್ನು ನಿಗಮನದ ತಂತ್ರದಿಂದ ತಿಳಿದುಕೊಳ್ಳಬಹುದು.

ಗ್ರೀಸ್‌ನ ರೇಖಾಗಣಿತವು ಹೀಗೆ ಕೆಲವು ಆದ್ಯುಕ್ತಿಗಳ ಆಧಾರದ ಮೇಲೆ ಬೆಳೆಸಲ್ಪಟ್ಟ ಶಾಸ್ತ್ರವಾಗಿ ರೂಪುಗೊಂಡಿತು. ಯೂಕ್ಲಿಡ್‌ನ 'ಎಲಿಮೆಂಟ್ಸ್' ಎಂಬ ಹೆಸರಿನ ರೇಖಾಗಣಿತ ಗ್ರಂಥವು ಆದ್ಯುಕ್ತಿ ವಿಧಾನದಲ್ಲಿ ಶಾಸ್ತ್ರವನ್ನು ಮಂಡಿಸಿರುವ ಅತ್ಯಂತ ಪ್ರಸಿದ್ಧವಾದ ಮತ್ತು ಪ್ರಭಾವಶಾಲಿಯಾದ ಗಣಿತ ಗ್ರಂಥ.

ಕೈ ಕೆಸರಾಗುವ, ಭೂಮಿಯನ್ನು ಅಳೆಯುವ ಪ್ರಕ್ರಿಯೆ, ಇಟ್ಟಿಗೆಗಳ ನಿರ್ಮಾಣ, ಕಟ್ಟುವಿಕೆ ಇತ್ಯಾದಿ ಗೌಣ ತಾಂತ್ರಿಕ ಸನ್ನಿವೇಶಗಳ ಪರಿಮಿತಿಯಿಂದ ರೇಖಾಗಣಿತವನ್ನು ಮುಕ್ತಗೊಳಿಸಿ, ಶುದ್ಧ ತಾರ್ಕಿಕ ಪ್ರಕ್ರಿಯೆಗಳಿಂದ ಹಾಗೂ ಅಮೂರ್ತ ಜ್ಯಾಮಿತೀಯ ಪರಿಕಲ್ಪನೆಗಳಿಂದೊಡಗೂಡಿದ ಬೌದ್ಧಿಕ ಕಸರತ್ತಿಗೆ ಒಳಪಡಬಹುದಾದ ಶಾಸ್ತ್ರವನ್ನಾಗಿ ಜ್ಯಾಮಿತಿಯನ್ನು ಗ್ರೀಕ್ ಸಂಸ್ಕೃತಿ ಬೆಳೆಸಿತು. ಅಂತಹ ಬೆಳವಣಿಗೆಯ ಕುಂದು ಕೊರತೆಗಳೇನೇ ಇರಲಿ, ನಾವು ಗಮನಿಸಬೇಕಾದ ಅಂಶವೆಂದರೆ, ರೇಖಾಗಣಿತವು ವಿಪುಲವಾಗಿ ಬೆಳೆದು ಮತ್ತೊಮ್ಮೆ ಮೊದಲಿಗಿಂತ ಇನ್ನೂ ವ್ಯಾಪಕವಾದ ಅರ್ಥದಲ್ಲಿ ಆನ್ವಯಿಕ ಗಣಿತಶಾಸ್ತ್ರವಾಗಿ ಜ್ಯಾಮಿತಿಯಲ್ಲಿ

ಆದ್ಯುಕ್ತಿಗಳ ಆಧಾರದ ಮೇಲೆ ಗಣಿತಶಾಸ್ತ್ರದ ಸೌಧವನ್ನು ನಿರ್ಮಾಣ ಮಾಡುವ ಪದ್ಧತಿಯು ಗ್ರೀಕ್ ಜ್ಯಾಮಿತಿಯೊಡನೆ ಆರಂಭವಾಯಿತಷ್ಟೆ. ಯೂಕ್ಲಿಡ್‌ನ 'ಎಲಿಮೆಂಟ್ಸ್' ಗ್ರಂಥದಲ್ಲಿ ಜ್ಯಾಮಿತಿಯನ್ನು ಆದ್ಯುಕ್ತಿಗಳ ಆಧಾರದ ಮೇಲೆ ಮಂಡಿಸಲಾಗಿದ್ದು ನಂತರದ ಸಾವಿರಾರು ವರ್ಷಗಳವರೆಗೆ ಗಣಿತಶಾಸ್ತ್ರದ ಮೇಲೆ ಅದರ ತೀವ್ರ ಪ್ರಭಾವವಿತ್ತು. ಆದರೆ ಯೂಕ್ಲಿಡ್‌ನ ಆದ್ಯುಕ್ತಿಗಳನ್ನು ಸೂಕ್ಷ್ಮ ಪರೀಕ್ಷೆಗೆ ಒಳಪಡಿಸಿದಾಗ ಅದರಲ್ಲಿ ಅನೇಕ ನ್ಯೂನತೆಗಳು ಕಂಡುಬಂದವು. ಅದರಲ್ಲೂ ಸಮಾನಾಂತರ ಸರಳರೇಖೆಗಳಿಗೆ ಸಂಬಂಧಪಟ್ಟ ಒಂದು ಆದ್ಯುಕ್ತಿ ತೀರಾ ವಿವಾದಾತ್ಮಕವಾಗಿತ್ತು. ಆದ್ಯುಕ್ತಿಗಳ ಸುವ್ಯವಸ್ಥಿತ ಆಧಾರದ ಮೇಲೆ ಯೂಕ್ಲಿಡ್‌ನ ಜ್ಯಾಮಿತಿಯು ಗಣಿತಶಾಸ್ತ್ರ ಸಮ್ಮತವಾದ ರೂಪವನ್ನು ಪಡೆಯಲು ಯೂಕ್ಲಿಡ್‌ನ ನಂತರದ ಎರಡು ಸಾವಿರಕ್ಕೂ ಮೀರಿದ ವರ್ಷಗಳೇ ಸಂದವು. ಇಪ್ಪತ್ತನೇ ಶತಮಾನದಲ್ಲೇ ಅತ್ಯಂತ ದೊಡ್ಡ ಗಣಿತವಿದನೆಂದು ಖ್ಯಾತಿ ಗಳಿಸಿದ್ದ ಡೇವಿಡ್ ಹಿಲ್ಬರ್ಟ್ ಎಂಬ ಜರ್ಮನಿಯ ಗಣಿತ ಪಂಡಿತನು ಕಳೆದ ಶತಮಾನದ ಮೊದಲ ದಶಕದಲ್ಲಿ ಯೂಕ್ಲಿಡ್‌ನ ಜ್ಯಾಮಿತಿಯನ್ನು ಆದ್ಯುಕ್ತಿಗಳ ಆಧಾರದ ಮೇಲೆ ನಿರ್ವಿವಾದ ಸ್ವರೂಪದಲ್ಲಿ ನಿಲ್ಲಿಸಿದನು. ಈ ಸಂಬಂಧ ಹಿಲ್ಬರ್ಟ್ ಸೃಷ್ಟಿಸಿದ ಗಣಿತ ಪ್ರಕಾರವು ಆದ್ಯುಕ್ತಿಗಳ ಆಧಾರದ ಮೇಲೆ ಗಣಿತದ ಸೌಧಗಳನ್ನು ಕಟ್ಟಬಯಸುವ ಎಲ್ಲ ಗಣಿತ ಪಂಡಿತರಿಗೂ ಆದರ್ಶಪ್ರಾಯವಾಗಿ ನಿಂತಿದೆ. ಹಿಲ್ಬರ್ಟ್‌ನ ಕಾಲಕ್ಕಾಗಲೇ ಯೂಕ್ಲಿಡ್‌ನ ಜ್ಯಾಮಿತಿಗಿಂತ ವಿಭಿನ್ನವಾದ ಹಲವಾರು ಜ್ಯಾಮಿತಿಯ ಪ್ರಕಾರಗಳು ಉದಯವಾಗಿದ್ದವು. ನಾವಿರುವ ವಿಶ್ವದಲ್ಲಿ ನಮ್ಮ 'ಸಮೀಪ'ದ ಪರಿಸರವನ್ನು ಯೂಕ್ಲಿಡ್‌ನ ಜ್ಯಾಮಿತಿಯ ಸಹಾಯದಿಂದ 'ಅಳೆದು' ಅರ್ಥ ಮಾಡಿಕೊಳ್ಳಬಹುದು. ಆದರೆ ಇಡೀ ವಿಶ್ವವನ್ನು ಒಟ್ಟಾರೆಯಾಗಿ ಪರಿಗಣಿಸಿದಾಗ ಯೂಕ್ಲಿಡ್‌ನ ಜ್ಯಾಮಿತಿಯ ವ್ಯಾಪಕತೆಯು ತನ್ನ ಅರ್ಥವನ್ನು ಕಳೆದುಕೊಳ್ಳಬಹುದು. ಇಡೀ ವಿಶ್ವದಲ್ಲಿ ಸಲ್ಲಬಹುದಾದ ಜ್ಯಾಮಿತಿ ಯಾವುದೆಂಬುದನ್ನು ಭೌತಶಾಸ್ತ್ರಜ್ಞರು ನಿರ್ಧರಿಸಿಯಾರು. ಇದು ಗಣಿತಶಾಸ್ತ್ರಕ್ಕೆ ನೇರವಾಗಿ ಸಂಬಂಧಪಟ್ಟ ಪ್ರಶ್ನೆಯಲ್ಲ! ಯೂಕ್ಲಿಡ್‌ನ ಜ್ಯಾಮಿತಿಯ ಆದ್ಯುಕ್ತಿಗಳಿಗಿಂತ ವಿಭಿನ್ನ ಆದ್ಯುಕ್ತಿಗಳನ್ನು ಆಧಾರವಾಗುಳ್ಳ ಅನೇಕ ಹೊಸ ಜ್ಯಾಮಿತಿಗಳನ್ನು ಸೃಷ್ಟಿಸಿ ಅವುಗಳ ಅಧ್ಯಯನ ಮಾಡುವ ಸ್ವಾತಂತ್ರ್ಯ ಗಣಿತಶಾಸ್ತ್ರದ ಮೂಲತತ್ವದ ಆಂತರಿಕ ಅಂಗವಾಗಿದೆ. ಹಾಗೆ ಸೃಷ್ಟಿಸಿದ ಜ್ಯಾಮಿತಿಯಲ್ಲಿ ಯಾವುದಾದರೂ ಉಪಯೋಗಕ್ಕೆ ಒದಗಿಬಂದೀತು ! ರೈಮಾನಿಯನ್ ಜ್ಯಾಮಿತಿ ಎಂಬ ಯೂಕ್ಲಿಡ್‌ನ ಜ್ಯಾಮಿತಿಗಿಂತ ವಿಭಿನ್ನವಾದ ಜ್ಯಾಮಿತಿಯೊಂದು ರಿಲೆಟಿವಿಟಿ ಸಿದ್ಧಾಂತದಲ್ಲಿ ಉಪಯೋಗಕ್ಕೆ ಬಂದಿತು. ಈ ಹೊಸ ಜ್ಯಾಮಿತಿಯು ರಿಲೆಟಿವಿಟಿ ಸಿದ್ಧಾಂತದ ಮಂಡನೆಗಿಂತ ೬೦ ವರ್ಷಗಳ ಹಿಂದೆಯೇ ಬರ್ನಾರ್ಡ್ ರೈಮಾನ್ ಎಂಬ ಜರ್ಮನ್ ಗಣಿತವಿದನಿಂದ ಸೃಷ್ಟಿಯಾಗಿತ್ತು! ಆದ್ಯುಕ್ತಿಗಳ ವಿಧಾನದ ಗಣಿತಶಾಸ್ತ್ರದ ಹೆಗ್ಗಳಿಕೆಯ ಗುರುತಾಗಿ ಈ ಸಂಗತಿಯನ್ನು ಉದಾಹರಿಸಬಹುದಾಗಿದೆ.

ಧನ ಪೂರ್ಣಾಂಕಗಳು (ಸ್ವಾಭಾವಿಕ ಸಂಖ್ಯೆಗಳು) ಸೊನ್ನೆ, ಋಣ ಪೂರ್ಣಾಂಕಗಳು, ಒಂದು ಪೂರ್ಣಾಂಕವನ್ನು ಇನ್ನೊಂದು ಪೂರ್ಣಾಂಕ (ಸೊನ್ನೆಗಿಂತ ಭಿನ್ನವಾದ)ದಿಂದ ಭಾಗಿಸಿದಾಗ ಬರುವ ಸಂಖ್ಯೆಗಳು (ಇವುಗಳನ್ನು 'ಪರಿಮೇಯ' ಸಂಖ್ಯೆಗಳು ಎಂದು ಕರೆಯಲಾಗುತ್ತದೆ). ಇವಾವುವೂ ಅಲ್ಲದ 'ಅಪರಿಮೇಯ' ಸಂಖ್ಯೆಗಳು, ಇವೆಲ್ಲವುಗಳ ಒಟ್ಟು ರಾಶಿಯನ್ನು ನೈಜ ಸಂಖ್ಯೆಗಳ ರಾಶಿ ಎಂದು ಕರೆಯಲಾಗುತ್ತದೆ. ಸಂಖ್ಯೆಗಳ ಚರಿತ್ರೆಯಲ್ಲಿ 'ಅಪರಿಮೇಯ' ಸಂಖ್ಯೆಗಳ ಚರಿತ್ರೆ ಅತ್ಯಂತ ಪ್ರಭಾವಶಾಲಿಯಾದ ಪಾತ್ರವನ್ನು ವಹಿಸಿದೆ. ಆಶ್ಚರ್ಯವೆಂದರೆ ಅಪರಿಮೇಯ ಸಂಖ್ಯೆಗಳ ಅಸ್ತಿತ್ವವನ್ನು ಗ್ರೀಕ್ ರೇಖಾಗಣಿತದ ಬೆಳವಣಿಗೆಯ ಕಾಲದಲ್ಲಿಯೇ ಪ್ರಾಯಶಃ ಮೊದಲ ಬಾರಿ ಗುರುತಿಸಲಾಯಿತು. ಆದರೆ ಗ್ರೀಸ್‌ನ ಗಣಿತವು ಪ್ರಧಾನವಾಗಿ ರೇಖಾಗಣಿತವೇ ಆಗಿತ್ತು. ಅಪರಿಮೇಯ ಸಂಖ್ಯೆಗಳನ್ನು ಅಂದಿನ ರೇಖಾಗಣಿತದ ತಾರ್ಕಿಕ - ತಾಂತ್ರಿಕ ನೆಲೆಗಟ್ಟಿನೊಳಗೆ ಸಹಜವಾಗಿ ಅಳವಡಿಸಲು ಅಸಾಧ್ಯವಾಗಿದ್ದರಿಂದ ಅಪರಿಮೇಯ ಸಂಖ್ಯೆಗಳ ತಾಂತ್ರಿಕ ಉಪಯೋಗ ಅಂದಿನ ಗಣಿತಕ್ಕೆ ಒದಗಿಬರಲಿಲ್ಲ. ಅದಲ್ಲದೆ ಗ್ರೀಕ್ ಗಣಿತಶಾಸ್ತ್ರವು, ಯೂಕ್ಲಿಡ್‌ನ 'ಎಲಿಮೆಂಟ್ಸ್' ಗ್ರಂಥ ರೂಪದಲ್ಲಿ, ಅನೇಕ ಸಾವಿರ ವರ್ಷಗಳವರೆಗೆ ತನ್ನ ಅತಿಯಾದ ಪ್ರಭಾವವನ್ನು ಬೀರಿದ್ದರಿಂದ ಚಾರಿತ್ರಿಕವಾಗಿ ಗಣಿತದ ಬೆಳವಣಿಗೆಯು ಕುಂಠಿತವಾಯಿತು. ಏಕೆಂದರೆ ಅಪರಿಮೇಯ ಸಂಖ್ಯೆಗಳ ಉಪಯೋಗವಿಲ್ಲದೆ ಗಣಿತಶಾಸ್ತ್ರವು ತಾಂತ್ರಿಕವಾಗಿ ಸಮೃದ್ಧಿಗೊಂಡು ಬೆಳೆಯಲು ಅಸಾಧ್ಯವಾಗಿತ್ತು. ಬೀಜಗಣಿತವನ್ನು ಪ್ರಧಾನವಾಗಿ ಬೆಳೆಸಿ ಮುಂದುವರಿಸಿದ ಭಾರತೀಯ ಗಣಿತಶಾಸ್ತ್ರಜ್ಞರು ಅಪರಿಮೇಯ ಸಂಖ್ಯೆಗಳನ್ನೂ ಇತರ ಸಂಖ್ಯೆಗಳಂತೆಯೇ ಸಹಜವಾದವುಗಳೆಂಬ ರೀತಿಯಲ್ಲಿ ವ್ಯಾವಹಾರಿಕ ಸ್ತರದಲ್ಲಿ ಉಪಯೋಗಿಸತೊಡಗಿದುದು ಅವರ ಹೆಗ್ಗಳಿಕೆ. ಭಾರತೀಯರಿಂದ ಅರಬ್ಬರಿಗೂ, ಅರಬ್ಬರಿಂದ ಸಮೃದ್ಧಗೊಂಡು ಯೂರೋಪಿಗೂ (ಮುಖ್ಯವಾಗಿ ಇಟಲಿ) ಪ್ರಸರಿಸಿದ ಬೀಜಗಣಿತದ ಪ್ರಕಾರವು ಯೂರೋಪಿನಲ್ಲಿ ಪಕ್ವಗೊಂಡಿತು. ಬೀಜಗಣಿತದಲ್ಲಿ ತಾಂತ್ರಿಕ ಉಪಯೋಗ ಕಂಡ ಅಪರಿಮೇಯ ಸಂಖ್ಯೆಗಳನ್ನೂ ಸಹ ತಾರತಮ್ಯವಿಲ್ಲದೆ ಸಂಖ್ಯಾಲೋಕಕ್ಕೆ ಸೇರಿಸಿಕೊಳ್ಳಲಾಯಿತು. ನೈಜ ಸಂಖ್ಯೆಗಳು ಆಧುನಿಕ ಗಣಿತಶಾಸ್ತ್ರದ ಅತ್ಯಂತ ಮೂಲಭೂತವಾದ ಗಣಿತ ಪ್ರಕಾರವಾಗಿದೆ. ಆದರೆ ಅವುಗಳು ಗಣಿತಶಾಸ್ತ್ರದ ಶುದ್ಧ ಭೌತಿಕ ಪ್ರಕಾರಗಳಾಗಿ ಆದ್ಯುಕ್ತಿಗಳ ಆಧಾರದ ಮೇಲೆ ಲಭ್ಯವಾಗಲು ಗಣಿತಶಾಸ್ತ್ರದ ಚರಿತ್ರೆಯಲ್ಲಿ ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದವರೆಗೂ ಕಾಯಬೇಕಾಯಿತು.

ತಾಂತ್ರಿಕ ಕ್ರಾಂತಿಗೆ ಅನುವು ಮಾಡಿಕೊಡುವಲ್ಲಿ, ಹಿಂದೆ ಹೇಳಿದ 'ಶಾಸ್ತ್ರ' ಸ್ವರೂಪವನ್ನು ಪಡೆಯುವುದು ಅವಶ್ಯಕವಾಗಿತ್ತು ಎಂಬುದನ್ನು ರೇಖಾಗಣಿತದಲ್ಲಾದ ಈ ಬೆಳವಣಿಗೆಯು ಸ್ವಾಭಾವಿಕ ಸಂಖ್ಯೆಗಳ ಬೆಳವಣಿಗೆಯ ಸಂದರ್ಭದಲ್ಲಿ ಹಿಂದೆ ಉದಾಹರಿಸಿದ ಏಂಗಲ್ಸ್‌ರ ಹೇಳಿಕೆಗೆ ಅನುಸಾರವಾಗಿಯೇ ಇದೆ ಎಂಬುದು ಗಮನಾರ್ಹ !

ಆದರೆ ಆದ್ಯುಕ್ತಿಗಳನ್ನಾಗಿ ಯಾವುದನ್ನು ಸ್ವೀಕರಿಸಬೇಕು ? ಇದರ ನಿರ್ಧಾರ ಹೇಗೆ ? ಯಾವುದೇ ಗಣಿತ ಪ್ರಕಾರದ ಬೆಳವಣಿಗೆಯು ಆದ್ಯುಕ್ತಿಗಳ ಆಧಾರದ ಮೇಲೆ ಕಂಡುಬರಬೇಕಾದರೆ ಚರಿತ್ರೆಯ ಕೆಲವು ನಿರ್ದಿಷ್ಟ ಘಟ್ಟಗಳಲ್ಲಿ ಮಾತ್ರ ಸಾಧ್ಯವಾಗುತ್ತದೆ. ನೈಜ ಜೀವನದ ದೈನಂದಿನ ಪ್ರಕ್ರಿಯೆಗಳಿಂದ ಹುಟ್ಟಿ, ಚಾರಿತ್ರಿಕವಾಗಿ ಮೂರ್ತ-ಅಮೂರ್ತ ಸ್ತರಗಳಲ್ಲಿ ಬೆಳೆದು ವ್ಯಾಪಕತೆಯಲ್ಲಿ, ಸಂಕೀರ್ಣತೆಯಲ್ಲಿ, ತಾಂತ್ರಿಕತೆಯಲ್ಲಿ ಸಾಕಷ್ಟು ಪಕ್ವಗೊಂಡ ಶಾಸ್ತ್ರ ಪ್ರಕಾರಗಳು ಮಾತ್ರ ಆದ್ಯುಕ್ತಿಗಳ ವಿಧಾನಕ್ಕೆ ಒಗ್ಗಿ ಬರಬಲ್ಲವು. ಗ್ರೀಕ್ ಸಂಸ್ಕೃತಿಯ ಕೊಡುಗೆಯಾದ ರೇಖಾಗಣಿತವು ಆದ್ಯುಕ್ತಿಗಳ ವಿಧಾನದಲ್ಲಿ ಅರಳುವುದಕ್ಕೆ ಮೊದಲು ಹಿಂದೆ ಹೇಳಿದಂತಹ ಪಕ್ವತೆಯನ್ನು ಹೊಂದಿತ್ತು. (ಗ್ರೀಸಿನಲ್ಲಲ್ಲದೆ ಬೇರೆಲ್ಲೂ ಜ್ಯಾಮಿತಿ ಹೊಮ್ಮಲಿಲ್ಲವೆಂದು ಇದರರ್ಥವಲ್ಲ). ಯೂಕ್ಲಿಡ್‌ನ 'ಎಲಿಮೆಂಟ್ಸ್' ಅಲ್ಲಿಯವರೆಗಿನ ರೇಖಾಗಣಿತದ ಜ್ಞಾನದ ಸುವ್ಯವಸ್ಥಿತ ಕ್ರೋಢೀಕರಣವಾಗಿತ್ತು ಎಂದು ನಂಬಲು ಆಧಾರಗಳಿವೆ. ಸ್ವಾಭಾವಿಕ ಸಂಖ್ಯೆಗಳು ಪುರಾತನ ಸಂಸ್ಕೃತಿಗಳ ಕೊಡುಗೆಯಾಗಿದ್ದರೂ ಅವುಗಳನ್ನು ಆದ್ಯುಕ್ತಿಗಳ ವಿಧಾನದಲ್ಲಿ (ಈ ಆದ್ಯುಕ್ತಿಗಳಿಗೆ 'ಪಿಯನೋ' ಆದ್ಯುಕ್ತಿಗಳೆಂದು ಹೆಸರು) ಮಂಡಿಸುವ ಪ್ರಕ್ರಿಯೆಯು ಫಲಸ್ವರೂಪವನ್ನು ಪಡೆದದ್ದು ೧೮೮೮-೯೧ರಲ್ಲಿ! ಅಂದರೆ ಸ್ವಾಭಾವಿಕ ಸಂಖ್ಯೆಗಳ ಉಪಯೋಗವು ಮೊದಲು ವ್ಯಾವಹಾರಿಕವಾಗಿ ನಡೆದುಬಂದು, ನಂತರ ಮಾನವನ ಪ್ರಜ್ಞಾಸ್ತರದಲ್ಲಿ ಪಕ್ವಗೊಂಡು ಆದ್ಯುಕ್ತಿಗಳ ಆಧಾರದ ಮೇಲೆ ಅಸ್ತಿತ್ವವನ್ನು ಪಡೆಯಲು ಹಲವಾರು ಸಾವಿರ ವರ್ಷಗಳೇ ಸಂದವು ! ಗಣಿತಶಾಸ್ತ್ರದ ಚರಿತ್ರೆಯಲ್ಲಿ ಇಂತಹ ಉದಾಹರಣೆಗಳು ವಿಪುಲವಾಗಿವೆ.

ಗಣಿತಶಾಸ್ತ್ರವೂ ಕೂಡ ಭೌತಶಾಸ್ತ್ರ, ಜೀವಶಾಸ್ತ್ರ, ರಸಾಯನಶಾಸ್ತ್ರ, ಸಮಾಜಶಾಸ್ತ್ರಗಳಂತೆ ಅನುಭವಜನ್ಯವಾದ ಶಾಸ್ತ್ರ. ಮಾನವ ಸಮಾಜವು ಚಾರಿತ್ರಿಕವಾಗಿ ಬೆಳೆಯುತ್ತಾ ಸಂಸ್ಕೃತಿಯ ವೈವಿಧ್ಯಮಯ ಘಟ್ಟಗಳನ್ನು ದಾಟುತ್ತಾ ಸಂಚಯಿಸಿದ ಅನುಭವಗಳು ಹಲವಾರು ಬಾರಿ ಮೂರ್ತ-ಅಮೂರ್ತ ಸ್ತರಗಳ ದ್ವಂದ್ವದ ಮೂಸೆಯಲ್ಲಿ ಶುದ್ಧಿಗೊಂಡು ಸಾಮಾಜಿಕವಾಗಿ ಉಪಯುಕ್ತವಾದ, ಬೌದ್ಧಿಕವಾಗಿ ರಂಜನೀಯವಾದ ಶಾಸ್ತ್ರವಾಗಿ ಗಣಿತಶಾಸ್ತ್ರವು ಉಗಮಗೊಂಡಿದೆ. ಗಣಿತಶಾಸ್ತ್ರದ ಬೆಳವಣಿಗೆಯನ್ನು ಚಾರಿತ್ರಿಕವಾಗಿ ವಿಶ್ಲೇಷಿಸಿ ಪಾಠ ಕಲಿಯದ ಅನೇಕ ಬೂರ್ಜ್ವಾ ವಿಜ್ಞಾನಿಗಳು, ಭೌತಿಕವಾಗಿ ಯಾವ ರಾಗವಿಕಾರಗಳಿಗೂ ಒಳಪಡದ ಶುದ್ಧ ಬೌದ್ಧಿಕ ಪ್ರಕಾರಗಳಾದ ಗಣಿತೀಯ ನಿರ್ಮಾಣಗಳು [illegible] ಶುದ್ಧ [illegible] ವಿಜ್ಞಾನದಲ್ಲಿ ಎಂದಿಗೂ ಮೀರಿ [illegible] ರೀತಿಯಲ್ಲಿ ಪ್ರಭಾವಶಾಲಿಯಾಗಿರುವುದೇಕೆ ಎಂದು [illegible]. ಗಣಿತಶಾಸ್ತ್ರವು ನಿರಂತರವಾಗಿ ಇತರ ಅನುಭವಜನ್ಯಶಾಸ್ತ್ರಗಳೊಡನೆ ಕೊಡುವ-ಕೊಳ್ಳುವ ವ್ಯವಹಾರವನ್ನು ಅದರ ಚರಿತ್ರೆಯ ಎಲ್ಲ ಕಾಲದಲ್ಲೂ ಹೊಂದಿರುವುದರಿಂದಲೇ ಇನ್ನೂ ಜೀವಂತವಾಗಿದೆ ಮತ್ತು ಸಮೃದ್ಧಿ ಪಡೆಯುತ್ತಿದೆ ಎಂದರೆ ತಪ್ಪಾಗಲಾರದು. ವಿಜ್ಞಾನದ ದಿಗ್ಗಜಗಳಾದ ಗೆಲಿಲಿಯೋ, ನ್ಯೂಟನ್, ಐನ್‌ಸ್ಟೈನ್, ಫೇನ್‌ಮನ್ ಅಂತಹವರ ಪ್ರಜ್ಞಾಸ್ತರದಲ್ಲಿ ಗಣಿತ ಮತ್ತು ಭೌತಶಾಸ್ತ್ರಗಳು ಪರಸ್ಪರ ಅನ್ಯೋನ್ಯತೆಯನ್ನು ಸಾಧಿಸಿದ್ದವೆಂಬುದು ಗಮನಾರ್ಹ.




ಆದರೂ, ಗಣಿತಶಾಸ್ತ್ರದ ಆಂತರಿಕ ವಿನ್ಯಾಸವನ್ನು ನಿರ್ದೇಶಿಸುವ ಬೌದ್ಧಿಕ - ತಾಂತ್ರಿಕ ಸಾಧನಗಳು ಇತರ ಅನುಭವಜನ್ಯಶಾಸ್ತ್ರಗಳೊಳಗಿನ ಸಾಧನಗಳಿಗಿಂತ ವಿಭಿನ್ನ ಎಂಬುದು ಒಂದು ಮುಖ್ಯ ಅಂಶ. ಗಣಿತಶಾಸ್ತ್ರದಲ್ಲಿ ಬರುವ ಪ್ರಮೇಯಗಳ, ಸಿದ್ಧಾಂತಗಳ, ಪ್ರಮಾಣಗಳ ಸತ್ಯಾಸತ್ಯತೆಯನ್ನು ನಿರ್ಧರಿಸುವ ಬಗೆ ಉಳಿದ ಶಾಸ್ತ್ರ ಪ್ರಕಾರಗಳಿಗಿಂತ ಭಿನ್ನವಾಗಿದೆ. ಉದಾಹರಣೆಯಾಗಿ : ತರ್ಕ ಮತ್ತು ಗಣಿತಶಾಸ್ತ್ರಗಳು ವಿಶ್ಲೇಷಿಸುವ ಪ್ರಕಾರಗಳು ಭೌತಿಕ ಪ್ರಪಂಚದ ವಸ್ತುಗಳನ್ನೇ ಮೂಲವಸ್ತುಗಳನ್ನಾಗಿ ವಿಶ್ಲೇಷಿಸುವ ಭೌತಶಾಸ್ತ್ರ ಪ್ರಕಾರಗಳಿಗಿಂತ ವಿಭಿನ್ನ. ''ವಿವಿಧ ವಸ್ತುಗಳ ನಡುವಣ ತಾರ್ಕಿಕ ಸಂಬಂಧಗಳನ್ನು ಕುರಿತು ಅಧ್ಯಯನ ಮಾಡುವುದೇ ಗಣಿತಶಾಸ್ತ್ರದ ಗುರಿಯಲ್ಲದೆ ಆಯಾ ವಸ್ತುಗಳನ್ನೇ ಕುರಿತಂತಲ್ಲ'' ಎಂದು ಗಣಿತಶಾಸ್ತ್ರದ ಮೂಲ ಸ್ವರೂಪವನ್ನು ಹ್ರಸ್ವರೂಪದಲ್ಲಿ ವ್ಯಾಖ್ಯಾನಿಸುವುದುಂಟು. ಇಲ್ಲಿ 'ವಸ್ತು' ಎಂದರೆ ಭೌತಿಕವಾಗಿ ಇರುವ ವಸ್ತುಗಳೇ ಆಗಿರಬೇಕೆಂದೇನೂ ಅಲ್ಲ. ಗಣಿತಶಾಸ್ತ್ರದಲ್ಲಿ ಬರುವ ವಸ್ತುಗಳ ಕಲ್ಪನೆಯ ಮೂಲ ಪ್ರಚೋದನೆ ಏನೇ ಆಗಿರಲಿ (ಅವು ಚಾರಿತ್ರಿಕವಾಗಿ ಅನುಭವಜನ್ಯವಾಗಿ ರುತ್ತವೆ) ಅದು ಗಣಿತಶಾಸ್ತ್ರದ ವಿಶ್ಲೇಷಣೆಗೆ ಒಳಪಡುವಾಗ ಒಂದು ಅಮೂರ್ತ ಸ್ವರೂಪವನ್ನೇ ಪಡೆದಿರುತ್ತವೆ. ಹೀಗಾಗಿ ಗಣಿತಶಾಸ್ತ್ರದಲ್ಲಿ ವಿಶ್ಲೇಷಣೆಗೆ ಒಳಪಡುವ ವಸ್ತುಗಳು ಅಮೂರ್ತ ಪ್ರಕಾರಗಳು ಮತ್ತು ಈ ವಸ್ತುಗಳ ನಡುವಣ ತಾರ್ಕಿಕ ಸಂಬಂಧಗಳು ಅಮೂರ್ತ ಪ್ರಕಾರಗಳು (ಉದಾಹರಣೆಗೆ :

ಪರಿಮೇಯ ಸಂಖ್ಯೆಗಳಲ್ಲದ ಸಂಖ್ಯೆಗಳು ಅಪರಿಮೇಯ ಸಂಖ್ಯೆಗಳು. ಅಂದರೆ ಅಪರಿಮೇಯ ಸಂಖ್ಯೆಗಳನ್ನು ಒಂದು ಪೂರ್ಣಾಂಕವನ್ನು ಇನ್ನೊಂದು ಪೂರ್ಣಾಂಕದಿಂದ ಭಾಗಿಸಿದಾಗ ಬರುವ ಭಾಗಲಬ್ಧದ ರೂಪದಲ್ಲಿ ಬರೆಯಲಾಗುವುದಿಲ್ಲ. ಅಪರಿಮೇಯ ಸಂಖ್ಯೆಗಳ ಉದಾಹರಣೆಯಾಗಿ ಎರಡರ ವರ್ಗಮೂಲ $\sqrt{2}$ ಮತ್ತು $\pi$(ಪೈ) ಎಂಬ ಗ್ರೀಕ್ ಅಕ್ಷರದಿಂದ ಕರೆಯಲಾಗುವ ಸಂಖ್ಯೆಗಳನ್ನು ನಮೂದಿಸಬಹುದು. ಗ್ರೀಕ್ ಗಣಿತಶಾಸ್ತ್ರದ ಕಾಲದಲ್ಲಾಗಲೇ ಈ ಸಂಖ್ಯೆಗಳು ಜ್ಯಾಮಿತೀಯವಾಗಿ ಅವತರಿಸಿದ್ದವು. ಉದಾಹರಣೆಗೆ: ಒಂದು ಮಾನದ ಬಾಹುಗಳುಳ್ಳ ಒಂದು ಚಚ್ಚೌಕದ ಕರ್ಣದ ಉದ್ದ $\sqrt{2}$ ಮಾನವಾಗಿರುತ್ತದೆ. ಹಾಗೆಯೇ ಯಾವುದೇ ವೃತ್ತದ ಪರಿಧಿಯನ್ನು ಅದರ ವ್ಯಾಸದಿಂದ ಭಾಗಿಸಿದಾಗ ಬರುವ ಭಾಗಲಬ್ಧವು $\pi$ ಆಗಿರುತ್ತದೆ. ಇಂತಹ ಸಂಖ್ಯೆಗಳು ಗ್ರೀಕ್ ಜ್ಯಾಮಿತಿಯನ್ನು ಬೆಳೆಸಿದ ಗಣಿತಜ್ಞರಿಗೆ ಚಕಿತಗೊಳಿಸಿದ್ದೇಕೆ ಮತ್ತು ಅವರಿಗೆ ಅಂತಹ ಸಂಖ್ಯೆಗಳು ಅಪರಿಗ್ರಾಹ್ಯವಾಗಿದ್ದೇಕೆ ? ಪರಿಮೇಯ ಸಂಖ್ಯೆಗಳಿಗೂ ಅಪರಿಮೇಯ ಸಂಖ್ಯೆಗಳಿಗೂ ಇರುವ ಮೂಲಭೂತ ಅಂತರವನ್ನು ತಿಳಿಯುವ ಒಂದು ವಿಧಾನ, ಸಂಖ್ಯೆಗಳ ದಶಮಾಂಶ ರೂಪದತ್ತ ಗಮನಹರಿಸುವುದು. (ಯಾವುದೇ ನೈಜ ಸಂಖ್ಯೆಯನ್ನು ದಶಮಾಂಶ ರೂಪದಲ್ಲಿ ಬರೆಯಬಹುದು ಎಂಬ ಪ್ರಮೇಯ ನೈಜ ಸಂಖ್ಯೆಗಳೆಂದರೇನೆಂಬುದರ 'ವ್ಯಾಖ್ಯೆ'ಯ ಆಧಾರದ ಮೇಲೆ ನಿಂತಿದೆ ಮತ್ತು ಇದೊಂದು ಆಧುನಿಕ ಗಣಿತಶಾಸ್ತ್ರದ ಕೊಡುಗೆ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು). ಯಾವುದೇ ಪರಿಮೇಯ ಸಂಖ್ಯೆಯ ದಶಮಾಂಶ ರೂಪವನ್ನು (ಆ ರೂಪದಲ್ಲಿ ಅನಂತ ಸಂಖ್ಯೆಯ ಅಂಕಿಗಳಿರುವಾಗಲೂ) ಭಾಗಾಹಾರದ ಸಾಂತವಾದ ಪ್ರಕ್ರಿಯೆಯಿಂದ ಒಮ್ಮೆಲೇ 'ಆಂಗಿಕ'ವಾಗಿ ಪಡೆದುಕೊಳ್ಳಬಹುದು. ಅಪರಿಮೇಯ ಸಂಖ್ಯೆಗಳಿಗೆ ಇದು ಸಾಧ್ಯವಿಲ್ಲ. ಉದಾಹರಣೆಗೆ: $\sqrt{2}$ ದಶಮಾಂಶ ರೂಪವನ್ನು ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಅವುಗಳ ದಶಮಾಂಶ ರೂಪದಲ್ಲಿರುವ ಕೋಟ್ಯಾನುಕೋಟಿ ಅಂಕಿಗಳವರೆಗೆ ಪ್ರಯಾಸಪಟ್ಟು ಲೆಕ್ಕ ಹಾಕಿ ಪಡೆಯಬಹುದು. ಆದರೆ ಅದರ ಮುಂದಿನ ಅಂಕೆ ಯಾವುದು ಎಂದು ತಿಳಿಯಬೇಕಾದರೆ ಲೆಕ್ಕವನ್ನು ಮತ್ತೊಮ್ಮೆ ಮುಂದುವರಿಸಿಯೇ ಪಡೆಯಬೇಕು. ಗಣಿತಶಾಸ್ತ್ರದ ಸಾಂತ ಪ್ರಕ್ರಿಯೆಗಳನ್ನು ಒಗ್ಗಿಸಿಕೊಂಡ ಗ್ರೀಕ್ ಚಿಂತನಾಕ್ರಮಕ್ಕೆ ಈ ಹೊಸ ಪ್ರಕಾರದ 'ಅನಂತ'ದ ಸ್ವರೂಪ ಒಗ್ಗಿಬರಲಿಲ್ಲ.

ಪರಿಮೇಯ ಸಂಖ್ಯೆಗಳ ಮತ್ತು ಅಪರಿಮೇಯ ಸಂಖ್ಯೆಗಳ ನಡುವಣ ಮೂಲಭೂತ ವ್ಯತ್ಯಾಸದ ನೆಲೆ ಯಾವುದು ಎಂಬುದರ ತಾತ್ವಿಕ ವಿಶ್ಲೇಷಣೆ ಗ್ರೀಕ್ ಸಂಸ್ಕೃತಿಯ ನಂತರದ ಹಲವಾರು ಸಾವಿರ ವರ್ಷಗಳವರೆಗೆ ನಡೆದು ಹಿಂದೆ ಹೇಳಿದಂತೆ ಹತ್ತೊಂಬತ್ತನೇ ಶತಮಾನದ ಕೊನೆಯ ದಶಕದಲ್ಲಿ ಕ್ಯಾಂಟರ್, ಡೆಡಕಿಂಡ್ ಮುಂತಾದ ಗಣಿತವಿದರ ಚಿಂತನೆಯ ಫಲಸ್ವರೂಪವಾಗಿ ನೈಜ ಸಂಖ್ಯೆಗಳ ರೂಪದಲ್ಲಿ ಗಣಿತಶಾಸ್ತ್ರಕ್ಕೆ ಒದಗಿಬಂದಿತು. ಇದೇ ಸಂದರ್ಭದಲ್ಲಿ, ಒಂದು ಶುದ್ಧ ಗಣಿತ ಪ್ರಕಾರವಾಗಿ ಆದ್ಯುಕ್ತಿಗಳ ಭದ್ರ ಬುನಾದಿಯ ಮೇಲೆ ನೈಜ ಸಂಖ್ಯೆಗಳು ಒದಗಿಬರುವುದಕ್ಕೂ ಮುಂದಾಗಿಯೇ ಅನೇಕ ಶತಮಾನಗಳವರೆಗೆ ಅವುಗಳ ತಾಂತ್ರಿಕ ಉಪಯೋಗಗಳಾಗುತ್ತಿದ್ದುವೆಂಬುದನ್ನು ಗಮನಿಸಲು ಮರೆಯಬಾರದು.

ಜ್ಯಾಮಿತಿಯಲ್ಲಿ ಬರುವ ಸರಳರೇಖೆಯನ್ನು ಯಾರೂ ಯಾವಾಗಲೂ ಭೌತಿಕವಾಗಿ ಎಳೆಯಲು ಸಾಧ್ಯವಿಲ್ಲ).

ಐನ್‌ಸ್ಟೈನರ 'ಜನರಲ್ ರಿಲೆಟಿವಿಟಿ' ಸಿದ್ಧಾಂತ ಮೊದಲ ಬಾರಿ ಪ್ರಕಟವಾದಾಗ ಗಣಿತಶಾಸ್ತ್ರಜ್ಞರಿಗೆ ಅದು ಒಂದು ಗಣಿತೀಯ ಪ್ರಕಾರವಾಗಿ ಸಂಪೂರ್ಣವಾಗಿ ಪರಿಗ್ರಾಹ್ಯವಾಯಿತು. ಗಟಿಂಗೆನ್ ಎಂಬ ಹೆಸರಿನ ಜರ್ಮನಿಯ ವಿಶ್ವವಿದ್ಯಾನಿಲಯದ ಗಣಿತ ಪಂಡಿತರಲ್ಲಿ ಕೆಲವರು, ಈ ಮೊದಲೇ ಇದನ್ನೆಲ್ಲಾ ತಾವೇ ಕಂಡುಹಿಡಿದು ಬಿಟ್ಟಾಗಿತ್ತೆಂದು ಖಾಸಗಿಯಾಗಿ ಪರಸ್ಪರ ಹೇಳಿಕೊಳ್ಳುವ ಮಟ್ಟಿಗೆ ಅದೊಂದು ಮಾನ್ಯವಾದ ಗಣಿತ ಪ್ರಕಾರವಾಗಿತ್ತು. ಇದಕ್ಕೆ ಕಾರಣ ರೈಮಾನಿಯನ್ ಜ್ಯಾಮಿತಿ ಎಂಬ ಜ್ಯಾಮಿತಿಯ ಒಂದು ಪ್ರಕಾರ ರಿಲೆಟಿವಿಟಿ ಸಿದ್ಧಾಂತದ ಅಡಿಪಾಯವನ್ನು ಒದಗಿಸಿತ್ತು. ರಿಲೆಟಿವಿಟಿ ಸಿದ್ಧಾಂತ ರೈಮಾನಿಯನ್ ಜ್ಯಾಮಿತಿಯ ಹೊಸ 'ಭೌತಿಕ' ವ್ಯಾಖ್ಯಾನವಷ್ಟೇ ಎನ್ನುವವರೆಗೆ ಗಣಿತವಿದರು ಆ ಸಿದ್ಧಾಂತವನ್ನು ಪರಿಗಣಿಸಬಹುದಾಗಿತ್ತು. ಆದರೆ ರಿಲೆಟಿವಿಟಿ ಸಿದ್ಧಾಂತ ಕೇವಲ ಗಣಿತದ ಒಂದು ಸುಂದರ ರೂಪದರ್ಶಿಯಷ್ಟೇ ಅಲ್ಲ, ಅದೊಂದು 'ಭೌತ' ಸಿದ್ಧಾಂತ ಎಂದು ಪರಿಗ್ರಾಹ್ಯವಾಗಬೇಕಾದರೆ ಪೂರ್ಣ ಸೂರ್ಯ ಗ್ರಹಣದ ಒಂದು ಸನ್ನಿವೇಶದಲ್ಲಿ ಆ ಸಿದ್ಧಾಂತದ ಭೌತಿಕ ತಿರುಳನ್ನು ಪ್ರಾಯೋಗಿಕವಾಗಿ ಸತ್ಯ ಶೋಧನೆಗೆ ಒಳಪಡಿಸಿ ತೀರ್ಮಾನಿಸಬೇಕಾಯಿತು ! ಗಟಿಂಗೆನ್‌ನ ಗಣಿತ ವಿದ್ವಾಂಸರು ಏನೇ ಹೇಳಲಿ, ರಿಲೆಟಿವಿಟಿ ಸಿದ್ಧಾಂತದಂತಹ ಒಂದು ಭೌತಿಕ ಸಿದ್ಧಾಂತ ವನ್ನು ಕಂಡುಹಿಡಿಯಲು ಒಬ್ಬ ಭೌತಶಾಸ್ತ್ರ ವಿಜ್ಞಾನಿ ಯಿಂದಲೇ ಸಾಧ್ಯ ! ಗಣಿತದ ಅಮೂರ್ತ ಪ್ರಪಂಚದಲ್ಲಿ ವಿಹರಿಸುವ ಸೀಮಿತ ಪ್ರಕ್ರಿಯೆಯಿಂದ ರಿಲೆಟಿವಿಟಿ ಯಂತಹ ಭೌತಿಕ ಸಿದ್ಧಾಂತದ ಉದಯ ಆಗುತ್ತಿರಲಿಲ್ಲ. ಐನ್‌ಸ್ಟೈನರು ಭೌತಶಾಸ್ತ್ರಜ್ಞರಷ್ಟೇ ಅಲ್ಲದೆ, ಒಬ್ಬ ಒಳ್ಳೆಯ ಗಣಿತಶಾಸ್ತ್ರಜ್ಞರೂ ಆಗಿದ್ದರು. ಗಣಿತವು ಆನ್ವಯಿಕ ಶಾಸ್ತ್ರವಾದಾಗ ಮಾನವ ಸಂಸ್ಕೃತಿಗೆ ಮಹತ್ತರ ಕೊಡುಗೆ ಯನ್ನು ಕೊಡಬಲ್ಲುದು ಎನ್ನುವುದಕ್ಕೆ ರಿಲೆಟಿವಿಟಿ ಸಿದ್ಧಾಂತ ಒಂದು ನಿದರ್ಶನ. ಅಲ್ಲದೆ ಗಣಿತಕ್ಕೂ, ಗಣಿತವನ್ನು ಪ್ರಧಾನ ತಾಂತ್ರಿಕ ಶಕ್ತಿಯನ್ನಾಗಿ ಉಪಯೋಗಿಸುವ ಅನುಭವಜನ್ಯ ವಿಜ್ಞಾನ ಪ್ರಕಾರಗಳಿಗೂ ಇರುವ ಅಂತರ ವನ್ನು ಮೇಲೆ ಹೇಳಿದ ಸಂಗತಿಯು ಸ್ಪಷ್ಟಪಡಿಸುತ್ತದಷ್ಟೆ.

ಗಣಿತಶಾಸ್ತ್ರವೂ ಇತರ ಶಾಸ್ತ್ರಗಳಂತೆ ತಾಂತ್ರಿಕ ಸಂಶೋಧನೆ ಮತ್ತು ಹುಡುಕಾಟಗಳ ಸಂದರ್ಭದಲ್ಲಿ ವಿಕಾಸಗೊಳ್ಳುತ್ತದೆ. ಆದಾಗ್ಯೂ ಬೇರೆ ವೈಜ್ಞಾನಿಕ ಪ್ರಕಾರಗಳ ಪ್ರಮೇಯಗಳಿಗೂ ಗಣಿತಶಾಸ್ತ್ರದ ಪ್ರಮೇಯಗಳಿಗೂ ನಿರ್ದಿಷ್ಟವಾದ ಒಂದು ವ್ಯತ್ಯಾಸವಿದೆ. ತರ್ಕ ಮತ್ತು ಗಣಿತಶಾಸ್ತ್ರಗಳು ಮಾನವನ ಹತ್ತು ಹಲವು ವ್ಯವಹಾರಗಳ ಸಂದರ್ಭದಲ್ಲಿ ಮೂಡಿಬಂದಿವೆ. ಈ ವ್ಯವಹಾರಗಳೇ ಆ ಶಾಸ್ತ್ರಗಳ ವಿಶ್ಲೇಷಣೆಗಳಿಗೆ ವಸ್ತು. ಕಾರ್ಯ-ಕಾರಣ ಭಾವವನ್ನು ಸ್ಥಾಪಿಸುವುದಾಗಲಿ, ಲೆಕ್ಕಾಚಾರಗಳನ್ನು ಮಾಡುವುದಾಗಲಿ ನಮ್ಮ ಸುತ್ತಣ ವಸ್ತುಗಳ ಹಾಗೂ ಘಟನೆಗಳ ಅನ್ವೇಷಣೆಗೆ ತಂತ್ರಗಳಷ್ಟೆ. ತರ್ಕ ಹಾಗೂ ಗಣಿತಶಾಸ್ತ್ರಗಳ ಉಕ್ತಿಗಳು ಈ ತಂತ್ರಗಳ ಅನ್ವೇಷಣೆಯಲ್ಲಿನ ಫಲಿತಾಂಶಗಳನ್ನು ನಮೂದಿಸುತ್ತವೆ. ಇದನ್ನು ಮಾರಿಸ್ ಕಾರ್ನ್‌ಫೋರ್ತ್ ಎಂಬ ಮಾರ್ಕ್ಸ್‌ವಾದಿ ಚಿಂತಕನು ತನ್ನೊಂದು ಕೃತಿಯಲ್ಲಿ ಹೀಗೆ ವಿವರಿಸಿದ್ದಾನೆ : ತರ್ಕ ಮತ್ತು ಗಣಿತಶಾಸ್ತ್ರಗಳಲ್ಲಿ ಪ್ರಮೇಯವೆಂದು ಯಾವುದನ್ನು ಕರೆಯುತ್ತಾರೋ ಅದು ನಿಜಕ್ಕೂ ಪ್ರಮೇಯವೇ ಅಲ್ಲ. ಅವಲೋಕನದಿಂದ ಹೊಮ್ಮುವ ಹೇಳಿಕೆಗಳು ಅಥವಾ ಅವಲೋಕನದ ಆಧಾರವನ್ನು ಹೊಂದಿರುವ ವಿಜ್ಞಾನ ಶಾಖೆಗಳ ಹೇಳಿಕೆಗಳು ಈ ರೀತಿಯ ಪ್ರಮೇಯಗಳೆನಿಸಿ ಕೊಳ್ಳುವುದಿಲ್ಲ. ಯಾವುದೋ ನಿರ್ದಿಷ್ಟ ಸನ್ನಿವೇಶದಲ್ಲಿ ಅನ್ವಯವಾಗುವಂತಹ ಹೇಳಿಕೆಗೂ ಸಾರ್ವತ್ರಿಕ ಅನ್ವಯವನ್ನುಳ್ಳ ಹೇಳಿಕೆಗೂ ವ್ಯತ್ಯಾಸ ಸಹಜವಾದದ್ದು. ವಾಸ್ತವಿಕವಾಗಿ ಇರುವುದಕ್ಕೂ ತಾರ್ಕಿಕ ಅಥವಾ ಗಣಿತಶಾಸ್ತ್ರೀಯ ದೃಷ್ಟಿಯಿಂದ ಅವಶ್ಯಕವೆನಿಸುವುದಕ್ಕೂ ವ್ಯತ್ಯಾಸವಿದ್ದರೆ ಅದು ಕೇವಲ ಸಾಮಾನ್ಯೀಕರಣಗೊಂಡ ಹೇಳಿಕೆಯ ಸ್ವರೂಪದಲ್ಲಿ ಇರುವುದಷ್ಟೇ ಅಲ್ಲ – ಇದರಲ್ಲಿ ವಿಶಿಷ್ಟವಾದ ಕಾರ್ಯ-ಕಾರಣ ಭಾವದ ತಂತ್ರ ಅಥವಾ ಲೆಕ್ಕಾಚಾರ ಮಾಡುವ ತಂತ್ರ ಇದ್ದು ಅದನ್ನಾಧರಿಸಿ ಅನ್ವೇಷಣೆಯ ಮೂಲಕ ತೀರ್ಮಾನಗಳಿಗೆ ಬರುವ ಪದ್ಧತಿ ಇರುತ್ತದೆ. ಸಾಂಸ್ಕೃತಿಕ ಹರಹು ವಿಸ್ತಾರವಾಗುತ್ತಾ ಹೋಗುವ ಪ್ರಕ್ರಿಯೆಯಲ್ಲಿ ಇದೆಲ್ಲಾ ಅಡಗಿರುತ್ತದೆ.

*(ಮುಂಬೈ ವಿಶ್ವವಿದ್ಯಾನಿಲಯದಲ್ಲಿ ಗಣಿತಶಾಸ್ತ್ರದ ಪ್ರಾಧ್ಯಾಪಕರಾಗಿ ಹಲವು ವರ್ಷ ಕೆಲಸ ಮಾಡಿರುವ ಫೇಕಡತ್ ಅವರ ಆಂಗ್ಲ ಲೇಖನವನ್ನು ಸಮರ್ಥವಾಗಿ ಕನ್ನಡದಲ್ಲಿ 'ಹೊಸತು'ವಿಗಾಗಿ ಸಿದ್ಧಗೊಳಿಸಿಕೊಟ್ಟವರು ಮಂಗಳೂರು ವಿಶ್ವವಿದ್ಯಾನಿಲಯದ ಗಣಿತಶಾಸ್ತ್ರ ಪ್ರಾಧ್ಯಾಪಕರಾದ ಡಾ॥ ಸಂಪತ್ಕುಮಾರ್. ಅನೇಕ ಉಪಯುಕ್ತ ವಿಷಯಗಳನ್ನು ಪೂರಕವಾಗಿ ಸೇರಿಸಿ ಲೇಖನವನ್ನು ಸಮಗ್ರಗೊಳಿಸಿರುವ ಡಾ॥ ಸಂಪತ್ಕುಮಾರ್ ಅವರಿಗೆ 'ಹೊಸತು' ಋಣಿಯಾಗಿದೆ).*

ಡಾ॥ ಕೆ. ಕೆ. ಫೇಕಡತ್
[illegible]

ಚರಿತ್ರೆಯಲ್ಲಿ ಗಣಿತಶಾಸ್ತ್ರದ ಬೆಳವಣಿಗೆಯನ್ನು ಪ್ರಚೋದಿಸುತ್ತಿರುವ ಚಿಂತನಾಕ್ರಮಗಳನ್ನು ಎರಡು ವಿಭಿನ್ನ 'ದಾರ್ಶನಿಕ' ಪ್ರಕಾರಗಳನ್ನಾಗಿ ವಿಭಾಗಿಸಬಹುದು. ಗ್ರೀಕ್‌ನ ಜ್ಯಾಮಿತಿಯ ಹಿನ್ನೆಲೆಯಲ್ಲಿದ್ದ 'ಬೌದ್ಧಿಕ ಮತ್ತು ತಾರ್ಕಿಕ' ಪ್ರಧಾನವಾದ ಚಿಂತನಾಕ್ರಮ ಈ ವಿಭಿನ್ನ ಬಗೆಗಳಲ್ಲಿ ಒಂದಾಗಿದೆ. ಗ್ರೀಕ್ ಸಂಸ್ಕೃತಿಗಿಂತಲೂ ಚಾರಿತ್ರಿಕವಾಗಿ ಹಳೆಯದಾದ 'ಈಜಿಪ್ಟ್' ಮತ್ತು 'ಬ್ಯಾಬಿಲೋನಿಯ' ಸಂಸ್ಕೃತಿ ನೆಲೆಗಟ್ಟಿನ ಗಣಿತ ಮತ್ತು ಗ್ರೀಕ್ ಸಂಸ್ಕೃತಿಯ ಕೊನೆ ಹಂತಗಳಲ್ಲಿ ಕಂಡುಬಂದ ಅಲೆಗ್ಸಾಂಡ್ರಿಯಾ ಕೇಂದ್ರೀಕೃತ ಗಣಿತಶಾಸ್ತ್ರ, ಅದರ ನಂತರ ಕ್ರಮವಾಗಿ ಭಾರತದಲ್ಲಿ ಮತ್ತು ಅರಬ್ಬರಲ್ಲಿ ಕಾಣಿಸಿಕೊಂಡ ಗಣಿತಶಾಸ್ತ್ರ ಪದ್ಧತಿ, ಇವುಗಳೆಲ್ಲವೂ ಪ್ರಧಾನವಾಗಿ ಅನುಭವಜನ್ಯವಾಗಿದ್ದು , ವ್ಯವಹಾರ ಕೇಂದ್ರೀಕೃತವಾಗಿದ್ದು ಮೇಲೆ ಹೇಳಿದ ದಾರ್ಶನಿಕ ಬಗೆಗಳ ಎರಡನೆಯ ಪ್ರಕಾರಕ್ಕೆ ಉದಾಹರಣೆಗಳಾಗಿವೆ. ಆದರೆ ತೋರಿಕೆಗೆ ವಿಭಿನ್ನವಾದರೂ ಈ ಎರಡೂ ಬಗೆಯ ಚಿಂತನಾಕ್ರಮಗಳು ಒಂದಕ್ಕೊಂದು ಪೂರಕವಾಗಿ ಅಭಿವ್ಯಕ್ತಿಗೊಂಡಿರುವ ಸನ್ನಿವೇಶಗಳು ಗಣಿತಶಾಸ್ತ್ರ ಚರಿತ್ರೆಯಲ್ಲಿ ಅನೇಕವಾಗಿ ಇವೆ. ಅಲ್ಲದೆ ಹಾಗೆ ಪೂರಕವಾಗಿ ಅಭಿವ್ಯಕ್ತಿಗೊಂಡಾಗಲೆಲ್ಲ ಗಣಿತಶಾಸ್ತ್ರದಲ್ಲೂ ಕ್ರಾಂತಿಕಾರಕ ಬದಲಾವಣೆಗಳು ಕಂಡುಬರುತ್ತವೆ. ಅಷ್ಟೇ ಅಲ್ಲ, ಈ ವಿಭಿನ್ನ ದಾರ್ಶನಿಕ ಪ್ರಕಾರಗಳ ಪ್ರಭಾವ ಗಣಿತಶಾಸ್ತ್ರದ ಚರಿತ್ರೆಯ ಎಲ್ಲ ಘಟ್ಟಗಳಲ್ಲೂ ಕಂಡುಬರುತ್ತದೆ. ಈ ಎರಡು ಪ್ರಕಾರಗಳಲ್ಲಿ ಯಾವ ಪ್ರಕಾರ ಹೆಚ್ಚು ಪರಿಣಾಮ ಬೀರುತ್ತದೆ ಎಂಬುದು ಆಯಾ ಕಾಲದ ಸಾಮಾಜಿಕ ಸಾಂಸ್ಕೃತಿಕ ಕಾಳಜಿಗಳೇನೆಂಬುದನ್ನು ಅವಲಂಬಿಸುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

ಅಲೆಗ್ಸಾಂಡ್ರಿಯಾ ನಂತರದಲ್ಲಿ ಗಣಿತಶಾಸ್ತ್ರವು ಭಾರತದಲ್ಲಿ ಪ್ರಶಂಸನೀಯವಾದ ಬೆಳವಣಿಗೆಯನ್ನು ಕಂಡಿತು. ಭಾರತೀಯ ಗಣಿತಶಾಸ್ತ್ರವೂ ಕೂಡ (ಅಲೆಗ್ಸಾಂಡ್ರಿಯಾದಲ್ಲಾದಂತೆ) ಅನುಭವಜನ್ಯ-ವ್ಯವಹಾರ ಕೇಂದ್ರೀಕೃತವಾಗಿಯೇ (ಮುಖ್ಯವಾಗಿ ಖಗೋಳಶಾಸ್ತ್ರದ ಅವಶ್ಯಕತೆ ಪೂರೈಸಲು) ಬೆಳೆಯಿತು. ಆದರೆ ಅದು ಕೆಲವೇ ಶತಮಾನಗಳಲ್ಲಿ ಕುಂಠಿತಗೊಂಡು 'ಜ್ಯೋತಿಷ'ದ ಗೌಣ ಅವಶ್ಯಕತೆಗಳನ್ನು ಪೂರೈಸುವ ಸೀಮಿತ ಮಟ್ಟಕ್ಕೆ ಪತನಗೊಂಡದ್ದು ಭಾರತೀಯ ವಿಜ್ಞಾನದ ಚರಿತ್ರೆಯಲ್ಲಿ ಒಂದು ದುರಂತ ಘಟ್ಟ. ಅಂತ ದುರಂತ ಚರಿತ್ರೆಯ ಹಿನ್ನೆಲೆಯಲ್ಲಿದ್ದ 'ದಾರ್ಶನಿಕ' ಪ್ರಕಾರ ಯಾವುದೆಂಬ ಅಧ್ಯಯನದಿಂದ ಸೂಕ್ತ ಪಾಠ ಕಲಿಯಬಹುದು.

ಯೂಕ್ಲಿಡ್‌ನ ಕಾಲದ ರೇಖಾಗಣಿತದ ತಾಂತ್ರಿಕ ಜ್ಞಾನವನ್ನು ಆದ್ಯುಕ್ತಿಗಳ ಆಧಾರದ ಮೇಲೆ ತಾರ್ಕಿಕವಾಗಿ ನಿಲ್ಲಿಸುವ ಪ್ರಯತ್ನದ ಫಲ ಸ್ವರೂಪವೇ ಯೂಕ್ಲಿಡ್‌ನ 'ಎಲಿಮೆಂಟ್ಸ್' ಎನ್ನುವ ಗ್ರಂಥವೆಂದು ತಿಳಿದೆವಷ್ಟೆ. ಇದೇ ರೀತಿಯ ಮತ್ತೊಂದು ಮಹಾಸಾಹಸವನ್ನು ಇಪ್ಪತ್ತನೇ ಶತಮಾನದ ಮಧ್ಯಭಾಗದಲ್ಲಿ ಫ್ರಾನ್ಸ್‌ನ ಗಣಿತವಿದರ ಗುಂಪೊಂದು ಕೈಗೊಂಡಿತು. ಇಪ್ಪತ್ತನೇ ಶತಮಾನದ ಮಧ್ಯಭಾಗವೆಂದರೆ, ಗಣಿತಶಾಸ್ತ್ರ ಪ್ರಕಾರಗಳು ಹಿಂದೆಂದೂ ಕಾಣದ ರೀತಿಯಲ್ಲಿ ಉತ್ಕರ್ಷಗೊಂಡು, ವ್ಯಾಪ್ತಿಯಲ್ಲಿ, ಸಂಕೀರ್ಣತೆಯಲ್ಲಿ ಗರಿಷ್ಠ ಮಟ್ಟವನ್ನು ತಲುಪಿದ್ದ ಕಾಲವೆಂಬುದನ್ನು ನೆನಪಿನಲ್ಲಿಡಬೇಕು. ಅಂತಹ ಗಣಿತಶಾಸ್ತ್ರದ ಸೌಧವನ್ನು ಬೆರಳೆಣಿಕೆಯ ಕೆಲವು ಆದ್ಯುಕ್ತಿಗಳ ಅಡಿಪಾಯದ ಮೇಲೆ ನಿಲ್ಲಿಸುವ ಪ್ರಯತ್ನ ಅದು. ಐವತ್ತು ವರ್ಷಗಳಿಗೂ ಕಡಿಮೆ ಪ್ರಾಯವಿರುವ ಗಣಿತವಿದರು ಮಾತ್ರ ಸದಸ್ಯತ್ವ ಹೊಂದಿರಬಹುದೆಂಬ (ಐವತ್ತಕ್ಕೂ ಮೀರಿದ ವ್ಯಕ್ತಿಗಳಲ್ಲಿ ಸೃಜನಶೀಲತೆ ಕುಂಠಿತವಾಗಿರುತ್ತದೆಂಬ ಕಲ್ಪನೆ !) ನಿಯಮದಡಿ ಒಂದುಗೂಡಿದ ಈ ಗುಂಪು, 'ಬೂರ್‌ಬಾಕಿ' ಎಂಬ ಕಾಲ್ಪನಿಕ ನಾಮದಡಿಯಲ್ಲಿ 'ಎಲಿಮೆಂಟ್ಸ್' (ಯೂಕ್ಲಿಡ್‌ನ ಪ್ರಯತ್ನವನ್ನು ನೆನಪಿಗೆ ತರುವ ಉದ್ದೇಶ) ಎಂಬ ಮಹದ್ ಗ್ರಂಥಗಳ ಮಾಲೆಯನ್ನು ಪ್ರಕಟಣೆ ಮಾಡತೊಡಗಿದರು. ಈ ಗ್ರಂಥಗಳು ಇಪ್ಪತ್ತನೆಯ ಶತಮಾನದ ಗಣಿತಶಾಸ್ತ್ರದ ಬೆಳವಣಿಗೆಯ ಮೇಲೆ ತೀವ್ರ ಪ್ರಭಾವ ಬೀರಿದವು.

# ಅರುಣ ಶೌರಿ ಅವರ ಅರ್ಧ ಸತ್ಯಗಳು

ಡಾ|| ಬಿ. ವಿ. ವೀರಭದ್ರಪ್ಪ

ಅರುಣ ಶೌರಿ ಅವರು ತಮ್ಮ 'ಸುಳ್ಳು ದೇವತೆಗಳ ಆರಾಧನೆ' ಎಂಬ ಗ್ರಂಥದ ಮೂಲಕ ದಲಿತ ಲೋಕದಲ್ಲಿ ಉಂಟುಮಾಡಿದ ಕೋಲಾಹಲ ತಣ್ಣಗಾಗಲು ಕೆಲವು ವರ್ಷಗಳೇ ಬೇಕಾಯಿತು. ಆ ಕೃತಿಗೆ ಮಾರುತ್ತರವಾಗಿ ಅನೇಕರು ಪ್ರತಿಕ್ರಿಯಿಸುತ್ತಾ ಬಂದಿದ್ದಾರೆ. ಅವರಲ್ಲಿ ಐ.ಎ.ಎಸ್. ಅಧಿಕಾರಿ ಸ್ವಪನ್‌ಕುಮಾರ್ ಬಿಸ್ವಾಸ್ ಒಬ್ಬರು. ಅವರು ೧೯೯೮ರಲ್ಲಿ ಪ್ರಕಟಿಸಿದ 'ದೇವತೆಗಳು, ಸುಳ್ಳು ದೇವತೆಗಳು ಮತ್ತು ಅಸ್ಪೃಶ್ಯರು' (ಗಾಡ್ಸ್, ಫಾಲ್ಸ್ ಗಾಡ್ಸ್ ಅಂಡ್ ದಿ ಅನ್‌ಟಚಬಲ್ಸ್) ಗಮನಾರ್ಹವಾಗಿದೆ. ಪ್ರಕಟವಾದ ಒಂದೇ ವರ್ಷದಲ್ಲಿ ಪುನರ್ಮುದ್ರಣಗೊಂಡಿದ್ದರೂ ಅದು ಸುದ್ದಿ ಮಾಧ್ಯಮಗಳ ಗಮನ ಸೆಳೆಯದಿರುವುದು ಆಶ್ಚರ್ಯವೇನಲ್ಲ. ನಮ್ಮ ಸುದ್ದಿ ಮಾಧ್ಯಮಗಳು ಯಾರ ಸೂತ್ರದ ಗೊಂಬೆಗಳು ಎಂಬುದಕ್ಕೆ ಇದು ಒಂದು ದೃಷ್ಟಾಂತ ಮಾತ್ರ.

ಅರುಣ ಶೌರಿಯವರ ಎಲ್ಲ ಏಕಪಕ್ಷೀಯವಾದ ದೀರ್ಘ ಆರೋಪಗಳಿಗೆ ಬಿಸ್ವಾಸ್ ಅವರು ಅಧಿಕೃತ ದಾಖಲೆಗಳ ರೂಪದಲ್ಲಿ ಅಷ್ಟೇ ಸುದೀರ್ಘವಾದ ಉತ್ತರಗಳನ್ನು ನೀಡಿದ್ದಾರೆ. ಅಷ್ಟೇ ಅಲ್ಲ, ಶೌರಿಯವರು ಯಾವ ಸತ್ಯ ಸಂಗತಿಗಳನ್ನು ಮರೆಮಾಚಲು ತಮ್ಮ ಬೌದ್ಧಿಕ ಕಸರತ್ತನ್ನು ಎಷ್ಟು ಜಾಗರೂಕತೆಯಿಂದ ಬಳಸಿದ್ದಾರೆ ಎಂಬುದನ್ನು ಓದುಗರಿಗೆ ಮನಮುಟ್ಟುವಂತೆ ಬಿಡಿಸಿ ತೋರಿಸಿದ್ದಾರೆ.

ಶೌರಿ ಅವರ ದೃಷ್ಟಿಯಲ್ಲಿ ಆಕ್ರಮಣಕಾರರಾದ ಆರ್ಯರು ಮಾತ್ರ ನಿಜ ದೇವತೆಗಳು. ಅವರ ದಾಸ್ಯಕ್ಕೆ ತುತ್ತಾದ ಮೂಲ ನಿವಾಸಿಗಳನ್ನು ಪ್ರತಿನಿಧಿಸುವ ಅಂಬೇಡ್ಕರ್, ಮಹಾತ್ಮ ಜ್ಯೋತಿರಾವ್ ಫುಲೆ, ಛತ್ರಪತಿ ಶಾಹೂ ಮಹರಾಜ್, ಪೆರಿಯಾರ್ ಇ. ವಿ. ರಾಮಸ್ವಾಮಿ ನಾಯ್ಕರ್, ನಾರಾಯಣ ಗುರು ಮುಂತಾದವರು ಸುಳ್ಳು ದೇವತೆಗಳು.

ಅಂಬೇಡ್ಕರರನ್ನು ಸುಳ್ಳು ದೇವತೆ ಎಂದು ಆರೋಪಿಸಿ ಗ್ರಂಥ ರಚಿಸಿದ ನಂತರ ಅರುಣ ಶೌರಿ ಅವರ ಚಿಂತನೆಗಳು ಅದೇ ದಿಕ್ಕಿನಲ್ಲಿ ಮುಂದುವರಿದುವು. ಅವರು ಕಮ್ಯುನಿಸ್ಟರು, ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರನ್ನು ಕುರಿತು ಅದೇ ರೀತಿಯ ಅವಹೇಳನಕಾರಿ ಆರೋಪಗಳಿಗೆ ಗುರಿಪಡಿಸಿದ ಗ್ರಂಥಗಳನ್ನು ರಚಿಸಿದರು. ವಾಸ್ತವಾಂಶವೇನೆಂದರೆ ಅವರಿಂದ ಇದುವರೆಗೂ ಅವಹೇಳನಕ್ಕೆ ಗುರಿಯಾಗದಿರುವ ಒಂದೇ ಒಂದು ವರ್ಗದ ಭಾರತೀಯರೆಂದರೆ ಮೇಲು ಜಾತಿಯ ಹಿಂದುಗಳು ಎಂಬುದು ಸ್ಪಷ್ಟವಿದೆ. ಅಲ್ಪಸಂಖ್ಯಾತರನ್ನು ಈ ರೀತಿ ಅಪಮಾನಗೊಳಿಸುವುದರಲ್ಲಿ ಆನಂದ ಅನುಭವಿಸುವ ಶೌರಿ ಅವರು ಒಂದು ಕಾಲದಲ್ಲಿ ಧರ್ಮ ವಿರೋಧಿ ಎಡಪಂಥೀಯರಾಗಿದ್ದರು ಎಂಬುದು ಅನೇಕರಿಗೆ ತಿಳಿಯದು.

ಬರಹಗಳ ಮೂಲಕ ವ್ಯಕ್ತವಾಗಿರುವ ಶೌರಿಯವರ ವ್ಯಕ್ತಿತ್ವವನ್ನು ಐಸಾಕ್ ಡಾಯ್‌ಚರ್ ಹೀಗೆ ಕ್ರೋಡೀಕರಿಸಿದ್ದಾರೆ :

''ತಮ್ಮ ಸಂಕುಚಿತತನ, ವಿವೇಚನಾರಾಹಿತ್ಯ, ಸತ್ಯ ಸಂಗತಿಗಳನ್ನು ಮರೆಮಾಚಲು ಪ್ರದರ್ಶಿಸುವ ನಿಸ್ಸಂಕೋಚ ಪ್ರವೃತ್ತಿ ಹಾಗೂ ಸ್ಟಾಲಿನ್‌ವಾದದಿಂದ ಮೈಗೂಡಿಸಿಕೊಂಡ ದ್ವೇಷ ಭಾವನೆಗಳು (ಶೌರಿ) ಅವರ ವೃತ್ತಿಯ ಸಾಧನ ಸಲಕರಣೆಗಳಾಗಿವೆ. ಅವರಿಗೆ ಜಗತ್ತು ಯಾವಾಗಲೂ ಕಪ್ಪು ಮತ್ತು ಬಿಳುಪು ವರ್ಣಗಳಲ್ಲಿ ಮಾತ್ರ ಕಾಣುತ್ತದೆ. ಆದರೆ ಆ ಬಣ್ಣಗಳು ಈಗ ತಿರುಗು ಮುರುಗಾಗಿ ಮಾರ್ಪಟ್ಟಿವೆ. ಒಮ್ಮೆ ಕಮ್ಯುನಿಸ್ಟ್ ಆಗಿದ್ದ ಅವರಿಗೆ ತಮ್ಮ ಹಿಂದಿನ ಆದರ್ಶಗಳಿಗೆ ದ್ರೋಹ ಬಗೆದೆನೆಂಬ ಅಳುಕು ಸದಾ ಕಾಡಿಸುತ್ತಿರುವಂತಿದೆ. ಅವರು ಆ ಅಪರಾಧ ಮನೋಭಾವವನ್ನು ಅದುಮಿಡಲು ಪ್ರಬಲವಾದ ಆಕ್ರಮಣಕಾರಿ ಧೋರಣೆಯನ್ನು ಪ್ರದರ್ಶಿಸುವುದುಂಟು. ತನ್ನ ಡೋಲಾಯಮಾನ ಮನಸ್ಸನ್ನೇ ಜಗತ್ತು ಸ್ವಚ್ಛ ಮನಸ್ಸು ಎಂಬುದಾಗಿ ತಿಳಿಯಬೇಕೆಂಬ ಬಯಕೆ ಅವರದಾಗಿದೆ. ಆತ್ಮ ಸಮರ್ಥನೆಯನ್ನು ಬಿಟ್ಟು ಅವರಿಗೆ ಮತ್ತಾವ ಆದರ್ಶವೂ ಇಲ್ಲ.'' (ಹಿಂದು, ಡಿಸೆಂಬರ್ ೧೦, ೨೦೦೦)

ಸ್ವಪನ್‌ಕುಮಾರ್ ಬಿಸ್ವಾಸ್ ಅವರು ತಮ್ಮ ಸುದೀರ್ಘವಾದ ಸಾಕ್ಷ್ಯಾಧಾರಗಳಿಂದ ಶೌರಿ ಅವರ ಪ್ರತಿಯೊಂದು ವಾದವನ್ನು ನಿರ್ವೀರ್ಯಗೊಳಿಸಿ ಶತಮಾನಗಳಿಂದ ರೂಢಿಗತವಾಗಿ ಬಂದ ಸನಾತನ ನಂಬಿಕೆಗಳಲ್ಲಿರುವ ಹುಂಬುತನವನ್ನು ಬಟ್ಟಬಯಲು ಮಾಡಿದ್ದಾರೆ.

ಶೌರಿ ಮತ್ತು ಬಿಸ್ವಾಸ್ ಅವರ ಕೃತಿಗಳಲ್ಲಿ ಅತ್ಯಂತ ತೀಕ್ಷ್ಣ ವಿವಾದಕ್ಕೊಳಗಾಗಿರುವ ಸಂಘರ್ಷ ಗಾಂಧಿ ಮತ್ತು ಅಂಬೇಡ್ಕರ್‌ರಿಗೆ ಸಂಬಂಧಿಸಿದುದಾಗಿದೆ. ಗಾಂಧಿ ಅಸ್ಪೃಶ್ಯತೆಯನ್ನು ನಿಷೇಧಿಸಿ ಹಿಂದು ಧರ್ಮಕ್ಕೆ ಅಂಟಿದ್ದ ಕಳಂಕವನ್ನು ತೊಡೆದುಹಾಕಲು ಬಯಸಿದ್ದರು; ಅಂಬೇಡ್ಕರ್ ಶ್ರೇಣೀಕೃತ ಹಿಂದು ಧಾರ್ಮಿಕ ವ್ಯವಸ್ಥೆಯ ಹೊರಗೆ ಮಾತ್ರ ತನ್ನ ಜನರ ಸಮಸ್ಯೆಗೆ ಪರಿಹಾರವಿದೆ ಎಂದು ಬಗೆದರು. ಗಾಂಧಿ ಗ್ರಾಮೀಣ ಜೀವನದ ಬಗ್ಗೆ ಭಾವುಕರಾಗಿದ್ದರು. ಅವರಿಗೆ ಗ್ರಾಮ ಸ್ವಯಮಾಡಳಿತವು ಸ್ವತಂತ್ರ ಭಾರತದ ಅಡಿಗಲ್ಲಾಗಬೇಕೆಂಬ ಹಂಬಲವಿತ್ತು. ಆಧುನಿಕ ತಂತ್ರಜ್ಞಾನ ಹಾಗೂ ನಗರ ಜೀವನದ ಅಭಿಮಾನಿಯಾಗಿದ್ದ ಅಂಬೇಡ್ಕರ್ ಭಾರತೀಯ ಹಳ್ಳಿಗಳನ್ನು ಅಸಮಾನತೆಯ ಹಾಳು ಕೊಂಪೆಗಳೆಂದು ಭಾವಿಸಿದ್ದರು. ಗಾಂಧಿ ಒಂದು ಬಗೆಯ ಅರಾಜಕತ್ವವಾದಿಯಾಗಿ ಅಹಿಂಸಾತ್ಮಕ ಸತ್ಯಾಗ್ರಹವನ್ನು ಎತ್ತಿಹಿಡಿದರೆ ಅಂಬೇಡ್ಕರ್ ಸಂವಿಧಾನಾತ್ಮಕ ಆಡಳಿತ ವ್ಯವಸ್ಥೆಯಲ್ಲಿ ಪೂರ್ಣ ವಿಶ್ವಾಸವನ್ನಿಟ್ಟಿದ್ದರು; ಸಾಮಾಜಿಕ ಅನ್ಯಾಯಗಳಿಗೆ ಪ್ರಭುತ್ವದ ನೆರವಿನಿಂದ ಪರಿಹಾರವನ್ನು ಬಯಸುತ್ತಿದ್ದರು.

ರಾಜಕೀಯ ಮಾರ್ಗ ಯಾವುದಾಗಿರಬೇಕೆಂಬ ಬಗ್ಗೆ ಅವರಿಬ್ಬರಲ್ಲಿ ತೀವ್ರ ಭಿನ್ನಾಭಿಪ್ರಾಯವಿತ್ತು. ಗಾಂಧಿಗೆ ಕಾಂಗ್ರೆಸ್ – ದಲಿತರೂ ಸೇರಿದಂತೆ – ಭಾರತೀಯರನ್ನೆಲ್ಲಾ ಒಳಗೊಂಡಿತ್ತು. ದಕ್ಷಿಣ ಆಫ್ರಿಕದಲ್ಲಿದ್ದಾಗಿನಿಂದಲೂ ಅವರು ಹರಿಜನರ ಉದ್ಧಾರಕ್ಕಾಗಿ ಶ್ರಮಿಸುತ್ತಿದ್ದರು. ಅಂಬೇಡ್ಕರ್ ಸ್ವಾತಂತ್ರ್ಯ ಮತ್ತು ಅಧಿಕಾರಗಳ ನಡುವಿನ ವ್ಯತ್ಯಾಸವನ್ನು ಗಮನಿಸಿದ್ದರು. ಬ್ರಿಟಿಷರಿಂದ ಅಧಿಕಾರ ತಮ್ಮ ಕೈಗೆ ಬರಬೇಕೆಂದು ಕಾಂಗ್ರೆಸ್ ಬಯಸಿತ್ತು. ಹಾಗೆ ಅಧಿಕಾರ ವರ್ಗಾವಣೆಯಾಗುವ ಮುನ್ನ ದಲಿತರು ತಮ್ಮ ಹಿತರಕ್ಷಣೆ ಮಾಡಿಕೊಳ್ಳುವ ಸಲುವಾಗಿ ಪ್ರತ್ಯೇಕ ಪ್ರಾತಿನಿಧಿಕ ವ್ಯವಸ್ಥೆಯಾಗಬೇಕೆಂದು ಅಂಬೇಡ್ಕರ್ ಬಯಸಿದರು. ಹೀಗಾಗಿ ಗಾಂಧಿ ಅಂದರೆ ಕಾಂಗ್ರೆಸ್, ಕಾಂಗ್ರೆಸ್ ಅಂದರೆ ಭಾರತ ಎಂಬ ಸಮೀಕರಣಕ್ಕೆ ಅಂಬೇಡ್ಕರ್ ಬಲವಾದ ತೊಡಕಾಗಿದ್ದರು.

ಅಸ್ಪೃಶ್ಯತೆಯ ನಿವಾರಣೆಗಾಗಿ ಗಾಂಧಿಗೆ ಇದ್ದ ಕಳಕಳಿಯನ್ನು ರಾಷ್ಟ್ರೀಯ ಆಂದೋಲನದಲ್ಲಿದ್ದ ಅವರ ಸಹಚರರು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ಅಷ್ಟೇ ಅಲ್ಲ, ಅವರಲ್ಲಿ ಕೆಲವರು ಅದನ್ನು ಅಲ್ಲಗಳೆದರು. ಪುರೋಹಿತರು ಮತ್ತು ಶಂಕರಾಚಾರ್ಯರುಗಳು ಗಾಂಧೀಜಿ ಜಾತಿ ನಿವಾರಣೆಯ ದಿಕ್ಕಿನಲ್ಲಿ ತುಂಬಾ ವೇಗವಾಗಿ ಹೋಗುತ್ತಿದ್ದಾರೆ ಎಂದು ಭಾವಿಸಿದರು ಮತ್ತು ಗಾಂಧೀಜಿ ಈ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ಮೊದಲು ತಮ್ಮ ಸಮ್ಮತಿಯನ್ನು ಪಡೆಯಬೇಕಾಗಿತ್ತು ಎಂದು ಭಾವಿಸಿದರು. ಪ್ರತಿಯೊಬ್ಬರೂ ತಮ್ಮ ಶೌಚಾಲಯಗಳನ್ನು ತಾವೇ ಸ್ವಚ್ಛಗೊಳಿಸಬೇಕೆಂಬ ಗಾಂಧಿಯ ವಾದ, ವರ್ಗ ಹೋರಾಟಕ್ಕೆ ಅಡ್ಡಿಯಾಗುತ್ತದೆ ಎಂದು ಕಮ್ಯುನಿಸ್ಟರು ಭಾವಿಸಿದ್ದರೆಂಬ ಮಾತೊಂದಿದೆ. ಸಾಮಾನ್ಯ ಕಾಂಗ್ರೆಸ್ಸಿಗರು ಗಾಂಧಿಗೆ ದೇಶದ ಸ್ವಾತಂತ್ರ್ಯಕ್ಕಿಂತ ಹರಿಜನರ ಉದ್ಧಾರವೇ ಮುಖ್ಯವಾಗಿದೆ ಎಂದು ಅಸಮಾಧಾನಗೊಂಡರು.

ತಮ್ಮ ಅನುಯಾಯಿಗಳಾದ ಹಿಂದುಗಳು ಹರಿಜನರ ವಿಷಯವಾಗಿ ತಾವು ವೇಗವಾಗಿ ಮುಂದುವರಿಯುವುದನ್ನು ಬಯುಸುವುದಿಲ್ಲ ಎಂದು ಗಾಂಧೀಜಿ ಬಗೆದರು. ಅವರು ಅಸ್ಪೃಶ್ಯತೆ ಕೆಟ್ಟದ್ದು ಎಂದರು, ಆದರೆ ಅದಕ್ಕೊಂದು ಲಗಾಮು ಹಾಕಿದರು. ಅವರು ಹರಿಜನರೊಡನೆ ಸಹಪಂಕ್ತಿ ಭೋಜನ ಮತ್ತು ವಿವಾಹ ಸಂಬಂಧವೂ ಕೆಟ್ಟದ್ದು ಎಂದರು. ನಿಧಾನವಾಗಿ ಅವರು ಸಹಪಂಕ್ತಿಭೋಜನ ಮತ್ತು ಸಾಮಾಜಿಕವಾಗಿ ಪರಸ್ಪರ ಬೆರೆಯುವಿಕೆಗಳನ್ನು ಒಪ್ಪಿಕೊಂಡರು. ಆದ್ದರಿಂದಲೇ ಹರಿಜನರ ದೇವಾಲಯ ಪ್ರವೇಶಕ್ಕಾಗಿ ಚಳವಳಿಯನ್ನು ಪ್ರಾರಂಭಿಸಿದರು. ಎಲ್ಲ ಜನರು ಮತ್ತು ಎಲ್ಲ

ವರ್ಣದವರು ಸಮಾನರು ಎಂದರು. ಅವರು ೧೯೪೬ರಲ್ಲಿ ನೇರವಾಗಿ ಅಂತರ ವಿವಾಹ ಸಂಬಂಧವನ್ನೂ ಅಂಗೀಕರಿಸಿ ಜಾತಿ ವ್ಯವಸ್ಥೆಗೆ ಸವಾಲನ್ನು ಒಡ್ಡಿದರು. ಅದು ಅವರ ಅಂತಿಮ ತೀರ್ಮಾನವಾಗಿತ್ತು.

ಅಂಬೇಡ್ಕರ್ ತಮ್ಮ ಜನರಿಗಾಗಿ ಹೋರಾಟ ಮಾಡಲು ಬ್ರಿಟಿಷರೊಡನೆ ಸೇರಿಕೊಳ್ಳಬೇಕಾದುದು ಅನಿವಾರ್ಯ ಎಂದು ಬಗೆದರು. ಅದು ಅವರ ದುರಂತವಾಗಿತ್ತು. ಅರುಣ ಶೌರಿ ಅವರು ತಮ್ಮ ''ಸುಳ್ಳು ದೇವತೆಗಳ ಆರಾಧನೆ'' ಗ್ರಂಥದಲ್ಲಿ ಇದನ್ನು ತುಂಬಾ ವಿಸ್ತರಿಸಿದ್ದಾರೆ. ಅವರು ಎರಡು ವಿಷಯಗಳನ್ನು ವಿಸ್ತರಿಸಲು ತಮ್ಮ ೬೦೦ ಪುಟಗಳ ಪುಸ್ತಕವನ್ನು ಮೀಸಲಾಗಿಟ್ಟಿದ್ದಾರೆ :

೧. ಗಾಂಧಿ ಮತ್ತು ಕಾಂಗ್ರೆಸ್‌ನ ರಾಜಕೀಯ ವಿರೋಧಿಗಳಾಗಿದ್ದ ಅಂಬೇಡ್ಕರ್ ಬ್ರಿಟಿಷರ ಬೆಂಬಲಿಗರಾಗಿದ್ದರು.

೨. ಅಂಬೇಡ್ಕರರನ್ನು ಸಂವಿಧಾನದ ಜನಕ ಎಂಬುದು ಸರಿಯಲ್ಲ. ಹಾಗೆ ಹೇಳಿದರೆ ಅವರೊಬ್ಬರೇ ಸಂವಿಧಾನವನ್ನು ರಚಿಸಿದರು ಎಂದು ಹೇಳಿದಂತಾಗುತ್ತದೆ. ಸಂವಿಧಾನದ ರೂಪುರಚನೆಯಲ್ಲಿ ಕೆ.ಎಂ.ಮುನ್ಷಿ, ಬಿ. ಎನ್. ರಾವ್ ಮತ್ತು ಇನ್ನೂ ಅನೇಕರು ಅಂಬೇಡ್ಕರರೊಡನೆ ಸೇರಿದ್ದರು.

ಅರುಣ ಶೌರಿ ಅವರ ಪುಸ್ತಕದ ಅನೇಕ ಅಧ್ಯಾಯಗಳು ಪೂರ್ಣವಾಗಿ ಬ್ರಿಟಿಷ್ ರಾಣಿಯ ಸ್ಟೇಷನರಿ ಕಚೇರಿ ಹೊರತಂದ 'ಟ್ರಾನ್ಸ್‌ಫರ್ ಆಫ್ ಪವರ್' ಎಂಬ ಕೃತಿ ಶ್ರೇಣಿಯ ಸಂಪುಟಗಳನ್ನು ಆಧರಿಸಿವೆ. ಶೌರಿ ಅವರು ತಮ್ಮ ಪುಸ್ತಕಕ್ಕೆ ಆ ಸಂಪುಟಗಳ ಸಂಪಾದಕ ನಿಕೋಲಸ್ ಮಾನ್ಸರ್‌ನನ್ನು ಸಹ-ಲೇಖಕ ಎಂದು ಏಕೆ ಪರಿಗಣಿಸಲಿಲ್ಲವೋ ತಿಳಿಯದು. ನಿಕೋಲಸ್ ಮನಸ್ಸು ಮಾಡಿದರೆ 'ಸುಳ್ಳು ದೇವತೆಗಳ ಆರಾಧನೆ'ಯ ಕೃತಿಸ್ವಾಮ್ಯದಲ್ಲಿ ಸಹಭಾಗಿತ್ವ ಮತ್ತು ಸಂಭಾವನೆಗಳಿಗಾಗಿ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿ ವಿಜಯಿಯಾಗಬಹುದು ಎಂದು ಇತಿಹಾಸಕಾರ ರಾಮಚಂದ್ರ ಗುಹ ಅಭಿಪ್ರಾಯಪಡುತ್ತಾರೆ. (ಹಿಂದು, ಡಿಸೆಂಬರ್ ೧೦, ೨೦೦೦)

ಅನ್ಯಕೃತಿಗಳಿಂದ ಸುದೀರ್ಘವಾಗಿ ಎತ್ತಿ ಬರೆಯುವುದರಲ್ಲಿ ಮತ್ತು ಮುಖಕ್ಕೆ ಕೆಸರು ಎರಚುವ ಪ್ರಚಾರ ಸಾಹಿತ್ಯವನ್ನು ರಚಿಸುವುದರಲ್ಲಿ ನಿಪುಣರಾದ ಶೌರಿಯವರು ಇತಿಹಾಸಕಾರನ ಸೋಗು ಹಾಕುತ್ತಿರುವುದು ವಿಚಿತ್ರವಾಗಿದೆ. 'ಗಾಂಧೀಜಿ' ಮತ್ತು 'ರಾಷ್ಟ್ರೀಯ ಚಳವಳಿ'ಗಳನ್ನು ವಿಶೇಷಣಗಳನ್ನಾಗಿ ಬಳಸುವ ಅವರ ಬರೆವಣಿಗೆಯಿಂದ ಅವರ ಪೂರ್ವಾಗ್ರಹಗಳನ್ನು ಗುರುತಿಸಬಹುದು. ಗಾಂಧೀಜಿ ಮತ್ತು ರಾಷ್ಟ್ರೀಯ ಚಳವಳಿಗಳು ಯಾವ ವಿಮರ್ಶೆಗೂ ಒಳಪಡದೆ ಯಾವಾಗಲೂ ಆದರ್ಶವಾಗಿ ನಡೆದುಕೊಂಡುವು ಎಂದು ಅವರು ಪ್ರತಿಪಾದಿಸುತ್ತಾರೆ. ಸಮಸ್ತ ಭಾರತವನ್ನು ಪ್ರತಿನಿಧಿಸುವುದಾಗಿ ಹೇಳಿಕೊಂಡ ಕಾಂಗ್ರೆಸ್ಸಿಗೆ ಅನೇಕ ವಿರೋಧಿಗಳಿದ್ದರು. ಕಾಂಗ್ರೆಸ್ ಜಮೀನ್ದಾರರ ಹಾಗೂ ಬಂಡವಾಳಗಾರರ ಪಕ್ಷ ಎಂದು ಕಮ್ಯುನಿಸ್ಟರು ಹೇಳುತ್ತಿದ್ದರು. ಅದು ಹಿಂದುಗಳ ಪಕ್ಷ ಎಂದು ಮುಸ್ಲಿಂ ಲೀಗ್ ಹೇಳುತ್ತಿತ್ತು. ಅಂಬೇಡ್ಕರ್ ಇನ್ನೂ ಮುಂದೆ ಹೋಗಿ ಅದು ಎಲ್ಲ ಹಿಂದುಗಳನ್ನು ಪ್ರತಿನಿಧಿಸುವುದಿಲ್ಲ, ಕೇವಲ ಮೇಲ್ಜಾತಿಯ ಹಿಂದುಗಳನ್ನು ಮಾತ್ರ ಪ್ರತಿನಿಧಿಸುತ್ತದೆ ಎಂದು ಹೇಳಿದರು.

ಶೌರಿಯವರು ಈ ವಿಮರ್ಶಕರ ವಾದಕ್ಕೆ ಯಾವ ವಿಶ್ವಾಸಾರ್ಹ ಆಧಾರಗಳೂ ಇಲ್ಲ ಎಂದು ಹೇಳುತ್ತಾರೆ. ಅವರು ದೇಶಪ್ರೇಮದ ಪ್ರಶಸ್ತಿ ಪತ್ರವನ್ನು ನೀಡುವ ಮತ್ತು ನೀಡದಿರುವ ಅಧಿಕಾರಿಯಂತೆ ಮಾತನಾಡುತ್ತಾರೆ. ಅವರಿಗೆ ಕಾಂಗ್ರೆಸ್‌ನ ವಿರೋಧಿಗಳೆಲ್ಲಾ ದೇಶದ್ರೋಹಿಗಳಾಗಿ ಕಾಣುತ್ತಾರೆ. ರಾಷ್ಟ್ರೀಯ ಚಳವಳಿ ಎಂಬುದು ಅದು ಹೇಳಿಕೊಂಡಷ್ಟು ರಾಷ್ಟ್ರೀಯವಾಗಿರಲಿಲ್ಲ ಮತ್ತು ಸ್ವಾತಂತ್ರ್ಯ ಹೋರಾಟವು ಕೆಲವರಿಗೆ ದಾಸ್ಯದ ಮುಂದುವರಿಕೆಯ ಭೀತಿಯನ್ನು ಹುಟ್ಟಿಸಿತ್ತಾದ್ದರಿಂದ ಅವರು ಕಾಂಗ್ರೆಸ್ಸನ್ನು ವಿರೋಧಿಸಬೇಕಾಯಿತು. ಇದನ್ನು ಗ್ರಹಿಸಲಾರದ ಶೌರಿಯವರಿಗೆ ಅವರೆಲ್ಲಾ ದೇಶದ್ರೋಹಿಗಳಂತೆ ಕಾಣುತ್ತಾರೆ. ಕಾಂಗ್ರೆಸ್‌ನ ಹೊರಗೆ ಉಳಿದ ಈ ಜನರಿಗೆ ಅಷ್ಟು ದೊಡ್ಡ ಅನುಯಾಯಿಗಳು ಹೇಗೆ ಇರುವಂತಾಯಿತು ? ಈ ಪ್ರಶ್ನೆಗೆ ಶೌರಿ ಯಾವ ಉತ್ತರವನ್ನೂ ನೀಡುವುದಿಲ್ಲ. ಅವರು ಪೂರ್ವಾಗ್ರಹಿತರಾಗಿದ್ದರು ಮತ್ತು ತಪ್ಪು ತಿಳಿವಳಿಕೆಯುಳ್ಳವರಾಗಿದ್ದರು. ಬಹು ಮುಖ್ಯ ಸಂಗತಿಗಳನ್ನು ಅವರು ಹೇಗೆ ಗ್ರಹಿಸಲಾರದವರಾದರು ಎಂಬುದನ್ನು ಮುಂದೆ ನೋಡಬಹುದು.

ಅಂಬೇಡ್ಕರರು ಕಾಂಗ್ರೆಸ್ಸಿಗರಿಗಿಂತ ಬ್ರಿಟಿಷರಲ್ಲಿ ವಿಶ್ವಾಸವನ್ನಿಡಲು ನಿಶ್ಚಯಿಸಿದುದನ್ನು ಸಮರ್ಥಿಸಿಕೊಳ್ಳಲು ಸಾಕಷ್ಟು ಆಧಾರಗಳಿವೆ. ಈ ಸಂದರ್ಭದಲ್ಲಿ ೧೮ನೆಯ ಶತಮಾನದ ಇಂಗ್ಲಿಷ್ ಲೇಖಕ ಸ್ಯಾಮ್ಯುಯಲ್ ಜಾನ್ಸನ್‌ನ ಮಾತು ಪ್ರಸ್ತುತವಾಗಿದೆ. ''ಸ್ವಾತಂತ್ರ್ಯದ ಕರೆ ಇಂದು ಕೇಳಿಬರುತ್ತಿರುವುದು ನೀಗ್ರೋಗಳ ಒಡೆಯರಿಂದ ಎಂಬುದು ಆಶ್ಚರ್ಯಕರವಾಗಿದೆ'' ಎಂದು ಅವರು ಉದ್ಗಾರ ತೆಗೆದಿದ್ದರು. ಅಮೆರಿಕದ ಸ್ವಾತಂತ್ರ್ಯ ಸಮರಕ್ಕೂ ಭಾರತದ ಸ್ವಾತಂತ್ರ್ಯ ಹೋರಾಟಕ್ಕೂ ಸ್ವಲ್ಪ ವ್ಯತ್ಯಾಸವಿದ್ದರೂ ಸಾಕಷ್ಟು ಸಾಮ್ಯವಿದೆ. ಅಂಬೇಡ್ಕರ್‌ಗೆ ಮೊದಲೇ ಕೆಳಜಾತಿಗಳ ಪ್ರಮುಖ ನಾಯಕರಾಗಿದ್ದ ಜ್ಯೋತಿಬಾ ಫುಲೆ ಅವರು ಕಾಂಗ್ರೆಸ್ಸನ್ನು ಶಂಕೆಯಿಂದಲೇ ಕಂಡಿದ್ದರು. ಅವರ ಕಾಲದಲ್ಲಿ ಕಾಂಗ್ರೆಸ್ ಪೂನಾ ಬ್ರಾಹ್ಮಣರ ಆಧಿಪತ್ಯಕ್ಕೆ ಒಳಪಟ್ಟಿತ್ತು. ಕೆಳಜಾತಿಯವರಿಗೆ ಹಿಂದೆಂದೂ ದೊರೆಯದಿದ್ದ ಅವಕಾಶಗಳು ಬ್ರಿಟಿಷರ ಸೈನ್ಯದಲ್ಲಿ ಮತ್ತು ಕಾರ್ಖಾನೆಗಳಲ್ಲಿ ದೊರೆಯುತ್ತಿದ್ದುವು. ಅಸ್ಪೃಶ್ಯರಿಗೆ ಹಳ್ಳಿಗಳಲ್ಲಿ ದೊರೆಯದಿದ್ದ ಮುಕ್ತ ಅವಕಾಶಗಳು ಹೊಸ ಆರ್ಥಿಕ ವ್ಯವಸ್ಥೆಯಲ್ಲಿ ಮತ್ತು ವಸಾಹತು ನಗರಗಳಲ್ಲಿ ದೊರೆಯಲಾರಂಭಿಸಿದುವು. ಬ್ರಿಟಿಷರು ಆಧುನಿಕ ಬದಲಾವಣೆಯ ಹರಿಕಾರರಾದರು. ಕೆಳಜಾತಿಯವರಿಗೆ ಪೇಷ್ವೆಗಳ ಕಾಲದಲ್ಲಿದ್ದ ದುಸ್ಥಿತಿಗಿಂತ ಎಷ್ಟೋ ಉತ್ತಮವಾದ ಸ್ಥಿತಿ ಬ್ರಿಟಿಷರ ಕಾಲದಲ್ಲಿ ಲಭ್ಯವಾಯಿತು.

ಭಾರತದ ಬೇರೆ ಬೇರೆ ಭಾಗಗಳಲ್ಲಿ ನಡೆದ ದಲಿತ ಚಳವಳಿಗಳ ಇತಿಹಾಸದ ಅರಿವು ಶೌರಿಯವರಿಗೆ ಇದ್ದಂತಿಲ್ಲ. ಮಂಗುರಾಮ್ ನಾಯಕತ್ವದಲ್ಲಿ ಪಂಜಾಬಿನಲ್ಲಿ ನಡೆದ ದಲಿತ ಚಳವಳಿಯನ್ನು ಮಾರ್ಕ್ ಜೂರ್ಗನ್ಸ್ ಮೇಯರ್ (Mark Juergens Meyer) ದಾಖಲಿಸಿದ್ದಾರೆ. ಕಾಂಗ್ರೆಸ್ ಮತ್ತು ಆರ್ಯ ಸಮಾಜ ಎರಡನ್ನೂ ತಿರಸ್ಕರಿಸಿದ ಮಂಗುರಾಮ್ 'ಆದಿ ಧರ್ಮ' ಎಂಬ ಹೊಸ ಪಂಥವೊಂದನ್ನು ಕಟ್ಟಿದರು. ಬಂಗಾಲದ ನಾಮಶೂದ್ರರನ್ನು ಕುರಿತು ಶೇಖರ್ ಬಂದ್ಯೋಪಾಧ್ಯಾಯರು ಬರೆದಿದ್ದಾರೆ. ನಾಮಶೂದ್ರರು ಸಹ ಮಹಾರಾಷ್ಟ್ರದ ಮಹಾರ್‌ರಂತೆ ಕಾಂಗ್ರೆಸ್ ಸರ್ಕಾರ ಭವಿಷ್ಯದಲ್ಲಿ ತಮ್ಮ



ಬಗ್ಗೆ ಸಹಾನುಭೂತಿಯನ್ನು ತೋರಿಸುತ್ತದೆ ಎಂಬ ಭರವಸೆಯನ್ನು ಹೊಂದಿರಲಿಲ್ಲ. ಅನೇಕ ವಿದ್ವಾಂಸರು ಕಾಂಗ್ರೆಸ್‌ನಲ್ಲಿದ್ದ ಬ್ರಾಹ್ಮಣ ಪ್ರಾಬಲ್ಯದ ವಿರುದ್ಧ ದಕ್ಷಿಣ ಭಾರತದಲ್ಲಿ ನಡೆದ ದ್ರಾವಿಡ ಚಳವಳಿಯನ್ನು ದಾಖಲಿಸಿದ್ದಾರೆ. ದ್ರಾವಿಡ ಚಳವಳಿಯ ಸ್ಥಾಪಕ ಪೆರಿಯಾರ್ ರಾಮಸ್ವಾಮಿ ನಾಯ್ಕರ್ ಸಹ ಗಾಂಧಿಯ ವಿರುದ್ಧ ತೀವ್ರವಾಗಿ ಹೋರಾಡಿದರು.

ಈ ಚಳವಳಿಗಳ ನಾಯಕರು ಮತ್ತು ಅವರ ಕೋಟಿಗಟ್ಟಲೆ ಬೆಂಬಲಿಗರು ಕಾಂಗ್ರೆಸ್‌ನ ಹೊರಗೆ ನಿಂತು ಅದರ ವಿರುದ್ಧ ಹೋರಾಡಿದರು. ಅವರನ್ನೆಲ್ಲಾ ಶೌರಿಯವರು . ದೇಶದ್ರೋಹಿಗಳೆಂದು ಕರೆಯಲು ಕಾರಣವಾದರೂ ಏನು ? ಜನಾಂಗೀಯ ದ್ವೇಷದ ವಿರುದ್ಧ ಮಾತನಾಡಲು ಧೈರ್ಯ ತೋರಿಸಿದ ಕರಿಯರ ದೇಶಪ್ರೇಮವನ್ನು ಪ್ರಶ್ನಿಸಿದ ಅಮೇರಿಕದ ಬಿಳಿಯರೊಡನೆ ಶೌರಿಯವರ ವರ್ತನೆಯನ್ನು ಹೋಲಿಸಬಹುದಾಗಿದೆ. ಡಬ್ಲ್ಯು.ಇ.ಬಿ ದುಬಾಯಿಸ್ (Dubois) ಮತ್ತು ಪಾಲ್ ರೋಬ್‌ಸನ್‌ರಂತಹ ಮೇಧಾವಿಗಳು ಕರಿಯರು ತಮ್ಮ ಹಕ್ಕುಗಳಿಗಾಗಿ ಎದ್ದುನಿಂತು ಹೋರಾಡಲು ಕರೆ ನೀಡಿದರು. ಅದಕ್ಕಾಗಿ ಅವರನ್ನು ಅಮೇರಿಕದ ವಿರೋಧಿ ಗಳೆಂದು ಕರೆದು ಹೀನಾಯವಾಗಿ ಕಾಣಲಾಯಿತು. ಅನಂತರ ಮಾರ್ಟಿನ್ ಲೂತರ್ ಕಿಂಗ್‌ನನ್ನು ಅಮೇರಿಕದ ಬಲಿಷ್ಠ ಗುಂಪುಗಳು ಚಿತ್ರಹಿಂಸೆಗೆ ಒಳಪಡಿಸಿದುವು. ಕೇಂದ್ರ ತನಿಖಾದಳದ ನಿರ್ದೇಶಕನಾಗಿದ್ದ ಎಡ್ಗರ್ ಹೂವರ್ ಒಮ್ಮೆ ದೇಶಪ್ರೇಮ ಎಂದರೆ ಬಿಳಿಯರ ಪ್ರಾಬಲ್ಯಕ್ಕೆ ಅಧೀನವಾಗುವುದು ಎಂದು ಅರ್ಥೈಸಿದ್ದಿದುಂಟು.

ಶೌರಿಯವರು ಯಾವಾಗಲೂ ಸತ್ಯಕ್ಕೆ ಒಂದೇ ಒಂದು ಮುಖ ಇರುವಂತೆ ಮತ್ತು ತಾವು ಅದರ ಸಂರಕ್ಷಕರು ಎಂಬಂತೆ ಬರೆಯುತ್ತಾರೆ. ಮೇಲಿಂದ ಮೇಲೆ ಅಂಬೇಡ್ಕರರನ್ನು ಅವರು ಸಾಮ್ರಾಜ್ಯಶಾಹಿಗಳೊಡನೆ ಹೊಂದಾಣಿಕೆ ಮಾಡಿಕೊಂಡ ಜಿನ್ನಾರೊಡನೆ ಸಮೀಕರಣ ಗೊಳಿಸುತ್ತಾರೆ. ಅಂಬೇಡ್ಕರರು ಹಿಂದುತ್ವವಾದದ ಮೇಲೆ ಬರೆದ ಎಲ್ಲ ಟೀಕೆ ಟಿಪ್ಪಣಿಗಳನ್ನು ಅಲ್ಲಗಳೆಯುತ್ತಾರೆ. ಒಂದು ಸಾರಿಯಾದರೂ ಅವರು ಆ ವಿಮರ್ಶೆಗಳಲ್ಲಿರುವ ಸತ್ಯ ಸಂಗತಿಗಳನ್ನು ಒಪ್ಪಿಕೊಳ್ಳುವುದಿಲ್ಲ. ಅಂಬೇಡ್ಕರರು ಒತ್ತಿ ಹೇಳುವ ಮತ್ತು ರಾಜಕೀಯ ಆಂದೋಲನವನ್ನಾಗಿ ಮಾಡಿಕೊಂಡ, ಹಿಂದುಗಳ ಕೈಯಲ್ಲಿ ದಲಿತರು ಅನುಭವಿಸಿದ ದಾರುಣ ದುಃಖ ದುಮ್ಮಾನಗಳನ್ನು, ಶೌರಿಯವರು ಒಮ್ಮೆಯಾದರೂ ಒಪ್ಪಿಕೊಳ್ಳುವುದಿಲ್ಲ. ಗಾಂಧೀಜಿಯವರೊಡನೆ ಅಂಬೇಡ್ಕರ್ ಯಾವಾಗಲೂ ಭಿನ್ನಾಭಿಪ್ರಾಯ ತಾಳಿದುದೇ ಶೌರಿಯವರಿಗೆ ದೇಶದ್ರೋಹವಾಗಿ ಕಾಣುತ್ತದೆ. ಗಾಂಧೀಜಿಯವರು ಆಮರಣಾಂತ ಉಪವಾಸ ಕೈಗೊಂಡಾಗ ಅಂಬೇಡ್ಕರ್ ಮಧ್ಯ ಪ್ರವೇಶಿಸಿ ಅದನ್ನು ನಿಲ್ಲಿಸಲು ಪ್ರಯತ್ನಿಸದಿದ್ದಕ್ಕಾಗಿ ಶೌರಿಯವರು ಅವರನ್ನು ನಿಂದಿಸುತ್ತಾರೆ; ಗಾಂಧೀಜಿಯನ್ನು ಸಾವಿನ ದವಡೆಗೆ ತಳ್ಳಲಾಯಿತು ಎಂದು ಆರೋಪಿಸುತ್ತಾರೆ. ಆದರೆ ಕೆಲವು ಇತಿಹಾಸಕಾರರು ಅದೇ ಉಪವಾಸ ಘಟನೆಯನ್ನು ವಿರೂಪಿಸುತ್ತಾ ಸಾಯುವುದಾಗಿ ಹೆದರಿಸಿ ಗಾಂಧೀಜಿಯವರೇ ಅಂಬೇಡ್ಕರರನ್ನು ಪೂನಾ ಒಪ್ಪಂದಕ್ಕೆ ಸಹಿ ಹಾಕಲು ಬ್ಲಾಕ್‌ಮೇಲ್ ಮಾಡಿದರು ಎಂದು ಬರೆದಿದ್ದಾರೆ.

> **ಲೇಖಕರ ಗಮನಕ್ಕೆ**
>
> ನಿಮ್ಮ ಲೇಖನಗಳಿಗೆ ಸ್ವಾಗತವಿದೆ. ಲೇಖನ ಕಳಿಸುವವರು ದಯವಿಟ್ಟು ಸ್ಫುಟವಾಗಿ ಬರೆದು ಕಳಿಸಬೇಕಾಗಿ ವಿನಂತಿ. ಹಸ್ತಪ್ರತಿಯನ್ನು ಸಹನೆಯಿಂದ ಪರಿಶೀಲಿಸಲು ಇದರಿಂದ ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ನಿಮ್ಮ ಮೌಲಿಕ ಲೇಖನ ಸಹ ಪ್ರಕಟವಾಗದಿರಬಹುದು ಎಂಬ ಆತಂಕ ನಮ್ಮದು. ನಿಮ್ಮ ಸಹಕಾರ ನಮಗೆ ಅತ್ಯಗತ್ಯ. ಅನಗತ್ಯವಾಗಿ ಇಂಗ್ಲಿಷ್ ಪದಗಳನ್ನೂ ವಾಕ್ಯಗಳನ್ನೂ ಬಳಸದಿದ್ದರೆ ಅನುಕೂಲವಾಗುತ್ತದೆ.
>
> *- ಸಂಪಾದಕ, 'ಹೊಸತು'*

ಸ್ವಾತಂತ್ರ್ಯ ದೊರೆತ ೫೦ ವರ್ಷಗಳಲ್ಲಿ ಗಾಂಧಿ, ನೆಹರು ಅವರನ್ನು ಜನ ಮರೆಯುತ್ತಿರುವುದೂ, ದೇಶದ ಉದ್ದಗಲಕ್ಕೂ ಹಳ್ಳಿಹಳ್ಳಿಗಳಲ್ಲಿ ಅಂಬೇಡ್ಕರ್ ಆರಾಧನೆ ಗೊಳ್ಳುತ್ತಿರುವುದೂ ಎದ್ದು ಕಾಣುತ್ತಿದೆ. ದಲಿತರಿಗೆ ಬಾಬಾ ಸಾಹೇಬ್ ಅಂಬೇಡ್ಕರ್ ತಮ್ಮ ಹೋರಾಟದ ತತ್ವ ಸಿದ್ಧಾಂತಗಳ ಸಂಕೇತವಾಗಿದ್ದಾರೆ.

ನ್ಯಾಯ, ಸತ್ಯಾಸತ್ಯಗಳ ಬಗ್ಗೆ ಕಾಳಜಿ ಇರದ ಮತ್ತು ಸಂಕುಚಿತತನ, ಗುಂಪುಗಾರಿಕೆ ಮನೋಭಾವವನ್ನುಳ್ಳ ಶೌರಿ ಯಾವಾಗಲೂ ಕಪ್ಪು ಮತ್ತು ಬಿಳಿ ಬಣ್ಣಗಳನ್ನು ಮಾತ್ರ ಕಾಣುತ್ತಾರೆ. ತಲೆಕೆಳಗಾದ ಸ್ಟಾಲಿನ್‌ವಾದಿಯಾಗಿ ಅವರು ಒಂದು ಬಗೆಯ ಪಾಪ ಪ್ರಜ್ಞೆಯಿಂದ ಬಳಲುತ್ತಿರುವಂತೆ ಕಾಣುತ್ತದೆ. ಆದರೆ ಅವರು ಅದನ್ನು ದುರಾಕ್ರಮಣದಿಂದ ಗೆಲ್ಲಲೆತ್ನಿಸುತ್ತಿದ್ದಾರೆ. ತಮ್ಮನ್ನು ಸಮರ್ಥಿಸಿಕೊಳ್ಳುವುದನ್ನು ಬಿಟ್ಟು ಅವರಿಗೆ ಮತ್ತಾವ ಜೀವನೋದ್ದೇಶಗಳೂ ಇಲ್ಲ.

ಸಮಾಜದ ಕೆಳವರ್ಗಗಳು ಅಂಬೇಡ್ಕರರನ್ನು ಅತ್ಯಂತ ಗೌರವದಿಂದ ನೋಡುತ್ತಾರೆ. ಆದರೆ ಗಾಂಧಿಯನ್ನು ಆಶ್ರಯಿಸದೆ, ರಾಜಕೀಯದಲ್ಲಿ ಸ್ವತಂತ್ರವಾಗಿ ಬೆಳೆಯ ಬೇಕೆಂಬ ಅವರ ಹಂಬಲವನ್ನು ಮೇಲ್ವರ್ಗದವರು ಸಹಿಸುವುದಿಲ್ಲ.

ಸ್ವತಃ ಗಾಂಧೀಜಿಯವರೇ ಅಂಬೇಡ್ಕರರನ್ನು ಯಾವ ದೃಷ್ಟಿಯಿಂದ ಕಂಡರು ಎಂಬುದು ಕುತೂಹಲಕಾರಿ ಯಾಗಿದೆ. ಅಂಬೇಡ್ಕರರ ದಿಟ್ಟ ನಿಲುವನ್ನು ಅವರು ಬಿಚ್ಚು ಮನಸ್ಸಿನಿಂದ ಮೆಚ್ಚಿಕೊಂಡಿದ್ದಾರೆ. ಕೆಲವು ದೃಷ್ಟಾಂತಗಳನ್ನು ಗಮನಿಸಬಹುದು. ಗಾಂಧೀಜಿಯವರು ೧೯೩೧ರ ಅಕ್ಟೋಬರ್‌ನಲ್ಲಿ ಆಕ್ಸ್‌ಫರ್ಡ್‌ನಿಂದ ಮಾತಾಡುತ್ತಾ ''ನನಗೆ ಅಂಬೇಡ್ಕರ್ ಬಗ್ಗೆ ಅತ್ಯುನ್ನತ ಗೌರವವಿದೆ.... ಕಟುವಾಗಿರುವ ಸಂಪೂರ್ಣ ಹಕ್ಕು ಅವರಿಗೆ (ಅಂಬೇಡ್ಕರ್‌ಗೆ) ಇದೆ. ಅವರು ನಮ್ಮ ತಲೆಗಳನ್ನು ಹೊಡೆಯಲಿಲ್ಲ ಎಂಬುದು ಅವರ ಆತ್ಮಸಂಯಮವನ್ನು ತೋರಿಸುತ್ತದೆ'' ಎಂದು ನುಡಿದರು.

ಎರಡು ವರ್ಷಗಳ ನಂತರ ತಮ್ಮ ಇಂಗ್ಲಿಷ್ ಸ್ನೇಹಿತನಿಗೆ ಬರೆಯುತ್ತಾ ಅಂಬೇಡ್ಕರರಿಗೆ ಕಾಂಗ್ರೆಸ್ ಮತ್ತು ಅದರ ಬೆಂಬಲಿಗರ ಬಗ್ಗೆ ವಿರೋಧವಿರುವುದರಲ್ಲಿ ತಮಗೆ ''ಯಾವ ಅಸ್ವಾಭಾವಿಕತೆಯೂ ಕಾಣುವುದಿಲ್ಲ'' ಎಂದಿದ್ದಾರೆ. ಗಾಂಧಿ ಮುಂದುವರಿದು ''ಅವರು ಹಿಂದು ಧರ್ಮದ ಸಾಮಾಜಿಕ ಪರಯ್ಯಗಳಿಗೆ ಆಗುತ್ತಿರುವ ಅಮಾನವೀಯ ಅಪಚಾರಗಳನ್ನು ನೋಡಿರುವುದಷ್ಟೇ ಅಲ್ಲ, ಅವರು ಎಲ್ಲ ಸಂಸ್ಕಾರ, ಪದವಿ, ಪ್ರಶಸ್ತಿಗಳನ್ನು ಹೊಂದಿದ್ದರೂ ಭಾರತದಲ್ಲಿ ಅಸ್ಪೃಶ್ಯರು ಸದಾ ಅನುಭವಿಸುವ ಅನೇಕ ಅವಮಾನಗಳನ್ನು ಅವರೂ ಅನುಭವಿಸಬೇಕಾಯಿತು'' ಎಂದು ಹೇಳಿದ್ದಾರೆ.

೧೯೩೬ರ ಜೂನ್‌ನಲ್ಲಿ ಪುನಃ ಗಾಂಧಿ ಹೇಳುತ್ತಾರೆ: ''ನಾವು ಪ್ರತಿಯೊಬ್ಬರೂ ಕಟುವಾಗಿ ವಿರೋಧಿಸು ವಂತಹ ಅವಮಾನಗಳನ್ನು (ಅಂಬೇಡ್ಕರ್) ಅನುಭವಿಸ ಬೇಕಾಯಿತು. ಅವರ ಸ್ಥಾನದಲ್ಲಿ ನಾನು ಇದ್ದಿದ್ದರೂ ಅಷ್ಟೇ ಕೋಪಗೊಳ್ಳುತ್ತಿದ್ದೆ.''

ಗಾಂಧಿಯ ಅಭಿಮಾನಿಗಳು ಅಂಬೇಡ್ಕರರ ದೇಶ ಪ್ರೇಮವನ್ನು ಪ್ರಶ್ನಿಸಬಹುದು. ಆದರೆ ಗಾಂಧಿಯವರಿಗೆ ಅಂತಹ ಸಂಶಯಗಳಾವುವೂ ಇರಲಿಲ್ಲ. ೧೯೩೫ರ ಜೂನ್‌ನಲ್ಲಿ ಗಾಂಧಿಯವರು ಕರಾಚಿಯ ವಿದ್ಯಾರ್ಥಿ ಗಳನ್ನು ಕುರಿತು ಉಪನ್ಯಾಸ ಮಾಡುತ್ತಾ ''ಅಂಬೇಡ್ಕರರ ತ್ಯಾಗದ ಪ್ರಮಾಣ ಅತ್ಯುನ್ನತವಾದುದು. ಅವರು ಸರಳ ಜೀವನ ನಡೆಸುತ್ತಾ ತಮ್ಮ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ತಿಂಗಳಿಗೆ ಒಂದು ಸಾವಿರದಿಂದ ಎರಡು ಸಾವಿರ ರೂಪಾಯಿ ಗಳಿಸುವ ಸಾಮರ್ಥ್ಯ ಅವರಿಗಿದೆ. ಅವರು ಇಚ್ಛಿಸಿದರೆ ಯೂರೋಪಿನಲ್ಲಿ ಹಾಯಾಗಿ ನೆಲಸ ಬಹುದು. ಆದರೆ ಅಲ್ಲಿರಲು ಅವರಿಗೆ ಇಷ್ಟವಿಲ್ಲ. ಹರಿಜನರ ಕಲ್ಯಾಣದ ಬಗ್ಗೆ ಅವರು ತುಂಬಾ ಕಾತುರರಾಗಿದ್ದಾರೆ,'' ಎಂದರು.

ಅಂಬೇಡ್ಕರರ ಪ್ರತಿಭಟನೆಯಿಂದ ಮೇಲಿನ ಜಾತಿಯವರು ಒಂದು ಪಾಠ ಕಲಿಯಬೇಕಾಗಿದೆ ಎಂದು ಗಾಂಧಿ ಭಾವಿಸಿದರು. ಮಾರ್ಚ್ ೧೯೩೬ರಲ್ಲಿ ಅಂಬೇಡ್ಕರ್ ಮತ್ತು ಅವರ ಅನುಯಾಯಿಗಳು ಇನ್ನೊಂದು ಧರ್ಮಕ್ಕೆ ಮತಾಂತರ ಹೊಂದುವ ವಿಚಾರದಲ್ಲಿದ್ದಾಗ ಗಾಂಧಿಯ ಪ್ರತಿಕ್ರಿಯೆ ಗಮನಾರ್ಹ ವಾಗಿದೆ: ''ಅಂತಹ ನಡೆವಳಿಕೆಗೆ ನಾವು ಅರ್ಹರಾಗಿ ದ್ದೇವೆ. ಈಗಲಾದರೂ ನಾವು ಜಾಗೃತರಾಗಿ ನಮಗೆ ನಾವೇ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗಿದೆ'' ಎಂದರು. ಗಾಂಧಿಯವರ ಮಾತಿಗೆ ಹೆಚ್ಚು ಜನ ಕಿವಿಗೊಡಲಿಲ್ಲ. ಹರಿಜನರ ಏಳಿಗೆಗಾಗಿ ಹಿಂದುಗಳು ಯಾವ ಗಮನವನ್ನೂ ಹರಿಸದಿರುವುದನ್ನು ಕಂಡು ತಮ್ಮ ಕೊನೆಗಾಲದಲ್ಲಿ ಗಾಂಧಿ ನಿಟ್ಟುಸಿರುಬಿಟ್ಟರು. ''ಯಾರು (ಜಾತಿ) ಸುಧಾರಣೆಯ ಬಗ್ಗೆ ವಿಶೇಷ ಆಸಕ್ತಿ ತಾಳಬೇಕಾಗಿತ್ತೋ ಅವರು ತಮ್ಮ ಮನಸ್ಸನ್ನು ಅತ್ತ ಹರಿಸದಿದ್ದುದು ಒಂದು ದುರಂತ. ಹರಿಜನ ಸೋದರರು ಸಂಶಯದಿಂದ ಕಟು ವಿರೋಧ ತೋರಿಸಿದರೆ ಅದರಲ್ಲಿ ಆಶ್ಚರ್ಯವೇನು ?'' ಮೇಲಿನ ಗಾಂಧಿ ಹೇಳಿಕೆಗಳನ್ನು ರಾಮಚಂದ್ರ ಗುಹ ಅವರ ಇತ್ತೀಚಿನ ಒಂದು ಕೃತಿಯಿಂದ ಸಂಗ್ರಹಿಸಲಾಗಿದೆ. ಅಂಬೇಡ್ಕರರನ್ನು ಕುರಿತು ಗಾಂಧಿ ಹೇಳಿದ ಒಂದೇ ಒಂದು ವಾಕ್ಯವನ್ನೂ ಸಹ ಅರುಣ ಶೌರಿ ತಮ್ಮ 'ಸುಳ್ಳು ದೇವತೆಗಳ ಆರಾಧನೆ' ಗ್ರಂಥದಲ್ಲಿ ಪ್ರಸ್ತಾಪಿಸಿಲ್ಲ. ಶೌರಿಯವರ ಧೋರಣೆಯನ್ನು ಬಲ್ಲವರಿಗೆ ಅದು ಸೋಜಿಗವೆನಿಸುವುದೂ ಇಲ್ಲ.

**ಡಾ|| ಬಿ. ವಿ. ವೀರಭದ್ರಪ್ಪ**
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

# ಆ ಒಂದು ಚಿತ್ರ

**ಮೋಹನ್ ಕುಡ್ಲ**



**ಕೋರ್ಡಾ** ಇನ್ನಿಲ್ಲ -

ಪತ್ರಿಕೆಯಲ್ಲೊಂದು ಪುಟಾಣಿ ಸುದ್ದಿ. ಪತ್ರಿಕೆಯ ಪುಟಗಳಲ್ಲಿ ಕ್ಯೂಬಾ ಸುದ್ದಿಯೇನಾದರೂ ಇದೆಯೆ ಎಂದು ಭೂತಕನ್ನಡಿ ಹಿಡಿದು ಹುಡುಕಬೇಕು. ಅಷ್ಟು ವಿರಳ. ಬಹುಶಃ ಜಗತ್ತಿನ ಎಲ್ಲ ಮಾಧ್ಯಮಗಳ ಮಟ್ಟಿಗೂ ಈ ಮಾತು ನಿಜ. ಭಾರತದಲ್ಲಿ ಕ್ಯೂಬಾ ಸುದ್ದಿ ಸಿಗಬೇಕಾದರೆ ಒಂದೋ 'ಹಿಂದು'ವಿನಲ್ಲಿ ಇಲ್ಲಾ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ. ಈ ಎರಡು ಪತ್ರಿಕೆ ಹೊರತುಪಡಿಸಿದರೆ ಕ್ಯೂಬಾ ಯಾವ ಪತ್ರಿಕೆಗೂ ವಿಷಯವೇ ಅಲ್ಲ.

ಎಷ್ಟೋ ಬಾರಿ ಕ್ಯೂಬಾ ಸುದ್ದಿಯಾಗುತ್ತಿದ್ದುದೂ ಸಹಾ ಸುದ್ದಿಯಾಗಬಾರದ ಕಾರಣಕ್ಕೆ. ಕ್ಯೂಬಾ ಬಗ್ಗೆ ಇರುವ ಇಮೇಜ್ ಈ ಸುದ್ದಿಗಳನ್ನು ಓದುತ್ತಿದ್ದರೆ ಕಡಿಮೆಯಾಗುತ್ತಿತ್ತೇ ಹೊರತು ಸದ್ಭಾವನೆ ಬರುತ್ತಿರಲಿಲ್ಲ. ಕ್ಯೂಬಾ ಮತ್ತು ಅಮೆರಿಕಾದ ನಡುವೆ ಇಷ್ಟು ದೊಡ್ಡ ಬಿಕ್ಕಟ್ಟು ಬೆಳೆಯಲು ಪತ್ರಿಕೆಗಳೇ ಕಾರಣ ಎನ್ನುವವರಿದ್ದಾರೆ. ಕ್ಯೂಬಾ ಮತ್ತು ಅಮೆರಿಕಾ ನಡುವೆ ದೊಡ್ಡ ಪೇಪರ್ ಗೋಡೆಯಿದೆ ಎನ್ನುತ್ತಾರೆ. ಈ ಗೋಡೆಯ ಕಾರಣದಿಂದಾಗಿ ಎರಡೂ ದೇಶಗಳು ದೂರವೇ ಉಳಿದವು. ಬಹುಶಃ ಕ್ಯೂಬಾ ಮತ್ತು ಇಡೀ ಜಗತ್ತಿನ ಮಧ್ಯೆ ಇದೇ ಪೇಪರ್ ಗೋಡೆ ಎಬ್ಬಿಸುವ ಸಂಚು ನಡೆಯುತ್ತಿದೆಯೇನೋ ? ಕ್ಯೂಬಾ ಎನ್ನುವ ಪರಮಹೋರಾಟಗಾರನ ಎದೆಯ ಆ ಮಿಣಿ ಮಿಣಿ ಬೆಳಕು ಇನ್ನೊಂದು ದೇಶಕ್ಕೆ ಗೊತ್ತಾಗದೇ ಹೋಗುವಂತೆ ಜಗತ್ತಿನ ಮೇಸ್ತ್ರಿಗಳು ಗೋಡೆ ಎಬ್ಬಿಸುತ್ತಲೇ ಇದ್ದಾರೆ.

ಆದರೂ... ಆದರೂ... ಗೋಡೆಗಳನ್ನು ಮೀರುವ ಕ್ಯೂಬಾದ ವಿಶ್ವಾಸ ಅಚಲವಾದದ್ದು. ಈ ಜಗತ್ತಿನ ಪ್ರತಿಯೊಬ್ಬರಲ್ಲಿಯೂ ಒಂದೊಂದು ಆ್ಯಂಟೆನಾ ಇದೆ. ಅದರಿಂದ ಕ್ಯೂಬಾದೊಳಗೆ ನಡೆಯುತ್ತಿರುವ ಪ್ರತಿಯೊಂದೂ ಅವರಿಗೆ ಗೊತ್ತಾಗುತ್ತದೆ ಎನ್ನುವ ಕ್ಯಾಸ್ಟ್ರೋ ತಮ್ಮ ಜನರ ಕ್ಯೂಬಾ ಪ್ರೀತಿಯ ಬಗ್ಗೆ ವಿಸ್ಮಿತರಾಗಿದ್ದಾರೆ.

ಕೋರ್ಡಾ ಸಾವಿನ ಪುಟ್ಟ ತುಣುಕು ಈ ಎಲ್ಲವನ್ನೂ ನೆನಪಿಗೆ ತಂದಿತು. ಎಲ್ಲಾ ಪತ್ರಿಕೆಗಳ ಪುಟವನ್ನೂ ತಿರುವಿದೆ. ಕೋರ್ಡಾ ಸಾವು ಸಂಭವಿಸಿದ್ದು ಒಂದೇ ಪತ್ರಿಕೆಯಲ್ಲಿ. ಪ್ರತಿಯೊಂದು ಪತ್ರಿಕೆಗೂ ಕ್ಯೂಬಾ ಸುದ್ದಿಯಾಗ ದಿದ್ದರೂ ಕೋರ್ಡಾ ಸುದ್ದಿಯಾಗಲೇಬೇಕಿತ್ತು. ಏಕೆಂದರೆ ಆತ ಪತ್ರಿಕಾ ಛಾಯಾಗ್ರಾಹಕ. ಅಷ್ಟೇ ಅಲ್ಲ, ಅಂಕಿ ಅಂಶಗಳೇ ಹೇಳುವಂತೆ ಆತ ಅತಿ ಹೆಚ್ಚು ಮುದ್ರಣ ಕಂಡ ಚಿತ್ರದ ಜಾದೂಗಾರ.

ಕ್ಯೂಬಾ ಆರೋಗ್ಯ ರಂಗದಲ್ಲಿ ಸಾಧಿಸಿದ ದಿಗ್ವಿಜಯ, ಪ್ರವಾಸೋದ್ಯಮದಲ್ಲಿ ದಾಟುತ್ತಿರುವ ಅಡ್ಡಿ ಆತಂಕ ಕಷ್ಟಗಳ ಮಧ್ಯೆಯೂ ನೆಮ್ಮದಿ ಅರಸುತ್ತಿರುವ ಜನತೆ ಹೇಗೆ ಪತ್ರಿಕೆಗಳಿಗೆ ಸುದ್ದಿಯಾಗಲಿಲ್ಲವೋ ಹಾಗೆ ಕೋರ್ಡಾ ಸಹಾ ಸುದ್ದಿಯಾಗಲಿಲ್ಲ.

ಕ್ಯೂಬಾದಲ್ಲಿ ಜರುಗಿದ ೧೪ನೆಯ ವಿದ್ಯಾರ್ಥಿ ಯುವ ಸಮ್ಮೇಳನಕ್ಕೆ ಬಂದಿಳಿದ ಪಡ್ಡೆ ಹುಡುಗರ ತಂಡಕ್ಕೆ ಏನೇನೋ ಕನಸು. ಕೇವಲ ಸಮ್ಮೇಳನದಲ್ಲಿ ಕೂರುವುದು, ಮೆರವಣಿಗೆಯಲ್ಲಿ ಭಾಗವಹಿಸುವುದು ಮಾತ್ರ ಈ ತಂಡದ ಮುಂದಿರಲಿಲ್ಲ. ಅವರ ಡೈರಿಯಲ್ಲಿ ಇಣುಕಿಹಾಕಿದ್ದರೆ ಏನೇನು ಕ್ಯೂಬಾ ಬಗೆಗಿನ ಅದ್ಭುತಗಳು ಸಿಗುತ್ತಿದ್ದವೋ ! ಸಿಗಾರ್ ಹುಡುಕುವುದು, ಪುಸ್ತಕದಂಗಡಿಗೆ ಅಲೆಯುವುದು, ಸಾಧ್ಯವಿದ್ದಷ್ಟೂ ಚೆ ಫೋಟೋ ಸಂಗ್ರಹಿಸುವುದು, ಗ್ರಾನ್ಮಾ ಪತ್ರಿಕಾ ಕಛೇರಿಗೆ ಭೇಟಿ ನೀಡುವುದು, ಅಲ್ಲಿಯ ಟಿವಿ ಚಾನಲ್‌ಗಳ ಕಛೇರಿಯ ಬಾಗಿಲು ತಟ್ಟುವುದು, ತಮ್ಮ ದೇಶದ ರಾಯಭಾರ ಕಚೇರಿಗೆ ಹೋಗುವುದು, ಹೆಮ್ಮಿಂಗ್ವೇ ಇದ್ದ ಕಡಲ ತೀರ ನೋಡುವುದು, ಮೀನು ಹಿಡಿಯುವ ಸ್ಪರ್ಧೆ ನಡೆವ ಜಾಗಕ್ಕೆ ಲಗ್ಗೆಯಿಕ್ಕುವುದು, ಹೆಮ್ಮಿಂಗ್ವೇ ನೆನಪುಗಳನ್ನು ಜೀವಂತವಾಗಿರಿಸುವ ಆ ಅಜ್ಜ ಗ್ರೆಗೇರಿಯೋ ಫ್ಯೂಂಟೆಸ್ ಮನೆಗೆ ಹೋಗುವುದು ಮತ್ತು ಆ 'ಚೆ' ಯನ್ನು ಸೆರೆಹಿಡಿದ ಕೋರ್ಡಾನ ಮುಂದೆ ಕೂತು ಕಥೆ ಕೇಳುವುದು.

ಕೋರ್ಡಾ ಎಂದರೆ ಸಾಕು ಜನರಿಗೆ ನೆನಪಿಗೆ ಬರುವುದೇ ಚೆ ಗೆವಾರ. ಇಂದು ಜಗತ್ತಿನ ಎಲ್ಲೆಡೆ ಹರಡಿ ಹೋಗಿರುವ, ಎಲ್ಲರ ಮನದಲ್ಲಿ ಅಚ್ಚೊತ್ತಿ ನಿಂತಿರುವ ಆ ಚೆ ಮುಖ ಕೋರ್ಡಾನ ಕ್ಯಾಮರಾ ಕ್ಲಿಕ್ಕಿಸಿದ್ದು. ಪೋಸ್ಟರ್‌ಗಳಾಗಿ, ಟಿ-ಶರ್ಟ್, ಟೋಪಿ, ಕೀ ರಿಂಗ್, ಪುಸ್ತಕ, ಕರವಸ್ತ್ರ, ಬ್ಯಾನರ್, ಎಲ್ಲೆಡೆಯೂ ಈ ಚಿತ್ರ ಎಷ್ಟು ರೀತಿಯಲ್ಲಿ ಮುದ್ರಣಗೊಂಡಿದೆ ಎಂಬುದೇ ಲೆಕ್ಕಕ್ಕೆ ಸಿಕ್ಕಿಲ್ಲ. 'ಚೆ' ಎಂದ ತಕ್ಷಣ ನೆನಪಿಗೆ ಬರುವ ಚಿತ್ರ ಯಾವುದು ಒಮ್ಮೆ ನೋಡಿ. ಹ್ಞಾಂ ಆ ಚಿತ್ರವೇ ಕೋರ್ಡಾ ತೆಗೆದದ್ದು. ಈ ಚಿತ್ರದಿಂದಾಗಿಯೇ ಕೋರ್ಡಾ ಜಗತ್ತಿನ ಉದ್ದಗಲಕ್ಕೂ ಹರಡಿಹೋದ.

ತನ್ನ ೧೬ನೆಯ ವಯಸ್ಸಿನಲ್ಲಿ ಪ್ರೇಯಸಿಯನ್ನು ಸೆರೆಹಿಡಿಯಲು ಪುಟಾಣಿ ಕ್ಯಾಮೆರಾ ಹಿಡಿದ ಆಲ್ಬರ್ಟೋ ಡಯಾಜ್ ಕೋರ್ಡಾ ನಂತರ ಫ್ಯಾಷನ್ ಛಾಯಾಗ್ರಹಣದತ್ತ ವಾಲಿದ. ಕ್ಯಾಮೆರಾಗೆ ಅಂಟಿಕೊಳ್ಳುವ ಮುನ್ನ ವಿವಿಧ ವೇಷಗಳಲ್ಲಿ ಕಾಣಿಸಿಕೊಂಡ ಕೋರ್ಡಾ ಚಳವಳಿಯ ಸೆಳೆತಕ್ಕೆ ಸಿಕ್ಕಿದ. ಕ್ಯೂಬಾವನ್ನು ನಜ್ಜುಗುಜ್ಜಾಗಿಸಿದ ಬ್ಯಾಟಿಸ್ಟಾ ಆಡಳಿತ ಇದ್ದಾಗಲೇ ಅದಕ್ಕೆ ವಿರುದ್ಧವಾಗಿ ಎದ್ದ ಹೋರಾಟದ ಅಲೆಗಳು ಕೋರ್ಡಾನ ಕ್ಯಾಮೆರಾದೊಳಗೆ ಜಾಗ ಹುಡುಕಿಕೊಂಡವು.

ಆಗ ಹುಡುಕಿಬಂದದ್ದು 'ರೆವಲ್ಯೂಷನ್' ಪತ್ರಿಕೆಯ ಕೆಲಸ. ಆ ವೇಳೆಗೆ ಕಾಲ ಬದಲಾಗಿತ್ತು. ಬ್ಯಾಟಿಸ್ಟಾನನ್ನು ಪುಟ್ಟ ಗೆರಿಲ್ಲಾ ಪಡೆ ಮಣಿಸಿಹಾಕಿತ್ತು. ಎಲ್ಲೆಲ್ಲೂ ಬದಲಾವಣೆಯ ಅಲೆ. ಈ ಎಲ್ಲವನ್ನೂ ಸೆರೆಹಿಡಿಯುತ್ತಲೇ ಇದ್ದ ಕೋರ್ಡಾ, ಕ್ರಾಂತಿಯ ಮುಖವಾಣಿಯಾಗಿದ್ದ 'ರೆವಲ್ಯೂಷನ್' ಪತ್ರಿಕೆಯ ಛಾಯಾಗ್ರಾಹಕನಾದ. ಒಂದು ಮಹಾನ್ ಘಟನೆಯ ಕಣ್ಣಾಗಿಹೋದ. ಪುಟ್ಟ ಕ್ಯಾಮೆರಾ ದೊಡ್ಡ ಹೋರಾಟವನ್ನು ಒಡಲಲ್ಲಿ ಹೊತ್ತುಕೊಂಡಿತ್ತು.

ಆಗ ಆರಂಭವಾಯಿತು ಅಮೆರಿಕಾದ ದಾಳಿ. ಕ್ಯೂಬಾದ ಮೇಲೆ ಕಂಡ ಕಂಡೆಡೆಯೆಲ್ಲಾ ಬಾಂಬ್ ದಾಳಿ ಆರಂಭವಾಯಿತು. ಕ್ಯೂಬಾ ತಲೆ ಎತ್ತಿ ನಿಂತಿತು. ತನ್ನ ದೇಶಕ್ಕಾಗಿ ಶಸ್ತ್ರಾಸ್ತ್ರ ನೀಡುವವರನ್ನು ಎದುರು ನೋಡಿತು. ಆಗ ಫ್ರಾನ್ಸ್‌ನ 'ಲಾ ಕೂಬೆ' ಹಡಗು ಬೆಲ್ಜಿಯಂನಿಂದ ಶಸ್ತ್ರಾಸ್ತ್ರಗಳನ್ನು ಹೊತ್ತು ಕ್ಯೂಬಾ ಬಂದರಿಗೆ ಬಂದಿತು. ಒಂದೊಂದೇ ಶಸ್ತ್ರಾಸ್ತ್ರ ಕೆಳಗಿಳಿಯುತ್ತಿದ್ದಂತೆಯೇ ಅಮೆರಿಕಾ ಬಾಂಬ್ ಎಸೆಯಿತು. ಕ್ಯೂಬಾದ ರೋದನ ಹೇಳತೀರದು. ಹಡಗಿನಲ್ಲಿದ್ದ ಎಲ್ಲಾ ೭೫ ಕ್ಯೂಬನ್ನರು ಇಲ್ಲವಾಗಿದ್ದರು. ಶಸ್ತ್ರಾಸ್ತ್ರಗಳು ಇಲ್ಲ. ಕ್ಯೂಬಾದಲ್ಲಿ ಶೋಕಸಾಗರದ ಅಲೆಗಳೆದ್ದವು. ಜನರು ಬೀದಿಗಿಳಿದರು. ಜನರ ದಂಡು ನದಿಯಾಯಿತು, ಕಡಲಾಗಿ ಬದಲಾಯಿತು. ಮುಂದೆ ಇದ್ದವರು ಕ್ಯಾಸ್ಟ್ರೋ, ಚೆ. ಇವರೊಂದಿಗೆ ಕಣ್ಣೀರಿಟ್ಟವರು ಜೀನ್ ಪಾಲ್ ಸಾರ್ತ್ರೆ, ಸಿಮನ್ ದಿ ಬುವಾ.

ಕ್ಯೂಬಾದ ಬೀದಿಗಳು ಜನರಿಂದ ತುಂಬಿ ಹೋಗಿದ್ದವು. ಸಿ ಐ ಎ ನ ಪೆಂಟಗನ್ ಈ ದಾಳಿ ನಡೆಸಿದೆ ಎಂದು ಕ್ಯಾಸ್ಟ್ರೋ ಕಣ್ಣೀರಿಟ್ಟು ಹೇಳಿದರು. ಇನ್ನಿರುವುದು ಒಂದೇ ದಾರಿ 'ಪೇಟ್ರಿಯಾ ಓ ಮ್ಯೂರ್ಟೆ' (ತಾಯ್ನಾಡು ಇಲ್ಲವೇ ಸಾವು). ಆಗ ಕೋರ್ಡಾ ವೇದಿಕೆಯತ್ತ ನೋಡಿದರು. ನಾಯಕರ ಸಾಲಿನಲ್ಲಿ ಇರಬೇಕಾದವರಲ್ಲಿ ಒಬ್ಬ ನಾಪತ್ತೆ. ಕೋರ್ಡಾ ಕಣ್ಣು ಆತನಿಗಾಗಿ ಹುಡುಕಲು ಆರಂಭಿಸಿತು. ಚೆ ಗೆವಾರ ಒಂದು ಕ್ಷಣ ವೇದಿಕೆಯ ಮುಂಭಾಗಕ್ಕೆ ಬಂದದ್ದೇ ಜನರತ್ತ ದಿಟ್ಟಿಸಿ ನೋಡಿದರು. ಜನಸಾಗರದ ಕೊನೆ ಎಲ್ಲಿ ಎಂದು ಹುಡುಕುತ್ತಿದ್ದಾರೇನೋ ಎಂಬ ದೂರ ನೋಟ. ಗಡಸು ಮುಖ. ಅದೇ ಗಡ್ಡ, ಕೆಂಪು ನಕ್ಷತ್ರ ಹೊತ್ತ ಅದೇ ಕಪ್ಪು ಹ್ಯಾಟ್, ಅದೇ ಕೋಟು.

ಕೋರ್ಡಾ ಪಟ ಪಟ ಎಂದು ಕ್ಯಾಮೆರಾ ಕ್ಲಿಕ್ಕಿಸಿದರು. ಸಿಕ್ಕಿದ್ದು ಎರಡೇ ಅವಕಾಶ. ಚೆ ಅಲ್ಲಿಂದ ಜಾಗ

ಮುಂದಿನ ಪುಟಕ್ಕೆ

# ಹೆದ್ದಾರಿಯ ಹೊಲಸು ಯೋಜನೆ

*ತಿಂಗಳಿಗೆರಡು ಬಾರಿ ಸಚಿವ ಧರ್ಮ ಸಿಂಗ್ ಬೆಂಗಳೂರು-ಮೈಸೂರು ಹೆದ್ದಾರಿ ಇನ್ನೇನು ಆರಂಭವಾಗಿ ಬಿಟ್ಟಿತೆಂದು ಹೇಳುವುದು ರೂಢಿ. ಹೆದ್ದಾರಿಯ ಹಿಂದಿನ ಹಗರಣಗಳು ಇನ್ನೂ ಪೂರ್ಣವಾಗಿ ಬೆಳಕಿಗೆ ಬಂದಿಲ್ಲದಿದ್ದರೂ ಹೆದ್ದಾರಿ ಮತ್ತು ಹೆಗ್ಗಣಗಳಿಗೆ ನೆಂಟಸ್ತಿಕೆ ಇರುವುದು ಗುಟ್ಟಾಗಿ ಉಳಿದಿಲ್ಲ. ಹೆದ್ದಾರಿಗಿಂತಲೂ ಅದರ ಜೊತೆ 'ಅಭಿವೃದ್ಧಿ'ಗೊಳ್ಳುವ ಜೂಜು - ಕುಡಿತದ ತಾಣಗಳಿಗೆ ಸೊಕ್ಕಿದ ಪ್ರಭುಗಳು ಮಾರುಹೋಗಿದ್ದಾರೆ. ಅನಗತ್ಯವಾದ ಈ ಹೆದ್ದಾರಿಯನ್ನು ಜನ ಆಗಗೊಡುವುದಿಲ್ಲ. ಆದರೂ ಆದು ಆಗಿಬಿಡುತ್ತದೆಂದು ಗುಮ್ಮನ ಮುಸುಕಿನಲ್ಲಿ ಹಲವು ಸರ್ಕಾರಿ ಅಧಿಕಾರಿಗಳು ಜನರಿಂದ ಲಂಚದ ಹಣ ಸೂರೆಮಾಡುತ್ತಿದ್ದಾರೆಂಬುದು ಮಾನ್ಯ ಧರ್ಮ ಸಿಂಗ್ ಅವರಿಗೆ ತಿಳಿಯಬೇಕಾಗಿದೆ. ಈ ಕಾರಿಡಾರ್ ಯೋಜನೆಯ ವಿರುದ್ಧದ ಮುಂದಿನ ಸ್ವರೂಪವೇನು ?*

## ಎಚ್. ಎಸ್. ದೊರೆಸ್ವಾಮಿ

ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ (ಬಿಎಂಐಸಿ) ಎಂಬ ವಿನಾಶಕಾರಿ ದುಷ್ಟ ಯೋಜನೆಯ ಬಗೆಗೆ ಹೊಸದಾಗಿ ಯಾರಿಗೂ ಪರಿಚಯಿಸಬೇಕಾಗಿಲ್ಲ. ಕದ್ದು ಮುಚ್ಚಿ ಕೆಲಸ ಮಾಡಿ ಮುಗಿಸಲು ಕರ್ನಾಟಕ ರಾಜ್ಯ ಸರ್ಕಾರ ಹಾಗೂ ಯೋಜನೆಯ ಪ್ರಾಯೋಜಕರಾದ 'ನೈಸ್' (ನಂದಿ ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಎಂಟರ್‌ಪ್ರೈಸಸ್ ಲಿಮಿಟೆಡ್) ಕಂಪೆನಿ ಎಷ್ಟೇ ಪ್ರಯತ್ನಿಸಿದರೂ ಅವುಗಳು ಕೈಗೊಂಡಿರುವ ಈ ದುಷ್ಟ ಯೋಜನೆ ಹಾಗೂ ಅವರ ನಡುವಿನ ಅಪವಿತ್ರ ಮೈತ್ರಿ ಇವುಗಳನ್ನು ಜನರ ಮುಂದೆ ಕರ್ನಾಟಕ ವಿಮೋಚನಾ ರಂಗ ಬಟ್ಟಬಯಲು ಮಾಡಿದೆ. ಜನರನ್ನು ಈಗ ಹೋರಾಟಕ್ಕೆ ಅಣಿಮಾಡುವ ಕೆಲಸ ನಡೆದಿದೆ.

೧೯೯೫ರಲ್ಲಿ ಈ ಯೋಜನೆ ರೂಪು ತಾಳಿತು. ೧೯೯೬ರಲ್ಲಿ ಈ ಯೋಜನೆಗೆ ಸಂಬಂಧಿಸಿದ ಮಾಹಿತಿ ಪುಸ್ತಕ ಒಂದು ನಮ್ಮ ಕೈಗೆ ಸಿಕ್ಕಿತು. ೨೧ ಸಾವಿರ ಎಕರೆ ವ್ಯವಸಾಯ ಭೂಮಿಯನ್ನು ಈ ಯೋಜನೆಗೆ ಸರ್ಕಾರ ಬಡವರಿಂದ ಕಿತ್ತುಕೊಂಡು ನೈಸ್ ಕಂಪೆನಿಗೆ ನೀಡುವುದೆಂಬ ಸುದ್ದಿ ಇದರಿಂದ ಗೊತ್ತಾಯಿತು. (ಯಾವ ರೀತಿಯಲ್ಲೂ ನೈಸ್ ಅಲ್ಲದ ಕಂಪನಿಯ ಹೆಸರು ಮಾತ್ರ ನೈಸ್ ಎಂಬುದು ಒಂದು ವ್ಯಂಗ್ಯ).

ಸರ್ಕಾರ ಈ ಯೋಜನೆಯ ಬಗೆಗೆ ಒಂದಿಷ್ಟು ಮಾಹಿತಿಯೂ ಸಾರ್ವಜನಿಕರಿಗೆ ಸಿಗದಂತೆ ಇಂದಿಗೂ ಮುಚ್ಚಿಟ್ಟುಕೊಂಡಿದೆ. ಪತ್ರಕರ್ತರಿಗೂ ಮಾಹಿತಿ ನೀಡಲು ಸರ್ಕಾರ ನಿರಾಕರಿಸಿತು. ಶಾಸಕ ಪುಟ್ಟಣ್ಣಯ್ಯನವರು ಪ್ರಯತ್ನ ಮಾಡಿದರೂ ಅವು ದೊರೆಯಲಿಲ್ಲ. ಆಗ ವಿಮೋಚನಾ ರಂಗ ಇದಕ್ಕೆ ಸಂಬಂಧಿಸಿದ ಮಾಹಿತಿಯನ್ನೆಲ್ಲ ಸಂಗ್ರಹಿಸುವ ಸಂಕಲ್ಪ ಮಾಡಿತು. ಹಲವು ತಿಂಗಳ ಅವಿರತ ಪ್ರಯತ್ನದಿಂದ ಈ ಯೋಜನೆಯ ಮುಖ್ಯ ಅಂಶಗಳನ್ನೆಲ್ಲಾ ಹೊರತೆಗೆಯುವುದರಲ್ಲಿ ಅದು ಯಶಸ್ಸುಗಳಿಸಿತು. ಆದರಲ್ಲಿನ ಮುಖ್ಯವಾದ ಅಂಶಗಳು ಇವು :

೧. ಈ ರಸ್ತೆ ಯೋಜನೆಗೆ ಬಡಜನರ ೫-೬ ಸಾವಿರ ಎಕರೆ ಜಮೀನನ್ನು ಸರ್ಕಾರ ಕಬಳಿಸುವುದು. ೫ ಟೌನಷಿಪ್‌ಗಳಿಗಾಗಿ ೨೭ ಸಾವಿರ ಎಕರೆ ಜಮೀನನ್ನು ತನ್ನ ವಶಪಡಿಸಿಕೊಳ್ಳುವುದು.

೨. ನೈಸ್ ಕಂಪೆನಿಯು ವಿದೇಶಿ - ಕಂಪೆನಿಯೊಂದರ ಸಹಯೋಗದಲ್ಲಿ ಬಿಡದಿ, ರಾಮನಗರ, ಮಂಡ್ಯ, ಶ್ರೀರಂಗಪಟ್ಟಣ ತಾಲ್ಲೂಕುಗಳಲ್ಲಿ ೫ ಟೌನ್‌ಷಿಪ್‌ಗಳನ್ನು ನಿರ್ಮಾಣ ಮಾಡಲಿದೆ. ಇದಕ್ಕಾಗಿ ೨೯೦ ಗ್ರಾಮಗಳವರನ್ನು ಎತ್ತಂಗಡಿ ಮಾಡಿ ಅವರ ಮನೆಮಠ ಜಮೀನುಗಳನ್ನೆಲ್ಲ ಸರ್ಕಾರ ವಶಪಡಿಸಿಕೊಳ್ಳಲಿದೆ.

೩. ಈ ಕಾರಿಡಾರ್ ರಸ್ತೆ ಹಾಗೂ ೫ ಟೌನ್‌ಷಿಪ್‌ಗಳ ಸ್ವಾಮ್ಯ ೪೦ ವರ್ಷಗಳ ಕಾಲ ನೈಸ್ ಕಂಪೆನಿಯದಾಗಿರುತ್ತದೆ. ಅಲ್ಲದೆ ಆ ಟೌನ್‌ಷಿಪ್‌ಗಳಿಂದ ಈ ಕಂಪೆನಿ ಲಕ್ಷಲಕ್ಷ ರೂಪಾಯಿಗಳನ್ನು ದೋಚುವುದಾದರೂ, ಸರ್ಕಾರಕ್ಕೆ ಕಂಪೆನಿ ವರ್ಷಕ್ಕೆ ಎಕರೆಗೆ ೧೦ ರೂಪಾಯಿ ಮಾತ್ರ ಕೊಟ್ಟರೆ ಸಾಕು.

೪. ಈ ಕಾರಿಡಾರ್ ರಸ್ತೆಯಲ್ಲಿ ಓಡಾಡುವ ವಾಹನಗಳು

---

*ಹಿಂದಿನ ಪುಟದಿಂದ*

ಬದಲಿಸಿಯಾಗಿತ್ತು. ಆ ರಾತ್ರಿ ಕತ್ತಲಕೋಣೆಯಲ್ಲಿ ನೆಗೆಟಿವ್‌ಗೆ ಉಸಿರು ತುಂಬುತ್ತಿದ್ದ ಕೋರ್ಡಾ ಕಣ್ಣು ಮಿನುಗಲಾರಂಭಿಸಿತು. ಆ ಚಿತ್ರ ಕಣ್ಣ ಮುಂದಿತ್ತು.

ಆದರೆ 'ರೆವಲ್ಯೂಷನ್'ನಲ್ಲಿ ಇದು ಪ್ರಕಟವಾಗಲಿಲ್ಲ. ಕ್ಯೂಬಾ ಜನರ ದೇಶ. ನಾಯಕರ ದೇಶವಲ್ಲ. ಕೋರ್ಡಾ ತೆಗೆದ ಆ ಚಿತ್ರ ಆತನ ಮನೆಯ ಗೋಡೆಯ ಮೇಲೆ ೭ ವರ್ಷ ತೂಗುತ್ತಿತ್ತು. ಆಗ ಇಟಲಿಯ ಪ್ರಕಾಶಕ ಕೋರ್ಡಾನನ್ನು ಹುಡುಕುತ್ತಾ ಬಂದ. ಆ ಸಂಸ್ಥೆ ಜಗತ್ತಿನ ಎಲ್ಲೆಡೆ ಇದ್ದ ಚೆ ಗೆವಾರನ ಚಿತ್ರಗಳನ್ನು ಕಲೆಹಾಕುತ್ತಿತ್ತು. ಕೋರ್ಡಾ ತನ್ನಲಿದ್ದ ಫೋಟೋ ಸಂಸ್ಥೆಯ ಕೈಗಿತ್ತರು.

ಕೆಲವೇ ತಿಂಗಳು ಅಷ್ಟೆ. ಬೊಲಿವಿಯಾದ ಕಾಡುಗಳಲ್ಲಿ ಸಿ ಐ ಎ ತನ್ನ ಗುರಿ ಸಾಧಿಸಿಯೇಬಿಟ್ಟಿತು. ಚೆ ಈಗ ನೆನಪು ಮಾತ್ರ. ಇಟಲಿಯ ಈ ಸಂಸ್ಥೆ ಕೋರ್ಡಾನಿಂದ ಪಡೆದಿದ್ದ ಆ ಗಂಭೀರ ಕಣ್ಣುಗಳ 'ಚೆ' ಫೋಟೋವನ್ನು ಪೋಸ್ಟರ್ ಆಗಿ ಮುದ್ರಿಸಿತು. ಹತ್ತು ಲಕ್ಷ ಪೋಸ್ಟರ್‌ಗಳು. ಜಗದುದ್ದ, ಜಗದಗಲ ಅದೇ ಚೆ. ದಿಟ್ಟ ನೋಟದ, ಗಂಭೀರ ಮುಖದ ಚೆ.

'ಈ ಜಗತ್ತಿನ ಯಾವುದೇ ಮೂಲೆಯಲ್ಲಿ ನಡೆಯುತ್ತಿರುವ ದೌರ್ಜನ್ಯದ ವಿರುದ್ಧ ಸಿಡಿದೆದ್ದರೆ ನೀನು ನನ್ನ ಸಂಗಾತಿ' ಎಂದ ಚೆ ಗೆವಾರ. ಕೋರ್ಡಾನ ಈ ಫೋಟೋ ಅದಕ್ಕೆ ಮಾತು ಕೊಟ್ಟಿತ್ತು. ಪ್ರತಿಯೊಬ್ಬನಿಗೂ ಚೆ ಈ ಮಾತು ಹೇಳುತ್ತಿದ್ದಾನೆ ಎನ್ನುವ ಚಿತ್ರ. ಈ ಚಿತ್ರ ಎಲ್ಲೆಡೆ ಹರಿಯಲಾರಂಭಿಸಿತು. ಯಾರು ಲೆಕ್ಕ ಇಟ್ಟರು ಎಲ್ಲೆಲ್ಲಿ ಹೋಯಿತೆಂದು, ಯಾವ ಒಡಲೊಳಗೆ, ಯಾವ ಕಡಲು ದಾಟಿ, ಯಾವ ದೇಶದ ಗಡಿ ಮೀರಿ...

ಒಂದು ಚಿತ್ರ ಸಾವಿರ ಪದಕ್ಕೆ ಸಮ ಎನ್ನುತ್ತಾರೆ. 'ಚೆ'ಯ ಚಿತ್ರ ಅದನ್ನು ಸಾಧಿಸಿತ್ತು. ಆ ಒಂದು ನೋಟ ನೂರಾರು ಕಥೆ ಹೇಳುವಂತೆ. ಕೋರ್ಡಾ ಅದಕ್ಕೆ 'ಹಿರಾಯಿಕ್ ಗೆರಿಲ್ಲಾ' ಎಂದು ಹೆಸರಿಟ್ಟರು. ಕೋರ್ಡಾನ ಮನೆಗೆ ಜನರ ಮುತ್ತಿಗೆ ಈಗಲೂ ನಿಂತಿಲ್ಲ. ಕಾಲ ಬದಲಾಗಿ, ತಂತ್ರಜ್ಞಾನ ಬದಲಾಗಿ ನೂರಾರು ರೀತಿಯ ಕ್ಯಾಮೆರಾ ಬದಲಾಗಿದ್ದರೂ ಜನ ಆ 'ಚೆ'ಯನ್ನು ಸೆರೆಹಿಡಿದ ಕ್ಯಾಮೆರಾ ನೋಡಲು ಕೋರ್ಡಾ ಮನೆಯ ಬಾಗಿಲು ತಟ್ಟುತ್ತಲೇ ಇದ್ದಾರೆ. ಆ ಕ್ಯಾಮೆರಾ, ಆ ನೆಗೆಟಿವ್ ಈಗಲೂ ಮ್ಯೂಸಿಯಂನ ವಸ್ತು.

ಕೋರ್ಡಾ ಈ ಚಿತ್ರಕ್ಕೆ ಒಂದು ಬಿಡಿಗಾಸೂ ಪಡೆಯಲಿಲ್ಲ. ಹೋರಾಟದ ಹುಮ್ಮಸ್ಸಾಗಿ ಎಲ್ಲ ದಿಕ್ಕುಗಳಲ್ಲಿ ಹರಡಿಹೋಗಲಿ ಎಂದರು.

ಆ ಚಿತ್ರ ಹೋರಾಟದ ಸಂಕೇತವಾಗಿಹೋಗಿತ್ತು. ಆದರೆ ಈ 'ಚೆ' ಮುಖ ವೋಡ್ಕಾ ಬಾಟಲ್‌ನ ಮೇಲೆ ಕಂಡದ್ದೇ ಕೋರ್ಡಾ ಬೆಂಕಿಯಾದರು. ಯಾವ ಚೆಯನ್ನು, ಕ್ಯೂಬಾವನ್ನು, ಆ ಹೋರಾಟದ ಹುಮ್ಮಸ್ಸನ್ನು ತಣ್ಣಗಾಗಿಸಲು ಶ್ರಮಿಸುತ್ತಿದ್ದ ಅದೇ ಅಮೆರಿಕಾ, ಬ್ರಿಟನ್ ಈಗ 'ಚೆ'ಯನ್ನು ಅಸ್ತ್ರವಾಗಿ ಬಳಸಿದ್ದವು. ಬ್ರಿಟನ್‌ನ ಜಾಹೀರಾತು ಸಂಸ್ಥೆ ವೋಡ್ಕಾ ಮಾರಲು ಜನರ ಎದೆಯಾಳದ ಚೆಯನ್ನೇ ಬಳಸಿತು. ಇಳಿವಯಸ್ಸಿನ ಕೋರ್ಡಾ ಬ್ರಿಟನ್ ನ್ಯಾಯಾಲಯದ ಕಟ್ಟೆ ಏರಿದರು. ಎಂದಿಗೂ ಈ ಚಿತ್ರ ನನ್ನದು ಎಂದು ಹೇಳದಿದ್ದ ಕೋರ್ಡಾ ಇದೇ ಮೊದಲ ಬಾರಿಗೆ ವ್ಯಗ್ರರಾಗಿ ನಿಂತಿದ್ದರು. ಅವರ ಕೈಗಳಲ್ಲಿ ಆ ನೆಗೆಟಿವ್‌ಗಳು ಇತ್ತು. ಯಾರನ್ನು ಕೇಳಿದಿರಿ ಎಂದು ಗುಡುಗಲು ಸಜ್ಜಾಗಿದ್ದರು. ವಿಶ್ವದ ಮೂಲೆ ಮೂಲೆಯಲ್ಲಿ ಪ್ರತಿಭಟನೆಯ ಅಲೆ ಎದ್ದಿತು.

ಚೆ ಇದ್ದರೂ ಸುದ್ದಿ, ಇಲ್ಲದಿದ್ದರೂ ಸುದ್ದಿ. ಇದು ಎಲ್ಲರಿಗೂ ಗೊತ್ತು. ಬ್ರಿಟನ್ನಿನ ಜೈಲಿನಲ್ಲಿದ್ದ ಕೈದಿ ನನಗೊಂದು ಚೆ ಚಿತ್ರ ಇರುವ ಟಿ-ಶರ್ಟ್ ಕೊಡಿ ಎಂದಾಗ ಜೈಲು ಬೆಚ್ಚಿಬಿದ್ದದ್ದು ಏಕೆ ?

ವೋಡ್ಕಾ ಸಂಸ್ಥೆ ತಕ್ಷಣವೇ ಚೆ ಚಿತ್ರವನ್ನು ತೆಗೆಯಿತು. ಹೋರಾಟಗಾರನನ್ನು ಹೋರಾಟಗಾರರಿಗೇ ಬಿಟ್ಟುಕೊಡಲಾಯಿತು. ಕೋರ್ಡಾ ಹೇಳಿದರು : ಚೆ ಎಂದರೆ ಪ್ರತಿಭಟನೆ. ಎಲ್ಲಿ ಯಾವ ಮೂಲೆಯಲ್ಲಿಯೇ ಆಗಲಿ ಹೋರಾಟದ ಹುಮ್ಮಸ್ಸಾಗಿ ನನ್ನ ಆ ಫೋಟೋ ಇರಲಿ. ಚೆ ಗೆವಾರ ಪ್ರತಿನಿಧಿಸಿದ ಮೌಲ್ಯಗಳಿಗಾಗಿ ಮಾತ್ರ ಈ ಫೋಟೋ, ಅಷ್ಟು ನೆನಪಿರಲಿ ಎಂದರು.

ಕೋರ್ಡಾರಿಗೆ ಬ್ರಿಟನ್‌ನ ಕಂಪನಿ ೫೦ ಸಾವಿರ ಡಾಲರ್‌ಗಳನ್ನು ಪರಿಹಾರವಾಗಿ ನೀಡಿತು. ಕ್ಯೂಬಾದ ಮಕ್ಕಳ ಆರೋಗ್ಯವನ್ನು ಕಾಪಾಡಲು ಈ ಎಲ್ಲಾ ಹಣವನ್ನು ಕೋರ್ಡಾ ಸರ್ಕಾರದ ಕೈಗಿತ್ತರು. ಜಗತ್ತಿನ ಕಣ್ಣು ಹನಿಗೂಡಿತು.

ಕೋರ್ಡಾ ಹೇಳಿದರು. ಚೆ ಗೆವಾರ ಈಗ ಬದುಕಿದ್ದಿದ್ದರೆ ಆತ ಮಾಡುತ್ತಿದ್ದುದೂ ಇದನ್ನೇ ತಾನೆ ?

ಆ ಕೋರ್ಡಾ ಈಗ ಇಲ್ಲ.

❑❑

ಹೋಗುವಾಗ, ಬರುವಾಗ ೨೦೦ ರೂ. ಟೋಲ್ ಫೀ ಕೊಡಬೇಕು.

ಈ ಯೋಜನೆಯನ್ನು ತಡೆಗಟ್ಟಲು ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು :

೧. ಬೆಂಗಳೂರು-ಮೈಸೂರು ಮಧ್ಯೆ ಇರುವ ಎಲ್ಲ ಊರುಗಳಲ್ಲಿ ಜನಪರ ಸಂಘಟನೆಗಳು ಹಾಗೂ ಗಣ್ಯವ್ಯಕ್ತಿಗಳನ್ನು ಕಂಡು ಅವರಿಗೆ ಈ ಮನೆಹಾಳು ಯೋಜನೆಯ ರೂಪುರೇಷೆಗಳನ್ನು ವಿವರಿಸಿ ಹೇಳಿ, ಅವರನ್ನು ಈ ಯೋಜನೆಯ ವಿರುದ್ಧ ಹೋರಾಟಕ್ಕೆ ನೆರವಾಗುವಂತೆ ಪ್ರಾರ್ಥಿಸಲಾಯಿತು.

೨. ಹಳ್ಳಿಗಳಲ್ಲಿ ರೈತರನ್ನೂ ವಿದ್ಯಾರ್ಥಿಗಳು ಮತ್ತು ನಾಗರಿಕರನ್ನೂ ಸಂಘಟಿಸಿ ಆ ಮೂಲಕ ಈ ಯೋಜನೆಯನ್ನು ಕೈ ಬಿಡುವಂತೆ ಸರ್ಕಾರಕ್ಕೂ ಮತ್ತು ನೈಸ್ ಕಂಪೆನಿಗೂ ಒತ್ತಾಯ ತರಲಾಯಿತು.

ಈ ಕಾರ್ಯಕ್ರಮಗಳ ಅಂಗವಾಗಿ ಕರ್ನಾಟಕ ವಿಮೋಚನಾ ರಂಗದ ಕಾರ್ಯಕರ್ತರು ಬೆಂಗಳೂರು, ಬೆಂಗಳೂರು ಗ್ರಾಮಾಂತರ, ಬಿಡದಿ, ರಾಮನಗರ, ಚನ್ನಪಟ್ಟಣ, ಮದ್ದೂರು, ಮಂಡ್ಯ, ಶ್ರೀರಂಗಪಟ್ಟಣ ತಾಲ್ಲೂಕುಗಳಲ್ಲಿ ಪ್ರವಾಸ ಮಾಡಿ ಜನರನ್ನು ಒಗ್ಗೂಡಿಸುವ ಕೆಲಸ ಮಾಡಿದರು.

೧೯೯೮ರಲ್ಲಿ ನವೆಂಬರ್ ೨೦ರಿಂದ ಐದು ದಿನಗಳ ಕಾಲ ಈ ಯೋಜನೆಯಿಂದ ಹಾಳಾಗುವ ಜನರನ್ನು ಜಾಗೃತಿಗೊಳಿಸುವುದಕ್ಕಾಗಿ ಮೈಸೂರು - ಬೆಂಗಳೂರು ಮಧ್ಯೆ ಬರುವ ಎಲ್ಲ ಗ್ರಾಮಗಳಿಗೂ ಭೇಟಿ ನೀಡುವ ದೃಷ್ಟಿಯಿಂದ ಸೈಕಲ್ ಜಾಥಾಗಳನ್ನು ಏರ್ಪಡಿಸಲಾಯಿತು. ಆ ರೈತರ ಮುಂದೆ, ಅವರನ್ನು ದಿವಾಳಿ ಮಾಡಲು ಸರ್ಕಾರ ಯೋಜಿಸಿರುವ ಕಾರ್ಯಕ್ರಮವನ್ನು ತೆರೆದಿಡಲಾಯಿತು.

೧೯೯೯ರ ಫೆಬ್ರವರಿಯಲ್ಲಿ ಹಾಗೂ ೨೦೦೦ದ ಏಪ್ರಿಲ್‌ನಲ್ಲಿ ಈ ಯೋಜನೆಯಿಂದ ಧ್ವಂಸವಾಗುವ ಎಲ್ಲ ಹಳ್ಳಿಗಳಿಗೂ ಪಾದಯಾತ್ರೆ ಜಾಥಾಗಳನ್ನು ಕಳುಹಿಸಿ ಕೊಡಲಾಯಿತು. ಈ ಜಾಥಾಗಳಲ್ಲಿ ಶಿವಮೊಗ್ಗ, ಕೆ.ಜಿ.ಎಫ್., ಸಿಂಧನೂರು, ಬೆಳಗಾವಿ, ಚಿತ್ರದುರ್ಗ, ಶೃಂಗೇರಿ, ಮೈಸೂರು, ಇಲ್ಲಿಯ ಹುರುಪಿನ ಯುವಕರೂ, ವಿದ್ಯಾರ್ಥಿಗಳೂ ಪಾಲ್ಗೊಂಡರು. ರೈತಾಪಿ ಜನರು ಈ ಪಾದಯಾತ್ರಿಗಳಿಗೆ ಅಪಾರ ಪ್ರೀತಿ ವಿಶ್ವಾಸ ತೋರಿ, ತುಂಬು ಹೃದಯದಿಂದ ಬರಮಾಡಿಕೊಂಡು, ತಮಗಾಗುವ ಹಾನಿ ಏನೆಂಬುದನ್ನು ತಿಳಿದುಕೊಂಡರು.

ಈ ಯೋಜನೆಯಡಿ ಬರುವ ಎಲ್ಲ ಪ್ರದೇಶದ ಎಲ್ಲ ಹಳ್ಳಿಗಳಲ್ಲೂ ಒಕ್ಕೂಟ ಸ್ಥಾಪಿಸಿ, ಎಲ್ಲ ಸಮಾನಮನಸ್ಕರೂ ಒಂದುಗೂಡಿ ದೃಢವಾಗಿ ನಿಲ್ಲುವಂತೆ ಮಾಡಿದರೆ ಯಾವುದೇ ಸರ್ಕಾರ ಎಷ್ಟೇ ಹಿಂಸಾಕೃತ್ಯದಲ್ಲಿ ತೊಡಗಿದರೂ ಈ ಯೋಜನೆಯನ್ನು ಜಾರಿಗೆ ಕೊಡಲು ಸಾಧ್ಯವಾಗುವುದಿಲ್ಲ. ಬೆಂಗಳೂರು-ಮೈಸೂರು ಕಾರಿಡಾರ್ ರಸ್ತೆ ಇರುವ ಪ್ರದೇಶದುದ್ದಕ್ಕೂ ಎದುರು ಬಿದ್ದಿರುವ ಜನರನ್ನು ಎದುರು ಹಾಕಿಕೊಂಡು ಇಂತಹ ಸಮಾಜ ಕಂಟಕ ಯೋಜನೆಯನ್ನು ಕಾರ್ಯಗತಗೊಳಿಸುವುದು ಸರ್ಕಾರಕ್ಕೆ ಸಾಧ್ಯವೇ ಇಲ್ಲ. ಕೋಟಿ ಕೋಟಿ ಬಾಚಿಕೊಂಡು ಹೋಗಲು ಬಂದಿರುವ ನೈಸ್ ಕಂಪೆನಿಗೆ ಈ ವಾಸ್ತವ ಸಂಗತಿ ಗೊತ್ತಿರಲಿಕ್ಕಿಲ್ಲ. ಸರ್ಕಾರ ಬಲಪ್ರಯೋಗ ಮಾಡಿ, ಜನರನ್ನು ಬೀದಿಪಾಲು ಮಾಡಿ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತೇವೆಂದು ಹೊರಟರೆ ಜನರ ಗೋರಿಯ ಮೇಲೆ ಆ ಕೆಲಸವನ್ನು ಅವರು ಸಾಧಿಸಬೇಕಾದೀತು.



*ಹೋರಾಟದ ಪ್ರತಿಜ್ಞೆ ಸ್ವೀಕರಿಸುತ್ತಿರುವ ಜನರು*

ಒಂದು ಎಕರೆ-ಎರಡು ಎಕರೆ ಜಮೀನಿನಲ್ಲಿ ವ್ಯವಸಾಯ ಮಾಡಿಕೊಂಡು ಹೊಟ್ಟೆ ಹೊರೆಯುತ್ತಿರುವ ಸಹಸ್ರಾರು ರೈತರನ್ನು ಬೀದಿಪಾಲು ಮಾಡಿ, ಬಹುರಾಷ್ಟ್ರೀಯ ಪ್ರತಿಷ್ಠಿತ ಜನರ ಮೋಜಿನ ಓಡಾಟಕ್ಕೆ ರಸ್ತೆ ರಚಿಸುವ ಯೋಜನೆಯನ್ನು ಕೈಗೆತ್ತಿಕೊಂಡಿರುವುದು ಪ್ರಜಾದ್ರೋಹದ ಕೆಲಸ. ಸ್ವಾತಂತ್ರ್ಯ ಬಂದು ೫೨ ವರ್ಷಗಳು ಕಳೆದರೂ ಇನ್ನೂ ಬಡತನ, ನಿರುದ್ಯೋಗ, ಅನಕ್ಷರತೆಯಿಂದ ಬಳಲುತ್ತಿರುವವರ ಸಂಖ್ಯೆ ಶೇ. ೪೦ರಷ್ಟಿದೆ. ಇವರೇನು ಈ ದೇಶದ ಎರಡನೆ ದರ್ಜೆ ಜನರೇ ? ಇವರು ಹೀಗೆ ಇರಬೇಕಾದ್ದು ಅವರ ಕರ್ಮವೇ ? ಈ ಜನರ ಬಗೆಗೆ ಯಾವ ಕಾಳಜಿಯನ್ನೂ ಸರ್ಕಾರ ತೋರಿಸುತ್ತಿಲ್ಲ. ಇದು ಸಾಲದೆಂಬಂತೆ ತಮ್ಮ ದುಡಿಮೆಯಿಂದ ಎರಡುಹೊತ್ತು ಗಂಜಿ ಕುಡಿದು ಸ್ವತಂತ್ರವಾಗಿ ಕಾಲ ಕಳೆಯುತ್ತಿರುವ ಇನ್ನೂ ಸಹಸ್ರಾರು ಜನರನ್ನು ಒಕ್ಕಲೆಬ್ಬಿಸಿ, ಅವರನ್ನೂ ಬೀದಿಪಾಲು ಮಾಡಲು ಸರ್ಕಾರಕ್ಕೆ ಮನಸ್ಸು ಹೇಗೆ ಬರುತ್ತದೆ ? ಈ ಸರ್ಕಾರವೇನು ಪ್ರಜಾಕಂಟಕ ಸರ್ಕಾರವೇ ? ಪರದೇಶಿ ಸರ್ಕಾರವೇ ? ಯಾವುದೇ ಕಾರಣದಿಂದ ಈ ಒಂದು-ಎರಡು ಎಕರೆ ಜಮೀನುಳ್ಳವರನ್ನು ಒಕ್ಕಲೆಬ್ಬಿಸುವ ಹುನ್ನಾರು ಸರ್ಕಾರ ಮಾಡಿದಲ್ಲಿ, ಇದನ್ನು ಸೈತಾನ್ ಸರ್ಕಾರ ಎಂದು ಕರೆಯಬೇಕಾದೀತು. ಇದರಿಂದ ಸರ್ಕಾರಕ್ಕೂ ಪ್ರಜೆಗಳಿಗೂ ಘರ್ಷಣೆ ಆಗುವುದರಲ್ಲಿ ಅನುಮಾನವಿಲ್ಲ. ಇದು ಸರ್ಕಾರದ ಪತನಕ್ಕೆ ಶುಭಾರಂಭವೆಂದೇ ಜನ ಭಾವಿಸಿಯಾರು.

ಇಡೀ ಈ ಪ್ರದೇಶದ ಜನ ಹಳ್ಳಿ ಹಳ್ಳಿಯಲ್ಲೂ ಒಕ್ಕೂಟ ರೂಪಿಸಿಕೊಂಡು ದೃಢವಾಗಿ ನಿಂತರೆ ಯಾವುದೇ ಸರ್ಕಾರ, ಎಂತಹ ಬಲಪ್ರದರ್ಶನ ಮಾಡಿದರೂ, ಕಾರಿಡಾರ್ ಯೋಜನೆ ಜಾರಿಗೊಳಿಸಲು ಸಾಧ್ಯವಾಗುವುದಿಲ್ಲ.

ಈ ಕಾರಿಡಾರ್ ಯೋಜನೆ ಕಾರ್ಯಗತವಾಯಿತೆಂದರೆ ವಿದೇಶೀಯರ ದಂಡೇ ನಮ್ಮ ಲೂಟಿಗೆ ನುಗ್ಗಿ ಬರುತ್ತದೆ. ನಮ್ಮ ನೆಲ, ಜಲ, ಜಂಗಲ್, ತೋಟ, ಪ್ರಾಕೃತಿಕ ಸಂಪತ್ತು ಎಲ್ಲ ಅವರ ತೆಕ್ಕೆಗೆ ಸೇರಿಹೋಗಿ, ನಮ್ಮ ಹಳ್ಳಿಗರು ಅವರ ಹಂಗಿನಲ್ಲಿ ದಾಸಾನುದಾಸರಂತೆ ಜೀವಿಸಬೇಕಾಗುತ್ತದೆ. ಇಡೀ ಪ್ರದೇಶ ವಿದೇಶಿಯರ ಮತ್ತು ನಮ್ಮ ಬಂಡವಾಳಗಾರರ ಮೋಜಿನ ತಾಣವಾಗಿ ಪರಿವರ್ತನೆಗೊಳ್ಳುತ್ತದೆ. ಇಲ್ಲೆಲ್ಲ ಪಂಚತಾರಾ ಹೋಟೆಲುಗಳು ತಲೆಯೆತ್ತಿ ಅವು ನಮ್ಮ ಹೆಣ್ಣುಮಕ್ಕಳ ಬಾಳನ್ನು ಹಾಳುಮಾಡಲು ಹೇಸುವುದಿಲ್ಲ. ನಾವು ಈ ನಮ್ಮ ಹೋರಾಟದ ಮೂಲಕ ಬಹುರಾಷ್ಟ್ರೀಯರ ಮೋಜಿಗಾಗಿ ನಮ್ಮ ಜಮೀನು ಪರಭಾರೆ ಆಗದ ಹಾಗೆ ನೋಡಿಕೊಳ್ಳಬೇಕಲ್ಲದೆ, ಈ ಪ್ರದೇಶ ವಿದೇಶಿಗಳ ವಸಾಹತಾಗುವುದನ್ನು ತಡೆಗಟ್ಟುವುದೂ ನಮ್ಮ ಆದ್ಯ ಕರ್ತವ್ಯ.

ಈ ಹೋರಾಟದಲ್ಲಿ ಕರ್ನಾಟಕ ವಿಮೋಚನಾ ರಂಗದ ಜೊತೆಗೆ ರೈತಸಂಘದವರೂ ಕೈ ಜೋಡಿಸಿದ್ದಾರೆ. ಹಾಗೆಯೇ ದಲಿತ ಮತ್ತು ಮಹಿಳಾ ಚಳುವಳಿ, ಪ್ರಜಾ ಜಾಗೃತಿ ಸಂಘ, ಸಾಮ್ರಾಜ್ಯಶಾಹಿ ವಿರೋಧಿ ಒಕ್ಕೂಟ, ಮೈಸೂರಿನ ಪ್ರಜಾತಾಂತ್ರಿಕ ವೇದಿಕೆ, ಮುಂತಾದ ಹತ್ತಾರು ಜನಪರ ಸಂಘಟನೆಗಳೂ ಈ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿವೆ. ಸರ್ಕಾರದ ಮುಂದೆ ನಾವಿಟ್ಟಿರುವ ಬೇಡಿಕೆಗಳು ಹೀಗಿವೆ :

೧) ಬಡರೈತರನ್ನು ಬೀದಿಪಾಲು ಮಾಡಿ ಐಷಾರಾಮ ಜೀವನ ನಡೆಸುವ ವಿದೇಶಿ ಮೋಜುಗಾರರಿಗಾಗಿ ಕಾರಿಡಾರ್ ರಸ್ತೆ ನಿರ್ಮಾಣ ಮಾಡುವ ಜನದ್ರೋಹಿ ಯೋಜನೆ ಕೈಬಿಡಿ.

೨) ಈಗಿರುವ ಮೈಸೂರು-ಬೆಂಗಳೂರು ರಸ್ತೆಯನ್ನು ವಿಸ್ತರಿಸಿ ಅವುಗಳನ್ನು ೩-೪ ರಸ್ತೆಗಳಾಗಿ ವಿಂಗಡಿಸಿದರೆ, ವಾಹನಗಳ ಸಂಚಾರಕ್ಕೆ ಅನುಕೂಲವಾಗುವುದು. ಅದರಂತೆಯೇ ಬೆಂಗಳೂರು-ಮೈಸೂರು ರೈಲ್ವೆ ಮಾರ್ಗವನ್ನು ದ್ವಿಗುಣಗೊಳಿಸಿ, ವಿದ್ಯುತ್ತನ್ನು ರೈಲುಗಳಿಗೆ ಅಳವಡಿಸಿದರೆ ಪ್ರಯಾಣಿಕರ ಹಾಗೂ ಸರಕುಗಳ ಸಂಚಾರ ಸುಗಮವಾಗುವುದು. ಈಗಾಗಲೇ ರಾಮನಗರದವರೆಗೆ ದ್ವಿಗುಣಗೊಳಿಸುವ ಕೆಲಸ ನಡೆದಿದೆ. ಅದನ್ನೇ ಮೈಸೂರಿನವರೆಗೆ ವಿಸ್ತರಿಸಲು ಹೆಚ್ಚು ಖರ್ಚು ಬರುವುದಿಲ್ಲ.

ಎಚ್. ಎಸ್. ದೊರೆಸ್ವಾಮಿ
ನಂ. ೧೮/ಬಿ, ೭ನೇ ಅಡ್ಡರಸ್ತೆ, ಎನ್. ಆರ್. ಕಾಲೋನಿ
ಬೆಂಗಳೂರು - ೫೬೦ ೦೧೯

ಡಾ॥ ಪ್ರಭಾಕರ ಶಿಶಿಲ



# ಕಾರ್ಣಿಕ

ಈ ಊರಲ್ಲಿ ಇಳಿಯಬೇಕಿದ್ದವರಲ್ಲಿ ಅವನೂ ಒಬ್ಬ. ಅವನನ್ನು ಅಲ್ಲಿಗೆ ಹೊತ್ತು ತಂದ ಬಸ್ಸು ಇಳಿಸಿದ್ದಕ್ಕಿಂತ ಹೆಚ್ಚು ಮಂದಿಯನ್ನು ತುಂಬಿಸಿಕೊಂಡು ಮುಂದಕ್ಕೆ ಓಡಿತು. ಕೆಕ್ಕರಿಸಿ ನೋಡುವ ಕಣ್ಣುಗಳಿಂದ ಬಚಾವಾಗಲು ಅವನು ಎದುರಿಗಿದ್ದ ಹೋಟೆಲಿಗೆ ನುಗ್ಗಿದ.

ಬಿಸಿ ಕಾಫಿ ಅವನಲ್ಲಿ ಹೊಸ ಚೈತನ್ಯವನ್ನು ತುಂಬಿತು. ಹೋಟೆಲಲ್ಲಿ ಪರಿಚಿತ ಮುಖಗಳು ಒಂದೂ ಇರಲಿಲ್ಲ. ಅವನನ್ನೇ ವಿಚಿತ್ರವಾಗಿ ದಿಟ್ಟಿಸುತ್ತಿದ್ದ ಹೋಟೆಲ್ ಭಟ್ಟನಲ್ಲಿ ''ಪಶುಪತಿ ದೇವಸ್ಥಾನಕ್ಕೆ ಹೋಗಬೇಕಿತ್ತು, ಯಾರಾದ್ರೂ ದಾರಿ ತೋರ್ಸೋರು ಸಿಗ್ತಾರಾ ?'' ಎಂದು ಕೇಳಿದ.

ಹೋಟೆಲು ಭಟ್ಟ ತನ್ನ ಅರೆನಗ್ನ ಮೈಯಲ್ಲಿ ಇಳಿಬಿದ್ದಿದ್ದ ಜನಿವಾರದಿಂದ ಬೆವರೊರೆಸಿ ಕೊಳ್ಳುತ್ತಾ ಹಲ್ಕಿರಿದ. ''ನಾನು ಅಂದ್ಕೊಂಡೆ ನೀವು ಅಲ್ಲಿಗೇ ಬಂದವರೂಂತ. ಎರಡು ದಿನಗಳ ಹಿಂದೆ ಎಂದಾಗಿದ್ರೆ ಹೋಗೋಕೆ ಆಗ್ತಿರ್ಲಿಲ್ಲ. ಇಡೀ ಊರಲ್ಲಿ ಪೊಲೀಸರದ್ದೆ ಕಾರ್ಬಾರು. ಊರಿಡೀ ಬಂದ್ ಆಗಿತ್ತು. ಆದ್ರೆ ಪೊಲೀಸ್ರು ನನ್ನ ಹೋಟ್ಲು ಬಲಾತ್ಕಾರವಾಗಿ ತೆರ್ಸಿ ಒಂದು ವಾರ ಸಖತ್ತಾಗಿ ತಿಂದ್ರು. ಬಾಟಾ ಸಿಕ್ಕಾಗ ಅಕೌಂಟು ಕ್ಲೋಸ್ ಮಾಡ್ತೀನೀಂತ ಎಸ್ಸೈ ಹೇಳ್ದ. ಈಗೇನೂ ತೊಂದ್ರೆ ಇಲ್ಲ ಬಿಡಿ. ಅಂದ ಹಾಗೆ ನಿಮ್ದು ಯಾವೂರು ?'' ಎಂದು ಕೇಳಿದ.

ಆತ ಹೇಳಿದ. ಹೋಟೆಲು ಭಟ್ಟ ಮೊರದಗಲ ಮುಖ ಮಾಡಿದ. ''ನಾನು ಅಂದ್ಕೊಂಡೆ. ನೀವು ನಮ್ಮ ಪೈಕಿಯೇ ಇರ್ಬೇಕೂಂತ. ಒಳ್ಳೇದೇ ಆಯ್ತು ಬಿಡಿ. ಅಬ್ಬಾ ! ಇಲ್ಲಿ ಇದ್ದಾವಲ್ಲಾ ಶೂದ್ರ ಮುಂಡೇವು. ಮಡಿ, ಮೈಲಿಗೆ ಒಂದೂ ಇಲ್ಲ. ಬ್ರಹ್ಮಕಲ್ಶಕ್ಕೆ ಹಣ ಕೊಟ್ಟದ್ದಕ್ಕೆ ಬ್ರೇಮಿನ್ಸ್‌ಗೂ ಇವಕ್ಕೂ ಒಟ್ಟಿಗೇ ಪ್ರಸಾದ ಕೊಡ್ಬೇಕಂತೆ. ಒಂದೇ ಪಂಕ್ತಿಯಲ್ಲಿ ಊಟ ಹಾಕ್ಬೇಕಂತೆ. ಹಂಗೆ ಮಾಡೋಕ್ಕೆ ದೇವಸ್ಥಾನ ಏನು ಹೋಟ್ಲು ಕೆಟ್ಟು ಹೋಯ್ತೆ? ನಾವು ಬಿಡ್ತೀವಾ ? ದೊಡ್ಡ ಹೊಡ್ದಾಟ ನಡೆದೋಯ್ತು. ಪೊಲೀಸ್ ಬಂತು. ನಮ್ಮೇಲೆ ಜಾತಿ ನಿಂದ್ನೆ ಕೇಸು ಜಡಿದ್ರು. ಊರು ಬಂದ್ ಆಗಿದ್ದಾಗ ಇಲ್ಲೇ ತಿಂದ್ರಲ್ಲಾ ಪೊಲೀಸ್ರು, ಅದ್ಕೆ ನನ್ನನ್ನು ಲೀಸ್ಟಿಂದ ಬಿಟ್‌ಬಿಟ್ರು. ಈಗ್ನೋಡಿ ಇಷ್ಟೆಲ್ಲಾ ಆದ್ಮೇಲೆ ಅರ್ಚಕ್ರು ಒಟ್ಗೆ ಊಟಾ ಹಾಕೋದ್ರಲ್ಲಿ ತಪ್ಪಿಲ್ಲಾ ಅನ್ತಿದ್ದಾರಂತೆ. ಹಿಂಗಾದ್ರೆ ಧರ್ಮ ಉಳಿಯೋದು ಹ್ಯಂಗೆ ?''

ಅವನು ನಸುನಕ್ಕ. ''ನಿಮ್ಗೆ ಬಿಡುವಿದ್ರೆ ನೀವೇ ಯಾಕ್ ಬರ್ಬಾರ್ದು ನನ್‌ಜತೆ ?'' ಹೋಟೆಲು ಭಟ್ಟ ಜನಿವಾರದಿಂದ ಮತ್ತೊಮ್ಮೆ ಬೆನ್ನು ತುರಿಸಿಕೊಳ್ಳುತ್ತಾ ತಲೆಯಾಡಿಸಿದ. ''ನೀವು ನಮ್ಮವ್ರೇ ಅಂದ್ಮೇಲೆ ಈ ಗುರ್ತು ಪರಿಚಯ ಇಲ್ದೇ ಇರೋ ಊರಲ್ಲಿ ಒಬ್ಬನ್ನೇ ಬಿಟ್ರೆ ಆ ಪಶುಪತಿ ಮೆಚ್ತಾನಾ ?'' ಎಂದವನೇ ಒಳನೋಡಿ ''ಏ.. ಇವ್ಳೇ.. ಸ್ವಲ್ಪ ನೋಡ್ಕೊಂಡಿರು. ಈಗ ಬಂದ್ಬಿಟ್ಟೆ'' ಎಂದು ಗಲ್ಲಾದ ಮೇಲಿದ್ದ ಕೇಸರಿ ಬೈರಾಸನ್ನು ಹೆಗಲಿಗೇರಿಸಿ ಕೊಂಡು ಚಪ್ಪಲಿ ಸಿಕ್ಕಿಸಿದ. ''ಅವ್ಳು ನೋಡ್ಕೋತಾಳೆ'' ಎನ್ನುತ್ತಾ ಅವನನ್ನು ಹೊರಡಿಸಿದ. ಅವನು ಬ್ಯಾಗನ್ನು ಬೆನ್ನಿಗೇರಿಸಿ ಹೋಟೆಲು ಭಟ್ಟನನ್ನು ಹಿಂಬಾಲಿಸಿ ನಡೆದ.

ಒಳಹಾದಿ ಕ್ರಮಿಸುವಾಗ ಅವನು ಊರನ್ನು ವೀಕ್ಷಿಸಿದ. ಪೇಟೆ ತೀರಾ ಸಣ್ಣದು. ಊರಾಚೆ ಮೈದಾನ. ಅದರ ತುದಿಯಲ್ಲಿ ಎಡಭಾಗಕ್ಕೆ ಗುಡ್ಡ. ಅದರ ಮೇಲೆ ಬಲುದೂರಕ್ಕೇ ಕಾಣುವ ದೇವಸ್ಥಾನ. ಹೋಟೆಲು ಭಟ್ಟ ಅವನನ್ನು ಮಾತಿಗೆಳೆದ. ''ನಿಮ್ಮ ಹಾಗೆ ಎಷ್ಟೋ ಪತ್ರಿಕೆಯೋರು ಇಲ್ಲಿಗೆ ಬರ್ತಿರ್ತಾರೆ. ದೇವಸ್ಥಾನದ ಬಗ್ಗೆ, ಬ್ರೇಮಿನ್ಸ್ ಬಗ್ಗೆ ಅದೇನೇನೋ ಬರ್ದುಹಾಕ್ತಾರೆ. ಅದ್ಕೇ ಅರ್ಚಕ್ರು ರಿಪೋರ್ಟರ್ನ ಹತ್ರಕ್ಕೆ ಸೇರ್ಸಲ್ಲ. ನೀವು ನಮ್ಮೋರೆ ಅದ್ರಿಂದ ಎಲ್ಲಾ ನಾನು ನೋಡ್ಕೋತೀನಿ.''

ಹೋಟೆಲು ಭಟ್ಟನ ಮಾತಿಗೆ ಅವನು ನಕ್ಕ. ''ನಾನು ರಿಪೋರ್ಟರ್ ಅಲ್ಲ. ದೇವಸ್ಥಾನಗಳ ಬಗ್ಗೆ ರೀಸರ್ಚ್ ಮಾಡ್ತಿದ್ದೀನಿ. ನೀವೇನೂ ಹೆದರ್ಕೋಬೇಕಿಲ್ಲ.''

ಹೋಟೆಲು ಭಟ್ಟ ಒಂದು ಕ್ಷಣ ನಿಂತ. ''ದೇವಸ್ಥಾನದ ಬಗ್ಗೆ ರೀಸರ್ಚ ? ಮೂರ್ತಿ ಮತ್ತೆ ಅರ್ಚಕ್ರು ಬಿಟ್ರೆ ಅಲ್ಲೇನಿದೆ ರೀಸರ್ಚು ಮಾಡೋದಿಕ್ಕೆ ?''

ಅವನು ನಗುತ್ತಾ ''ಹೆಂಗೂ ಹೋಗ್ತೀವಲ್ಲಾ ? ತೋರಿಸ್ತೀನಿ ನಡೀರಿ'' ಅಂದ. ಮೈದಾನದ ತುದಿ ತಲುಪಿದಾಗ ಹೋಟೆಲು ಭಟ್ಟ ''ನಿಮ್ಗೆ ವಂದಾ ಬರೋದಿದ್ರೆ ಇಲ್ಲೇ ಮುಗಿಸ್ಕಳ್ಳಿ. ಗುಡ್ಡದ ಮೇಲೆ ಅದಕ್ಕೆ ವ್ಯವಸ್ಥೆಯಿಲ್ಲ. ಅಲ್ಲಿ ದೇವಸ್ಥಾನ ಬಿಟ್ರೆ ಇರೋದು ಅರ್ಚಕ್ರ ಮನೆ ಮಾತ್ರ'' ಅಂದವನೇ ಬಟ್ಟೆ ಎತ್ತಿ, ಜನಿವಾರ ಕಿವಿಗೆ ಸಿಕ್ಕಿಸಿ ಕೂತ. ಗುಡುಗಿನಂತಹ ಎರಡು ಶಬ್ದ ಹೊರಡಿಸಿ ''ನನ್ನ ಅಡುಗೆ ನಾನೇ ತಿಂದು ಗ್ಯಾಸು ಶುರುವಾಗಿದೆ'' ಎಂದು ಹಲ್ಕಿರಿದ.

ವಂದಾ ಮುಗಿಸಿ ಗುಡ್ಡ ಹತ್ತುತ್ತಿದ್ದಂತೆ ಹೋಟೆಲು ಭಟ್ಟ ಹೇಳಿದ: ''ಇದನ್ನ ತಿಮ್ಮನ ಗುಡ್ಡೆ ಅಂತಾ ಕರೀತಾರೆ.''

ಅವನ ಕಿವಿಗಳು ಚುರುಕಾದವು. ಎಲ್ಲಿಯ ಪಶುಪತಿ, ಎಲ್ಲಿಯ ತಿಮ್ಮ? ಅವನು ಕುತೂಹಲದಿಂದ ಕೇಳಿದ. ''ಯಾಕಂತ ನಿಮ್ಗೊತ್ತಾ ?'' ಹೋಟೆಲು ಭಟ್ಟ ವಿವರಿಸುತ್ತಾ ಹೋದ. ''ಇಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತೆ. ಜಾತ್ರೆಗೆ ಹತ್ತು ದಿನಕ್ಕೆ ಮೊದ್ಲೇ ಧ್ವಜಾ ಏರಿಸ್ತಾರೆ. ಇಲ್ಲಿನ ಧ್ವಜಕಂಬ ಬಾಳಾ ಎತ್ರದ್ದು. ಒಂದ್ವರ್ಷ ಧ್ವಜಾ ಏರ್ಸೋವಾಗ ಹಗ್ಗ ಸಿಕ್ಕಾಕೊಂಬಿಡ್ತು. ಧ್ವಜ ಮೇಲೇರ್ಲೆ ಇಲ್ಲ. ಸೇರಿದ್ದ ಜನಾ ಅಪಸಕ್ನ ಆಯ್ತೂಂತ ಆಡ್ಕೊಂಡ್ರು. ಅಷ್ಟೆತ್ರದ ಕಂಬಕ್ಕೆ ಹತ್ತಿ ಹಗ್ಗ ಸರಿ ಮಾಡೋ ಧೈರ್ಯ ಯಾರ್ಗೂ ಬರ್ಲಿಲ್ಲ. ಆಗ ಧೈರ್ಯ ಮಾಡ್ದೋನು ದೇವಸ್ಥಾನದ ಕಾವಲುಗಾರ ತಿಮ್ಮ.''

''ಓ ! ಅದ್ಕೇ ಇದು ತಿಮ್ಮನ ಗುಡ್ಡ ಆಗೋಯ್ತಾ ?''

''ಪೂರ್ತಿ ಕೇಳಿ. ತಿಮ್ಮ ಅಷ್ಟೆತ್ರದ ಕಂಬಕ್ಕೆ ಹತ್ತಿ ಹಗ್ಗ ಬಿಡಿಸೋವಾಗ, ಯಾವ ಕಾಲದ್ದೋ ಆ ಮರದ ಕಂಬ ಲಟಾರ ಮುರಿದೋಯ್ತು. ಆಯತಪ್ಪಿ ತಿಮ್ಮ ಬಿದ್ಬಿಟ್ಟ. ಧ್ವಜಕಂಬದ ಎದ್ರು ಬಲಿ ಕಲ್ಲೂಂತ ಇದ್ಯೆಲ್ಲಾ ? ಅದ್ಕೆ ತಲೆ ಬಡ್ದು ಕಲ್ಲಿಗೆ ಕಾಯಿ ಒಡೀತಾರಲ್ಲಾ... ಹಾಗೆ ಚೂರು ಚೂರು ಆಗೋಯ್ತು.''

ಹೋಟೆಲು ಭಟ್ಟ ಮುಖ ಕಿವುಚಿಕೊಂಡ. ಅವನೂ ಒಂದು ಕ್ಷಣ ವಿಷಾದದ ಮೌನದಲ್ಲಿದ್ದ. ಮತ್ತೆ ನಿಧಾನವಾಗಿ ಕೇಳಿದ : ''ಇದೆಲ್ಲಾ ನೀವು ನೋಡಿದ್ದಾ ?''

''ಅಯ್ಯೋ ಎಲ್ಬಂತು ? ಇದು ಯಾರೋ ಹೇಳಿದ ಕತೆ. ಎಷ್ಟು ವರ್ಷ ಹಿಂದ್ಲಿದ್ದೋ ? ಆ ವರ್ಷ ಜಾತ್ರೆ ನಿಂತು ಹೋಯ್ತಂತೆ. ಕೇರಳದಿಂದ ಅದ್ಯಾರೋ ಮಲೆಯಾಳಿಗಳನ್ನು ಕರ್ಸಿ ಅಷ್ಟಮಂಗ್ಲ ಪ್ರಶ್ನೆ ಇಟ್ರಂತೆ. ದೇವಸ್ಥಾನಕ್ಕೆ ಮೈಲಿಗೆ ಆಗಿದೆ ಅಂತ ಅದ್ರಲ್ಲಿ ಕಂಡುಬಂತಂತೆ. ಆಮೇಲೆ ಕಲ್ಲಿನ್ ಕಂಬಾ ಮಾಡ್ಸಿ ಬ್ರಹ್ಮಕಲ್ಶಾ ನಡ್ಸಿ ಬ್ರೇಮಿನ್ಸ್‌ಗೆ ಗೋದಾನ, ಸುವರ್ಣದಾನ, ವಸ್ತ್ರದಾನ ಮತ್ತು ಅನ್ನದಾನ ಕೊಟ್ಮೇಲೆ ಎಲ್ಲಾ ಸರಿಯಾಯ್ತಂತೆ. ಇಷ್ಟೆಲ್ಲ ಮಾಡ್ಸಿದ್ದು ಬ್ರೇಮಿನ್ಸೆ ಆದ್ರೆ, ಹೀರೋ ಆಗಿದ್ದು ಆ ಶೂದ್ರ ಮುಂಡೇದು ತಿಮ್ಮ ! ಅಲ್ಲೀವರ್ಗೆ ಪಶುಪತಿ ಪರ್ವತ ಅಂತಿದ್ದದ್ದು ಜನ್ರ ಬಾಯಲ್ಲಿ ತಿಮ್ಮನ ಗುಡ್ಡ ಆಗೋಯ್ತು.''

ಹೋಟೆಲು ಭಟ್ಟ ಇನ್ನೊಮ್ಮೆ ಮುಖ ಕಿವುಚಿದ.

''ಒಳ್ಳೇ ಹೆಸ್ರು.. ಹಂಗಾದ್ರೂ ತಿಮ್ಮ ಉಳ್ಕೊಂಡ್ನಲ್ಲಾ ?''

''ಇಲ್ಲಿನ ಬ್ರೇಮಿನ್ಸು ಒಂದಾಗಿರ್ತಿದ್ರೆ ಅದೂ ಹೋಗ್ಬಿಡ್ತಿತ್ತು. ಇಟ್ಟಿಗೆ ಮತ್ತು ಪಾದುಕೆ ರಥಯಾತ್ರೆ ಬಂದಿತ್ತಲ್ಲಾ ? ಆವಾಗ ನಾವು ಕೆಲವು ಬ್ರೇಮಿನ್ಸು ಧರ್ಮ ಸಂರಕ್ಷಣಾ ಸೇನೆ ರಚಿಸ್ಕೊಂಡು ಶೂದ್ರ ಮುಂಡೇವನ್ನು ಮುಂದಿಟ್ಟುಕೊಂಡು ಧರ್ಮ ಜಾಗೃತಿಗೆ ಹೊರಟ್ವಿ. ತಿಮ್ಮನ ಗುಡ್ಡೆಗೆ ವಿಷ್ಣು ಗಿರಿ ಅಂತ ಹೆಸ್ರು ಬದ್ಲಾಯಿಸೋ ನಿರ್ಣಯ ತಗೊಂಡು ರಂಗಕ್ಕಿಳಿದ್ವಿ. ಆದ್ರೆ ಇಲ್ಲಿ ತಿಮ್ಮನ ಜಾತಿಯವ್ರದ್ದೇ ಮೆಜಾರಿಟಿ. ಮೇಲಾಗಿ ಅರ್ಚಕ್ರು ವಿಷ್ಣುವಿನ ಹೆಸರಿಡೋದಕ್ಕೆ ಬಿಲ್‌ಕುಲ್ ಒಪ್ಲಿಲ್ಲ. ಆಗ ದೊಡ್ಡ ಗಲಾಟೆಯಾಯ್ತು. ಸೆಂಟ್ರಲ್ ರಿಸರ್ವ್ ಬಂದು ಟಿಯರ್‌ಗ್ಯಾಸು ಬಿಟ್ರು. ಒಂದು ವಾರ ಇಲ್ಲೇ ಝಂಡಾ ಹೊಡೆದ್ರು. ಊರ ಹಿರೀರೆಲ್ಲಾ ಸೇರಿ ಶಾಂತಿ ಸಭೆ ನಡೆಸಿದ್ರು. ಎಮ್ಮೆ ಒದಿರೋ

ಮಿಂಡ್ರುಗುಟ್ಟಿದೋನೊಬ್ಬ ಸಭೇಲಿ ಮಾತಾಡಿ ''ಸ್ಥಳನಾಮಕ್ಕೊಂದು ಇತಿಹಾಸ ಇರುತ್ತೆ. ಆದ್ರಿಂದ ಸ್ಥಳನಾಮ ಬದ್ಲಿಸ್ಲೋದು ತಪ್ಪು'' ಅಂತ ಆಧಾರ ಇಟ್ಕೊಂಡು ಮಾತಾಡ್ದ. ನಮ್ಮ ಮಾತು ಬಿದ್ದೋಯ್ತು. ತಿಮ್ಮನಗುಡ್ಡ ಅನ್ನೋ ಹೆಸ್ರೇ ಉಳ್ಕೊಂಬಿಡ್ತು. ಅದ್ಕೇ ನಾವು ಮೊನ್ನೆ ಬ್ರಹ್ಮಕಲ್ಶಾ ಮಾಡ್ಸೋವಾಗ ಆ ಎಮ್ಮೆ ಒದ್ದ ಶೂದ್ರ ಮುಂಡೇದನ್ನು ದೂರವೇ ಇಟ್ವಿ.''

ಮಾತಾಡುತ್ತಾ ಅವರು ದೇವಸ್ಥಾನದ ಅಂಗಣಕ್ಕೆ ಬಂದು ಮುಟ್ಟಿದರು. ಅಲ್ಲಿಂದ ಇಡೀ ಊರು ಕಾಣುತ್ತಿತ್ತು. ಬೆಂಕಿಪೊಟ್ಟಣದ ಹಾಗೆ ಮನೆಗಳು. ಇರುವೆಗಳ ಹಾಗೆ ಮನುಷ್ಯರು. ಊರನ್ನು ತಬ್ಬಿಕೊಂಡಿರುವ ಹಸಿರು. ಊರಾಚೆ ವಿಶಾಲವಾದ ಕೆರೆ. ಅದಕ್ಕೂ ಆಚೆ ಚಚ್ಚೌಕಾರದ ಹೊಲಗಳು.

ಅಂಗಣ ವಿಶಾಲವಾಗಿತ್ತು. ಬಲಬದಿಯಲ್ಲೊಂದು ಕಾಂಕ್ರೀಟಿನ ಉದ್ದನೆಯ ಹಾಲು. ಎಡಬದಿಯಲ್ಲಿ ಅಡಿಕೆ ಮರದಿಂದ ಮಾಡಿದ ಚಪ್ಪರ. ''ಆ ಹಾಲು ಬ್ರೇಮಿನ್ಸ್‌ಗೆ. ಈ ಚಪ್ರಾ ಶೂದ್ರ ಮುಂಡೇವಕ್ಕೆ. ಬಾರೀ ಕಾರ್ಣಿಕದ ದೇವಸ್ಥಾನ ಇದು. ಹಂಗಾಗಿ ಹರಿಜನ ಹತ್ರಕ್ಕೂ ಬರೋ ಹಂಗಿಲ್ಲ. ದೇವಸ್ಥಾನದ ಆಸ್ತಿಯನ್ನು ಡಿಕ್ಲರೇಷನ್‌ನಲ್ಲಿ ತಮ್ಮದಾಗಿಸಿಕೊಂಡಿರೋರೆಲ್ಲಾ ಒಟ್ಟಾಗಿ ಜಾತ್ರೆ ದಿನ ಮಧ್ಯಾಹ್ನ ಇಡೀ ಊರಿಗೆ ಊಟ ಹಾಕಿಸ್ತಾರೆ. ಮೊದಲು ಬ್ರೇಮಿನ್ಸ್‌ಗೆ ದೇವಸ್ಥಾನದ ಒಳಗಡೆ. ಆಮ್ಯಾಕೆ ಶೂದ್ರ ಮುಂಡೇವಕ್ಕೆ ಅಂಗಣದಲ್ಲಿ. ಉಳಿದಿರೋದ್ದನ್ನೆಲ್ಲಾ ಹರಿಜನರಿಗೆ ಕೊನೆಗೆ ಕೊಟ್ಟುಬಿಡ್ತೀವಿ. ಅಷ್ಟೊಂದು ನಿಯತ್ತು ಉಳಿಸ್ಕೊಂಡಿರೋದಿಕ್ಕೆ ದೇವಸ್ಥಾನದ ಕಾರ್ಣಿಕ ಉಳ್ಕೊಂಡಿದೆ.''

ಹೋಟೆಲು ಭಟ್ಟ ಹೇಳಿದ್ದಕ್ಕೆಲ್ಲಾ ಅವನು ಹೂಂಗುಟ್ಟುತ್ತಿದ್ದ. ಪ್ರವೇಶ ದ್ವಾರದ ಬಳಿ ಬಂದಾಗ ಅವನ ದೃಷ್ಟಿ ಧ್ವಜಕಂಬದತ್ತ ಹರಿಯಿತು. ಅಷ್ಟೆತ್ತರದಿಂದ ಬಿದ್ದು ಬಲಿಕಲ್ಲಿಗೆ ತಲೆಯನ್ನು ತೆಂಗಿನಕಾಯಿಯಾಗಿಸಿದ ತಿಮ್ಮನ ನೆನಪಾಗಿ ಕಸಿವಿಸಿಯಾಯಿತು. ವಿಷಾದಭಾವದಿಂದ ದೇವಾಲಯದ ಒಳಹೊಕ್ಕು ಪ್ರವೇಶ ಗೋಪುರದ ಮೇಲ್ಭಾಗದತ್ತ ದೃಷ್ಟಿ ಹಾಯಿಸಿದ. ಎತ್ತರದ ಆ ಭಾಗದಲ್ಲಿ ಅವನಿಗೆ ಬೇಕಾದದ್ದು ಕಣ್ಣಿಗೆ ಬಿತ್ತು. ಬೆನ್ನಿನ ಬ್ಯಾಗನ್ನು ಕೆಳಕ್ಕಿಳಿಸಿ ಕ್ಯಾಮರಾ ಹೊರತೆಗೆದು ಫೋಟೋ ಹೊಡಿಯತೊಡಗಿದ.

ಇದನ್ನು ನೋಡಿದ ಹೋಟೆಲು ಭಟ್ಟ ''ಅಲ್ಲೇನಿದೇಂತ ಫೋಟೋ ತೆಗೀತೀರಿ. ದೇವ್ರು ಇರೋದು ಇಲ್ಲಿ'' ಎಂದು ಗರ್ಭಗುಡಿಯತ್ತ ಕೈ ತೋರಿಸಿದ.

ಅವನು ''ನೀವು ಇವುಗಳನ್ನು ನೋಡಿದ್ದೀರಾ ?'' ಎಂದು ಅಲ್ಲಿದ್ದ ಶಿಲ್ಪಗಳನ್ನು ತೋರಿಸಿದ. ಭಟ್ಟನಿಗೆ ಮೊದಲಿಗೆ ಏನೊಂದೂ ಗೊತ್ತಾಗಲಿಲ್ಲ. ಗೊತ್ತಾದ ಮೇಲೆ ಕಣ್ಣರಳಿಸಿ ನೋಡಿದ. ಅವು ಮಿಥುನ ಶಿಲ್ಪಗಳು ! ಹೋಟೆಲು ಭಟ್ಟ ನೋಡುತ್ತಾ ನಿಂತುಬಿಟ್ಟ. ''ಬಾಳ ಚೆನ್ನಾಗಿವೆ.... ಆದ್ರೆ ಇಂಥವೂ ದೇವಸ್ಥಾನಗಳಲ್ಲಿರ್ತವಾ ? ಈ ಊರಿಗೆ ನಾನು ಬಂದು ಇಪ್ಪತ್ತು ವರ್ಷ ಆಗೋಯ್ತು. ವಾರಕ್ಕೊಮ್ಮೆ ಇಲ್ಲಿಗೆ ಬರ್ತಿರ್ತೀನಿ. ಒಮ್ಮೆಯೂ ನನ್ನ ಕಣ್ಣಿಗೆ ಬೀಳ್ಲಿಲ್ಲಲ್ಲಾ ? ಸಖತ್ತಾಗಿವೆ... ಸಖತ್ತಾಗಿವೆ'' ಎಂದು ಆನಂದಿಸಿದ.

ಅವರಿಬ್ಬರ ಮಾತು ಕೇಳಿ ದೂರದಲ್ಲಿದ್ದ ಅರ್ಚಕರು ಅವರ ಹತ್ತಿರ ಬಂದರು. ದೇವಾಲಯಗಳಲ್ಲಿರುವ ಮಿಥುನ ಶಿಲ್ಪಗಳ ಬಗ್ಗೆ ಸಂಶೋಧನೆ ನಡೆಸುತ್ತಿದ್ದ ಅವನ ವಿಷಯ ತಿಳಿದು ಸಂತೋಷಪಟ್ಟರು. ಅರ್ಚಕರ ಒಂದು ಫೋಟೋ ತೆಗೆದಾಗ ಅವರು ಖುಷಿಯಿಂದ ಜನಿವಾರ ನೀವಿಕೊಂಡರು. ಹೋಟೆಲು ಭಟ್ಟ ಅಡ್ಡಬಿದ್ದು ಪ್ರಸಾದ ತೆಗೆದುಕೊಳ್ಳುವಾಗ ಆತ ಇನ್ನೊಂದು ಫೋಟೋ ಹೊಡೆದ. ಹೋಟೇಲು ಭಟ್ಟ ಹಲ್ಕಿರಿಯುತ್ತಾ ನಿಂತುಕೊಂಡ.

ಒಳಭಾಗದ ಕಲ್ಲು ಹಾಸಿನ ಮೇಲೆ ಮೂವರೂ ಕೂತರು. ಅರ್ಚಕರಿಗೆ ದೇವಸ್ಥಾನದ ಇತಿಹಾಸ ತಿಳಿದಿರಲಿಲ್ಲ. ಸ್ಥಳ ಪುರಾಣವನ್ನು ವಿವರಿಸುತ್ತಾ ಹೋದರು. ''ಇಷ್ಟಕ್ಕೂ ಇತಿಹಾಸದ ದಾಖಲೆಗಳನ್ನು ಯಾರು ಇಟ್ಕೋತಾರೆ ? ದೇವಸ್ಥಾನಗಳಿಗೆ ಇರುವುದು ಐತಿಹ್ಯ ಮಾತ್ರ ಅಲ್ವಾ ?'' ಎಂದರು.

''ಅದೂ ಹೌದನ್ನಿ. ಮೊನ್ನೆ ಮೊನ್ನೆ ಶೂದ್ರರು ಮತ್ತು ಹರಿಜನರು ಸಹಪಂಕ್ತಿ ಭೋಜನಕ್ಕೆ ಒತ್ತಾಯಿಸಿದಾಗ ಎಲ್ಲಾ ಬ್ರೇಮಿನ್ಸ್‌ಗಳ ವಿರೋಧ ಇದ್ರೂ ನೀವು ಸಪೋರ್ಟು ಮಾಡಿದ್ರಂತೆ. ಈ ಗುಡ್ಡೆಯ ಹೆಸ್ರು ಬದ್ಲಾವಣೆಗೆ ಮುಖ್ಯ ವಿರೋಧ ನಿಮ್ದೇ ಅಂತೆ. ನಿಮ್ಮ ಧೋರಣೆ ನಂಗಿಷ್ಟವಾಯ್ತು. ಅದ್ರ ಕಾರಣ ಕೇಳ್ಬೋದಲ್ಲಾ ?''

ಅರ್ಚಕರು ಹೋಟೆಲು ಭಟ್ಟನನ್ನೊಮ್ಮೆ ನೋಡಿದರು. ''ಅದು ನಿಮ್ಗೂ ಗೊತ್ತಾಯ್ತು ಅನ್ನಿ. ನಮ್ಮ ಹಿರಿಯರ್ದು ಶೈವ ಸಂಪ್ರದಾಯ. ಅದ್ಕೆ ವೈಷ್ಣವ ಹೆಸ್ರನ್ನ ನಾನು ವಿರೋಧಿಸಿದ್ದೂಂತ ಜನ ಆಡ್ಕೋತಿದ್ದಾರೆ. ಮೂಲತಃ ನಮ್ಮದು ಮಾಧ್ವ ಸಂಪ್ರದಾಯವಂತೆ. ನನ್ನ ವಿರೋಧಕ್ಕೆ ಬೇರೆಯೇ ಕಾರಣಗಳಿವೆ. ಅವೆಲ್ಲಾ ಈಗ ಯಾಕೆ ಬಿಡಿ.''

''ಕುತೂಹಲಕ್ಕೆ ಕೇಳ್ದೆ. ಅಲ್ಲದೆ ನಿಮ್ಮ ಉತ್ತರ ನನ್ನ ರೀಸರ್ಚಿಗೆ ಹೆಲ್ಪು ಆಗ್ಬೋದೂಂತ ಕೇಳ್ದೆ. ಅರ್ಚಕರಾದ್ರೂ ನಿಮ್ಮ ಧೋರಣೆ ಜನಪರವಾಗಿರೋದು ನಂಗಿಷ್ಟವಾಯ್ತು'' ಅಂದ. ಹೋಟೆಲು ಭಟ್ಟ ಮುಖ ಹುಳ್ಳಗೆ ಮಾಡಿದ.

ಅರ್ಚಕರು ನಕ್ಕರು. ''ನಿಮ್ಮ ಧೋರಣೆಯೂ ಅಷ್ಟೆ. ದೇವಸ್ಥಾನಕ್ಕೆ ಬಂದ್ರೂ ನೀವು ನೋಡಿದ್ದು ಆ ಶಿಲ್ಪಗಳನ್ನು ! ನೀವು ಅಡ್ಡ ಬೀಳಲಿಲ್ಲ ; ಪ್ರಸಾದ ತಗೊಳ್ಲಿಲ್ಲ. ನಂಬಿಕೆ ಇಲ್ದಿದ್ರೂ ದೇವಸ್ಥಾನದ ಬಗ್ಗೆ ರೀಸರ್ಚಿಗೆ ಹೊರಟಿದ್ದೀರಲ್ಲಾ ? ಇದಕ್ಕೆ ನಾನೇನೆನ್ನಬೇಕು ?''

ಈಗ ಅವನೂ ನಕ್ಕ. ''ನಾನು ನಂಬಿಕೆಗಿಂತ ವಾಸ್ತವಕ್ಕೆ ಬೆಲೆ ಕೊಡೋನು. ದೇವಸ್ಥಾನದಲ್ಲೂ ಜಾತಿ ಭೇದ ಅಂದ್ರೆ ಏನರ್ಥ ? ಬ್ರೇಮಿನ್ಸು, ಶೂದ್ರರು, ಏಕೇಸು ಎಲ್ಲಾ ಒಟ್ಟಾಗಿ ಕೂತು ಕೊನೆಪಕ್ಷ ಊಟ ಮಾಡೋದಿಕ್ಕು ಆಗ್ದೆ ಇದ್ರೆ ದೇವ್ರು, ದೇವಸ್ಥಾನ ಇದ್ದೇನು ಸುಖ ? ಆದ್ರೆ ಶಿಲ್ಪಕಲೆಗಳಿರೋ ದೇವಸ್ಥಾನ ಇತಿಹಾಸದ ದೃಷ್ಟಿಯಿಂದ ನನಗೆ ಮುಖ್ಯವಾಗುತ್ತೆ. ಅಷ್ಟೇ ದೇವಸ್ಥಾನಗಳ ಮತ್ತು ನನ್ನ ಸಂಬಂಧ.''

ಅರ್ಚಕರು ಅವನನ್ನೇ ದಿಟ್ಟಿಸಿದರು. ''ಸಾಮಾನ್ಯವಾಗಿ ಬ್ರೇಮಿನ್ಸು ನಿಮ್ಹಂಗೆ ಮಾತಾಡಲ್ಲ, ಪುಗಸಟ್ಟೆ ಸಿಗೋ ಮರ್ಯಾದೆ, ಹಣ ಯಾರು ಬಿಡ್ತಾರೆ ? ನೀವು....'' ಅವರ ಮಾತನ್ನು ತುಂಡರಿಸಿ ಹೋಟೆಲು ಭಟ್ಟನೆಂದ : ''ನಮ್ಮ ಊರವ್ರು. ನಮ್ಮವ್ರೇ, ಆದ್ರೆ ಇವ್ರು ಹೇಳೋದಿಕ್ಕೆಲ್ಲಾ ನಾನು ಸಪೋರ್ಟು ಮಾಡಲ್ಲ.''

ಅರ್ಚಕರ ಮುಖದಲ್ಲಿ ನಗು ಲಾಸ್ಯವಾಡಿತು. ''ಇವ್ರನ್ನೋದೂ ಸರೀನೇ. ಇಲ್ಲಿಗೆ ಬರೋ ಜನ್ರನ್ನ ನೋಡಿದ್ರೆ ನಂಗೆ ಅಯ್ಯೋ ಅನ್ಸುತ್ತೆ. ಎಲ್ಲಾ ಆಚಾರ ಮಾತ್ರ. ವಿಚಾರಾನೇ ಇಲ್ದ ಆಚಾರಕ್ಕೆ ಏನು ಅರ್ಥವಿದೆ ಅಲ್ವಾ ?''

ಅವನು ತಲೆದೂಗಿದ. ''ನನ್ನ ರೀಸರ್ಚಿಗೆ ನಿಮ್ಮ ಸಹಾಯ ಬೇಕು. ದೇವಸ್ಥಾನದ ಇತಿಹಾಸ ಎಲ್ಲಿ ಸಿಗತ್ತೆ ಹೇಳಿ ?''

''ನಂಗದು ತಿಳೀದು. ತಂದೆಗೆ ಗೊತ್ತಿರ್ಲೂಬಹುದು. ಗುಡ್ಡದ ಹೆಸರು ಬದಲಾವಣೆಯನ್ನು ವಿರೋಧಿಸಲು ಹೇಳಿಕೊಟ್ಟದ್ದು ಅವ್ರೆ. ಲಕ್ವಾ ಹೊಡ್ದು ಮನೇಲಿದಾರೆ. ನಿಮ್ಗೆ ಮಾತಾಡಿಸ್ಬೇಕೂಂತಿದ್ರೆ ಹೋಗೋಣ.''

ಹೋಟೆಲು ಭಟ್ಟ ಚಡಪಡಿಸತೊಡಗಿದ. ''ಇದೆಲ್ಲಾ ತುಂಬಾ ಹೊತ್ತಾದೀತಲ್ಲಾ? ಹೋಟ್ಳಲ್ಲಿ ಅವಳೊಬ್ಳೆ. ನೀವು ನಿಧಾನವಾಗಿ ಬನ್ನಿ'' ಎಂದು ಇನ್ನೊಮ್ಮೆ ದೇವರಿಗೆ ದೀರ್ಘದಂಡ ಪ್ರಣಾಮ ಮಾಡಿ ಹೊರಟ.

ಲಕ್ವಾ ಹೊಡೆದು ಮಂಚಕ್ಕೆ ಅಂಟಿಕೊಂಡಂತಿದ್ದ ಅರ್ಚಕರ ವೃದ್ಧ ತಂದೆಗೆ ಹೊಸಮುಖ ನೋಡಿ ಗಾಬರಿಯಾಯಿತು. ''ಪೇಪರಿನವರಾದ್ರೆ ಬರ್ಲೇಬೇಡಿ. ಏನೇನೋ ಬರ್ದುಹಾಕಿ ರಾಮಾಯಣ ಮಾಡಾಕ್ತೀರಿ'' ಎಂದು ನಿಧಾನವಾಗಿ ಹೇಳಿದ್ರು. ಅರ್ಚಕರು ಎಲ್ಲವನ್ನೂ ಹೇಳಿದ ಬಳಿಕ ಬಾಯಿ ತೆರೆದು ನಿಧಾನವಾಗಿ ಮಾತಾಡಿದರು. ''ನಾನು ಮಾತಾಡೋದು ನಿಧಾನವಾಗುತ್ತೆ. ಆ ಶಿಲ್ಪಗಳನ್ನು ದೇವಸ್ಥಾನದಲ್ಲಿ ಏಕೆ ಕೆತ್ತುತ್ತಾರೆ ಅನ್ನೋದೂ ನಂಗಿನ್ನೂ ಗೊತ್ತಾಗಿಲ್ಲ.''

ಅವರ ನೇರ ಮಾತು ಅವನಿಗೆ ಇಷ್ಟವಾಯಿತು. ''ನಾನು ಓದಿ ತಿಳ್ಕೊಂಡಿರೋದನ್ನು ಹೇಳ್ತೀನಿ. ಜೀವಸೃಷ್ಟಿ ದೈವಲೀಲೆ ಅಂತ ಜನ ತಿಳ್ಕಂಡಿದ್ದ ಕಾಲವೊಂದಿತ್ತು. ರಹಸ್ಯ ಗೊತ್ತಾದ್ಮೇಲೆ ಸೃಷ್ಟಿಯ ಅಂಗಗಳಲ್ಲಿ ದೈವತ್ವವನ್ನು ಕಂಡರು. ಲಿಂಗ ಮತ್ತು ಪಾಣಿಪೀಠಗಳ ಸಂಕೇತ ಅದೇ ಅಲ್ಲವೆ ? ಎಗ್ಗಿಲ್ಲದೆ ಮೈಥುನ ಶಿಲ್ಪಗಳನ್ನು ಪೂಜಾ ಕೇಂದ್ರಗಳಲ್ಲೂ ಕಡೆದಿರಿಸಿದ್ರು. ಜೀವನದ ಎಲ್ಲಾ ಕ್ರಿಯೆಗಳಲ್ಲಿ ದೈವತ್ವವನ್ನು ಕಾಣುವುದು ಎಷ್ಟು ದೊಡ್ಡ ಸಾಂಸ್ಕೃತಿಕ ಸಂದೇಶ ! ಆದ್ರೆ ಮನುಷ್ಯ, ಜಾತಿಗಳನ್ನ ಮಾಡ್ಕೊಂಡ. ಗೋಡೆಗಳ್ನ ಕಟ್ಕಂಡ. ಆಚಾರವೇ ಧರ್ಮವಾಗೋಯ್ತು. ಒಟ್ಟಿಗೆ ಕೂತು ಊಟ ಮಾಡೋದಿಕ್ಕೂ ಜಾತಿ ಅಡ್ಡ ಬಂತು. ದೇವ್ರು ಸ್ವಾರ್ಥಕ್ಕೆ ಬಳಕೆಯಾದ. ಇದನ್ನೇ ಸಾಂಸ್ಕೃತಿಕ ಪತನ ಅನ್ನೋದು.''

ಒಂದು ಕ್ಷಣ ಅಲ್ಲಿ ಮೌನ. ಏನೋ ನೆನಪಾದವರಂತೆ ಅರ್ಚಕರು ಎದ್ದರು. ''ನೀವು ಮಾತಾಡ್ತಾ ಇರಿ. ಮೊನ್ನಿನ ಕೇಸುಂಟಲ್ಲಾ, ಅದಕ್ಕೆ ವಕೀಲ್ರನ್ನ ಕಾಣ್ಬೇಕು. ಈಗ ಹೋದ್ರೆ ಬೆಳಗ್ಗಿನ ಪೂಜೆಗೆ ಬಂದ್ಬಿಡ್ಬಹುದು. ತಂದೆ ಎಲ್ಲಾ ಹೇಳ್ತಾರೆ. ಅವ್ರು ತಿಂಡಿ ಊಟ ಮಾಡಿ ಹಾಕ್ತಾಳೆ.''

ಮಾತು ಮುಗಿಯುತ್ತಿದ್ದಂತೆ ಟ್ರೇಯಲ್ಲಿ ಕಾಫಿ ಲೋಟಾ ಇರಿಸಿಕೊಂಡು ಅರ್ಚಕರ ಹೆಂಡತಿ ಹೊರಬಂದಳು. ಅವಳನ್ನೊಮ್ಮೆ ನೋಡಿದ. ಇನ್ನೂ ಮೂವತ್ತು ದಾಟಿರಲಾರದು. ಸದೃಢ ಸುಂದರ ಮೈಕಟ್ಟು. ಆಕೆ ತಂದಿತ್ತ ಕಾಫಿಯನ್ನು ಹೀರುತ್ತಿದ್ದಂತೆ ಅರ್ಚಕರು ಚೀಲವೊಂದನ್ನು ಹೆಗಲಿಗೆ ತಗಲಿಸಿ ಹೊರಬಿದ್ದರು. ''ಇನ್ನು ನಿಮ್ಮನ್ನು ನೋಡೋದು ನಾಳೆ'' ಎಂದು ದುಡುದುಡು ನಡೆದು ಕಣ್ಮರೆಯಾದರು.

ವೃದ್ಧರು ಕೆಮ್ಮಿದರು. ಅವಳು ಅವನ ಎದುರಿಗೇ ಒಳಕೋಣೆಯಲ್ಲಿ ಕೂತಳು. ವೃದ್ಧರು ಮಾತಿಗಿಳಿದರು. ''ತಿಮ್ಮನ ಗುಡ್ಡೆಯ ಹೆಸ್ರು ಬದ್ಲಾವಣೆಗೆ ನನ್ನ ವಿರೋಧ ಯಾಕೆ ಅನ್ನೋದು ನಿಮ್ಮ ಪ್ರಶ್ನೆ ಅಲ್ವಾ ? ನೀವಿದನ್ನು ಪೇಪರ್ನೋರಿಗೆ ಹೇಳ್ಲ ಅಂತ ಭಾಷೆ ಕೊಟ್ರೆ, ಮಾತ್ರ ಹೇಳ್ತೀನಿ.'' ಅವರು ನಡುಗುತ್ತಿರುವ ಕೈಯನ್ನು ಮುಂದಕ್ಕೆ ಚಾಚಿದರು. ಅವನು ಅದನ್ನು ಭದ್ರವಾಗಿ ಹಿಡಿದು ಅಮುಕಿದ. ಅವರ ಮುಖದಲ್ಲಿ ಮಂದಹಾಸ ಜಿನುಗಿತು. ''ಈಗಿನವರಿಗೆ ಗೊತ್ತಿಲ್ಲದಿರೋ ವಿಷ್ಯಾ ಒಂದಿದೆ. ತಿಮ್ಮನ ಸಾವು ಒಂದು ಯೋಜಿತ ಕೊಲೆ !''

ಅವನು ಸ್ತಬ್ಧನಾದ. ಅವಳು ದಂಗುಬಡಿದವಳಂತಿದ್ದಳು. ವೃದ್ಧರು ನಿಧಾನವಾಗಿ ಮುಂದುವರಿಸಿದರು. ''ನಿಮ್ಮ ರೀಸರ್ಚಿಗೆ ನೆರವಾದೀತೆಂದು ಇದನ್ನು ಹೇಳ್ತಿದ್ದೇನೆ. ದೇವಸ್ಥಾನದ ಧ್ವಜಕಂಬ ಗೆದ್ಲು ಹಿಡ್ದು ಮುರಿಯೋದ್ರಲ್ಲಿತ್ತು. ಅದು ಅರ್ಚಕರಿಗೆ ಚೆನ್ನಾಗಿ ಗೊತ್ತಿತ್ತೂ ಕೂಡ. ತಿಮ್ಮನ ಸಾಹಸದ ಮೇಲೆ ನಂಬ್ಕೆಯಿದ್ದದ್ರಿಂದ ಹಗ್ಗ ಗಂಟು ಬೀಳೋವಂತೆ ಮಾಡಿದ್ದು ಅವ್ರೇ. ತಿಮ್ಮ ದೇವಸ್ಥಾನದ ಕಾವಲುಗಾರ ನೋಡಿ. ಧೈರ್ಯ ಮಾಡಿ ಕಂಬಕ್ಕೆ ಹತ್ತಿದ. ಮುಂದ್ಲಿದ್ದು ನಿಮ್ಗೆ ಗೊತ್ತೇ ಇದೆ.''

ಅವನಿಗೆ ನಂಬಿಕೆ ಬರಲಿಲ್ಲ. ''ತಿಮ್ಮನನ್ನು ಅವ್ರು ಯಾಕೆ ಕೊಲ್ಲಿಸ್ಬೇಕಿತ್ತು. ಅದೂ ಜಾತ್ರೆ ನಿಲ್ತದೆಂದು ತಿಳ್ದೂ ?'' ವೃದ್ಧರು ಸ್ವರ ತಗ್ಗಿಸಿ ನಿಧಾನವಾಗಿ ಹೇಳಿದರು. ''ಆಗಿನ ಅರ್ಚಕ್ರಿಗೆ ಸಂತಾನಲಕ್ಷ್ಮಿ ಒಲ್ದಿರ್ಲಿಲ್ಲ. ಅವ್ರ ಹೆಂಡ್ತಿ ಹೇಗಿದ್ರಂತೆ ಗೊತ್ತಾ ? ನಿಮ್ಮ ಸಿನ್ಮಾದೋರ್ನ ಅವ್ರ ಮುಂದೆ ನಿವಾಳಿಸಿ ಎಸೀಬೇಕು. ಏಳು ರಾತ್ರಿ ಒದ್ದೆ ಬಟ್ಟೇಲಿ ಉರುಳು ಸೇವೆ ಮಾಡಿ ಪಶುಪತೀನ ಪ್ರಾರ್ಥಿಸಿದ್ರೆ ಅವ ಸಂತಾನಭಾಗ್ಯ ಕೊಡ್ತಾನೆ ಅನ್ನೋದು ಇಲ್ಲಿನ ಕಾರ್ಣಿಕ ನೋಡಿ. ಆಯಮ್ಮ ಏಳು ರಾತ್ರಿ ಸೇವೆ ಮಾಡಿದ್ಲು, ಗರ್ಭವತಿನೂ ಆದ್ಲು.'' ಅವ್ರು ಮಾತು ನಿಲ್ಲಿಸಿದರು.

''ಅದ್ಕೆ ತಿಮ್ಮನ್ನ ಯಾಕೆ ಕೊಲ್ಲಿಸ್ಬೇಕಾಗಿತ್ತು ?''

ಅವನ ಪ್ರಶ್ನೆಗೆ ವೃದ್ಧರು ನಕ್ಕರು. ''ಅಯ್ಯೋ ನಿಮ್ಮ ! ನಿಮ್ಗೆ ಅರ್ಥ ಆಗ್ಲಿಲ್ಲಾ ? ಆ ಚೆಂದುಳ್ಳಿ ಹಸಿ ಹೆಣ್ಣು ರಾತ್ರಿ ಹೊತ್ತು ಒದ್ದೆ ಬಟ್ಟೇಲಿ ಒಂಟಿಯಾಗಿ ದೇವಸ್ಥಾನಕ್ಕೆ ಹೋಗ್ತಿದ್ದಾಗ ಅಲ್ಲಿರ್ತಿದ್ದುದು ತಿಮ್ಮ ಮಾತ್ರ. ಆಗ ಅವ್ನಿಗೆ ನಲ್ವತ್ತು ಇರ್ಬೌದೇನೊ ! ಕಷ್ಟಪಟ್ಟು ಬೆಳ್ದ ಗಟ್ಟಿ ಜೀವ. ಉಪ್ಪು ಹುಳಿ ತಿಂದ ದೇಹ ನೋಡಿ. ಅದೂ ಆಯಮ್ಮ ಅವಳಾಗೇ ಬಂದು ತಬ್ಕೊಂಡ್ರೆ ಏನಾಗ್ಬೇಕೋ ಅದಾಯ್ತು. ಅರ್ಚಕ್ರಿಗೂ ಗೊತ್ತಿತ್ತು ಉರುಳು ಸೇವೆಯಿಂದ ಮಕ್ಕಳಾಗೋದಿಲ್ಲ ಅನ್ನೋದು. ಹಿಂದಿನ ಅರ್ಚಕ್ರಿಗೆ ಸಂತಾನಭಾಗ್ಯ ನೀಡೋ ಶಕ್ತಿ ಇತ್ತು. ಇವ್ರಿಗೆ ಇರ್ಲಿಲ್ಲ. ಅರ್ಚಕ್ರಿಗೇ ಮಕ್ಕಳಾಗ್ದೇ ಇದ್ರೆ ಸ್ಥಳದ ಕಾರ್ಣಿಕಾನ ಯಾರು ನಂಬ್ತಾರೆ ? ಕಾರ್ಣಿಕಾನ ಉಳ್ಸಿ ಗುಟ್ಟನ್ನ ಕಾಪಾಡಿಕೊಳ್ಬೇಕಿತ್ತು. ಅದ್ಕೆ ಸಾಧುಪ್ರಾಣಿ ತಿಮ್ಮ ಹೇಳಿ ಮಾಡ್ಸಿದಂತಿದ್ದ. ಆದ್ರೂ ಎಲ್ಲಾದ್ರೂ ಗುಟ್ಟು ರಟ್ಟಾದೀತೆಂದು ಹೆದ್ರಿ ಅವನ್ನ ಮುಗಿಸ್ಬಿಟ್ರು. ಈಗ್ಲೂ ಇಲ್ಲಿನ ಮುಖ್ಯ ಆಕರ್ಷಣೆ ಈ ಕಾರ್ಣಿಕವೇ.''

ವೃದ್ಧರು ನಕ್ಕರು. ಒಳಕೋಣೆಯಲ್ಲಿದ್ದ ಅವಳು ಕಿಸಕ್ಕನೆ ನಕ್ಕಳು. ಅವನು ಸುಮ್ಮನೆ ಕೂತಿದ್ದ. ಅದನ್ನು ಗಮನಿಸಿ ವೃದ್ಧರು ''ನಿಯೋಗ ಕ್ರಮದಿಂದ ಮಕ್ಕಳನ್ನು ಪಡೆಯೋದು ಶಾಸ್ತ್ರ ನಿಷಿದ್ಧವಲ್ಲ'' ಎಂದರು. ''ನಿಯೋಗ ಎಂದಾಗಿದ್ರೆ ವ್ರತ, ಉರುಳುಸೇವೆ ಏಕೆ ಬೇಕಿತ್ತು ? ನಿಯೋಗಕ್ಕೆ ಬೇಕಾದ ಯೋಗ್ಯತೆ ತಿಮ್ಮನಿಗಿತ್ತೆ ?''

ವೃದ್ಧರು ಮತ್ತೊಮ್ಮೆ ನಕ್ಕರು. ''ಶಾಸ್ತ್ರಗಳಲ್ಲಿ ಉತ್ಕೃಷ್ಟವಾದ್ದು ಯಾವ್ದು ಗೊತ್ತಾ ? ಅನುಕೂಲಶಾಸ್ತ್ರ ! ಇಲ್ಲಿ ಕ್ಷೇತ್ರ ಮಾತ್ರ ಮುಖ್ಯವಾಗಿತ್ತು. ಬೀಜವಲ್ಲ. ಏನಿದ್ರೂ ಮಾತೃತ್ವ ಮಾತ್ರ ನಿಜ. ಪಿತೃತ್ವ ಕೇವಲ ಕಲ್ಪನೆ ಮಾತ್ರ. ಅಲ್ವೆ ?'' ಈಗ ಅವನಿಗೂ ನಗು ಬಂತು. ''ಹಾಗಾದ್ರೆ ಈ ಗುಟ್ಟು ಹೊರಬಂದಿದ್ದು ಹೇಗೆ ?''

''ಓ ಅದಾ ! ತಿಮ್ಮ ಸತ್ತ ದಿನದಿಂದ್ಲೇ ಆಯಮ್ಮ ಮಂಕಾಗಿದ್ಲಂತೆ. ಏನೇನೋ ಮಂತ್ರ, ತೀರ್ಥ, ತಾಯಿತ ಯಾವುದ್ರಿಂದ್ಲೂ ವಾಸಿಯಾಗ್ಲಿಲ್ಲ. ಹೆರ್ಲೋಕೆ ಬಂದ ಸೂಲ್ಗಿತ್ತೀಲಿ ಮಗೂನ ಅಪ್ಪ ಧ್ವಜ ಕಂಬದಿಂದ ಬಿದ್ದು ಸತ್ತೋದ ಎಂದಿದ್ದೇ ಎಲ್ರಿಗೂ ಗುಟ್ಟು ಗೊತ್ತಾಗಿಬಿಡ್ತು. ಮಗೂಗೆ ಒಂದು ತಿಂಗ್ಳಾಗೋವಾಗ ಅಮ್ಮ ನೇಣಾಕ್ಕೊಂಡ್ಳಂತೆ. ಅದು ತಿಮ್ಮನ ಪ್ರೇತ ಚೇಷ್ಟೆ ಎಂದು ಅರ್ಚಕ್ರು ಶಾಂತಿ ಹೋಮ ಮಾಡಿಸಿದ್ರಂತೆ. ಊರವ್ರು ನಂಬಿದ್ರು. ಕಾಲ ಎಲ್ಲವನ್ನ ನುಂಗಿಬಿಡತ್ತೆ ನೋಡಿ.''

ಸ್ವಲ್ಪ ಹೊತ್ತು ವಿಷಾದದ ಮೌನ. ಅವನು ಮೌನದ ಚಿಪ್ಪನ್ನು ಒಡೆದ. ''ಮಗು ಬೇಕೆಂದು ಹಂಬಲಿಸಿ ವ್ರತ ಮಾಡಿ ತಿಮ್ಮನಿಂದ ಮಗೂನ ಪಡ್ದ ಆಯಮ್ಮ ನೇಣು ಹಾಕ್ಕೋಳ್ಳೋವಷ್ಟು ದುರ್ಬಲ ಮನಸ್ಸಿನೋಳಾಗೋದಿಕ್ಕೆ ಸಾಧ್ಯಾನಾ ? ಇಲ್ಲೂ ಒಂದು ಕೊಲೆ ಸಂಚು ಇರ್ಬಾರ್ದೇಕೆ ?''

ವೃದ್ಧರು ಒಂದು ಬಾರಿ ಕೆಮ್ಮಿದರು. ''ನಿಮ್ಮ ತರ್ಕವೇನೋ ಸರೀನೇ. ಆದ್ರೆ ಆಯಮ್ಮ ಪಾಪಪ್ರಜ್ಞೆ ಕಾಡಿ ದುರ್ಬಲ ಗಳಿಗೆಯೊಂದ್ರಲ್ಲಿ ಹಗ್ಗ ತಗಂಡಿದ್ದೆಂದು ನಂಗನಿಸಲ್ಲ. ತಿಮ್ಮನ್ನ ಗಂಡ ಉಪಾಯದಿಂದ ಕೊಂದಿದ್ದೇ ಅಮ್ಮನ ಮನ್ಸು ಕೆಡೋದಿಕ್ಕೆ ಕಾರಣವಾಗಿರ್ಬೇಕು. ಮಗೀನ [illegible] ಅಲ್ವೆ ? [illegible] ಇದ್ದಿದ್ರೆ ಅವ್ರು ಉರುಳು ಸೇವೆಗೆ ಹೋಗ್ತಾನೇ ಇದ್ದಿರ್ಲಿಲ್ಲ. ತಿಮ್ಮ ಸತ್ತಿದ್ದು [illegible] ಒಂದೇ ಅವ್ರು ಹಗ್ಗ ತಗಂಡಿರಬೇಕು.''

ಅವನು ತಲೆದೂಗಿದ. ''ಇನ್ನೂ ಒಂದು ಡವುಟ್ಟು ಉಳ್ಕಂಬಿಡ್ತು ನೋಡಿ. ಗುಡ್ಡೆಗೆ ವಿಷ್ಣುಗಿರಿ ಅಂತ ಹೆಸ್ರಿಡೋದಿಕ್ಕೋಗಿ ಗಲಾಟೆ ಆಯ್ತೂಂತ ಹೋಟೆಲು ಭಟ್ಟ ಹೇಳ್ದ. ನಿಂ ಮಗನಲ್ಲಿ ಕೇಳಿದ್ರೆ ನಾವು ಮೂಲತಃ ವೈಷ್ಣವ ಅಂದ್ರು. ಹಂಗಿದ್ದೂ ವಿಷ್ಣುಗಿರಿ ಅನ್ನೋ ಹೆಸ್ರಿಗೆ ನಿಮ್ಮ ವಿರೋಧ ಯಾಕೆ ?''

ವೃದ್ಧರು ಅವನನ್ನು ದಿಟ್ಟಿಸಿ ನೋಡಿದರು. ''ತಪ್ಪು ತಿಳ್ಕೋಬೇಡಿ. ಆ ಭಟ್ಟನ ಪೈಕಿಯವ್ರಾ ನೀವು ?''

''ಅಲ್ಲ. ನಮ್ಮಿಬ್ರದ್ದೂ ಒಂದೇ ಊರು. ಆದ್ರೆ ಅವನ್ನ ನಾನು ನೋಡೋದು ಇದೇ ಫಸ್ಟು. ಊರ್ನ್ಯಾವುದು ಅಂತ ಹೇಳಿದ್ದಕ್ಕೆ ಅವ್ನ ಪೈಕಿಯವನೂಂತ ನನ್ನ ತಿಳ್ಕೊಂಬಿಟ್ಟಿದ್ದಾನೆ ಅಷ್ಟೆ.''

''ಹಂಗಾದ್ರೆ..... ನೀವು ಬ್ರೇಮಿನ್ಸ್ ಅಲ್ಲ ?''

ಅವನು ನಕ್ಕ. ''ನಂಗೆ ಜಾತಿ ಇಲ್ಲ. ಜಾತಿ ವ್ಯವಸ್ಥೇಲಿ ನಂಬ್ಕೇನೂ ಇಲ್ಲ. ಮನುಷ್ಯರದ್ದೆಲ್ಲಾ ಒಂದೇ ಜಾತೀಂತ ತಿಳ್ಕಂಡಿರೋನು ನಾನು. ಭಟ್ಟ ಅವ್ನ ಪೈಕಿ ಅಂತ ತಿಳ್ಕಂಡ. ನೀವು ಬೇಕಿದ್ರೆ ನಿಂಪೈಕಿ ಅಂತ ತಿಳ್ಕಳ್ಳಿ. ನಾನು ಬೇಡಾ ಅನ್ನಲ್ಲ.''

ವೃದ್ಧರಿಗೆ ಖುಷಿಯಾಯ್ತು. ''ಓದ್ದೋರೆಲ್ಲಾ ನಿಂಹಂಗಿದ್ರೆ ನಮ್ದು ರಾಮರಾಜ್ಯವಾಗುತ್ತೆ. ಆ ಹೋಟೇಲು ಭಟ್ಟ ಇದ್ದಾನಲ್ಲಾ ಬಲೇ ಕಿಲಾಡಿ ನನ್ಮಗ ಅವ್ನು. ಮರಾಠ್ರ ದೇಶಕ್ಕೆ ಸೇರ್ದೋನು. ಹೆಸ್ರು ಬದಲಾವಣೆಗೆ ಅವಂದೇ ಚಿತಾವಣೆ. ಆಗ್ಲೂ ಊರು ಜಾತಿವಾರಾಗಿ ಒಡ್ದೋಯ್ತು. ಮೊನ್ನೆ ಬ್ರಹ್ಮಕಲ್ಸ ನಡ್ದಾಗ ಸಾಮೂಹಿಕ ಭೋಜನ ವಿರೋಧಿಸಿದ್ದೂ ಅವ್ನೆ. ನಮ್ಮೂರು ಮತ್ತೊಮ್ಮೆ ಒಡ್ದೋಯ್ತು. ನಂಗೆ ಅವನ್ನ ಕಂಡ್ರೆ ವಾಂತಿ ಬರತ್ತೆ.''

''ಆದ್ರೆ ನೀವು ಹೆಸ್ರು ಬದಲಾವಣೇನ ವಿರೋಧಿಸಿದ್ದು ಅಷ್ಟಕ್ಕೇ ಇರಲಾರ್ದು ಅಂದ್ಕೊಂಡಿದ್ದೀನಿ.''

ವೃದ್ಧರು ಗಟ್ಟಿಯಾಗಿ ನಕ್ಕರು. ''ನೀವು ನನ್ನ ಬಿಡೋ ಹಂಗೆ ಕಾಣ್ಸಲ್ಲ. ಆಯಮ್ಮನ ಕತೆ ಹೇಳ್ತಿದ್ದೆ ಅಲ್ವಾ ? ಕತೆ ಅಲ್ಲಿಗೇ ಮುಗೀಲಿಲ್ಲ. ಹಾಗೆ ಹುಟ್ದ ಮಗೀಗೆ ಉಪನಯ್ನ, ವೇದಾಧ್ಯಯ್ನ ಎಲ್ಲಾ ಆಯ್ತು. ಆದ್ರೆ ಊರ ಇನ್ನೊಂದು ವೈದಿಕ ಕುಟುಂಬ ಆ ಮಗೀನ ಮೂಲ ಕೆದ್ಕಿ ಅರ್ಚಕ ವೃತ್ತಿ ತನಗೇ ಸಿಗ್ಬೇಕೆಂದು ತಗಾದೆ ತೆಗೀತು. ಆದ್ರೆ ಅರ್ಚಕ್ರು ಅದೆಲ್ಲಾ ಆಗ್ದೋರ ಮಾತು. ಅವ್ಳಿಗೆ ಪ್ರೇತ ಮೆಟ್ಟಿ ಏನೇನೋ ಹೇಳಿದ್ದನ್ನ ನಂಬೋರಿಗೆ ಬುದ್ಧಿ ಇಲ್ಲ. ಗರ್ಭಿಣಿ ಹೆಂಗ್ಸ್ರಿಗೆ ಮತ್ತು ಹೆತ್ತೋರಿಗೆ ಪ್ರೇತ ಚೇಷ್ಟೆ ಇದ್ದಿದ್ದೇ. ಅದ್ಕಾಗಿ ಶಾಂತಿ ಹೋಮ ಆಗಿ ಪ್ರೇತ ಉಚ್ಚಾಟನೆ ಆದ್ಮೇಲೆ ಇನ್ನೇನು ? ಎಂದು ದಬಾಯಿಸಿದ್ರು. ಸೂಲ್ಗಿತ್ತಿಗೆ ಸ್ವಲ್ಪ ಕೊಟ್ಟು 'ಅಮ್ಮ ಹಂಗೆಲ್ಲಾ ಹೇಳ್ಲಿಲ್ಲ. ಪ್ರೇತ ಬ್ಯಾಧೆಯಿಂದ ಹುಚ್ಚು ಹಿಡ್ದು ಏನೇನೋ ಅರ್ಥವಿಲ್ಲದ್ದು ಹೇಳ್ತಿದ್ದಿದ್ದು ಹೌದು' ಎಂದು ಹೇಳಿಸಿದ್ರು. ಊರವ್ರಿಗೆ ಅರ್ಚಕ್ರಲ್ಲಿ ವಿಶ್ವಾಸ ಇತ್ತು. ಹಂಗಾಗಿ ಆ ವಿಷ್ಯ ಮುಚ್ಚೋಯ್ತು. ತಿಮ್ಮಂಗುಟ್ಟಿದ ಮಗು ಅರ್ಚಕನಾಗೋದಿಕ್ಕೆ ಆಮ್ಯಾಕೆ ತಕ್ರಾರು ಬರ್ಲಿಲ್ಲ. ಗುಡ್ಡೆಯ ಹೆಸ್ರು ಬದ್ಲಾವಣೆಗೆ ನನ್ನ ವಿರೋಧ ಯಾಕಂದ್ರೆ... ಯಾಕಂದ್ರೆ... ಆ ಮಗು ನಂಗೆ ಮುತ್ತಜ್ಜನಾಗ್ಬೇಕು.'' ಈಗ ಅವರು ಮುಕ್ತವಾಗಿ ನಕ್ಕರು. ಅವಳು ಮತ್ತು ಅವನು ನಗುವಿನಲ್ಲಿ ಸೇರಿಕೊಂಡರು.

ಕತ್ತಲು ಕವಿಯುತ್ತಿತ್ತು. ಅವಳು ಹೊರಬಂದು ಲೈಟು ಹಾಕಿದಳು. ''ಮಾವಯ್ಯನೋರ ಮಾತು ಕೇಳ್ತಾ ಇದ್ರೆ ಹೊತ್ತು ಹೋಗೋದೇ ಗೊತ್ತಾಗೋದಿಲ್ಲ'' ಎಂದಳು. ವೃದ್ಧರು ''ನೀನು ನನ್ನನ್ನ ಮಗೂನಂತೆ ನೋಡ್ಕೋಳ್ಳೋವಾಗ ನಂಗೇನು ಕಮ್ಮಿ ಹೇಳು. ಆ ಪಶುಪತಿ ಕಣ್ಬಿಟ್ಟು ಒಬ್ಬ ಮೊಮ್ಮಗೂನ ಕೊಟ್ಬುಬಿಟ್ರೆ ನಾನು ನೆಮ್ಮದಿಯಿಂದ ಕಣ್ಣು ಮುಚ್ತಿದ್ದೆ'' ಎಂದು ಗದ್ಗದಿತರಾದರು. ''ತುಂಬಾ ಮಾತಾಡಿದ್ರಿ ಮಾವಯ್ಯ. ಹಾಲು ತರ್ತೀನಿ. ಮದ್ದು ತಗಂಡು ನಿದ್ದೆಮಾಡೀರಂತೆ'' ಎಂದು ಅಡುಗೆ ಕೋಣೆಯತ್ತ ಹೋದಳು.

ವೃದ್ಧರು ಮೆಲು ಮಾತಿನಲ್ಲಿ ''ಯಾರ ಶಾಪವೋ ಏನೋ ? ಮದ್ವೆಯಾಗಿ ಏಳು ವರ್ಷವಾದ್ರೂ ಇವ್ಳಿಗೊಂದು ಪಿಳ್ಳೆ ಹುಟ್ಲಿಲ್ಲ. ಇವಳನ್ನು ಅಂದು ಸುಖವಿಲ್ಲ. ದೋಷ ಇರೋದು ಮಗನಲ್ಲಿ. ಇವ್ಳಿಗೆ ಮಗು ಆಗ್ದೇ ಹೋದ್ರೆ ದೇವಸ್ಥಾನಕ್ಕೆ ಯಾರೂ ಬರಲ್ಲ. ಅದೇ ಚಿಂತೆ ನನಗೆ'' ಅಂದರು.

ಮಾತುಗಳು ಅರ್ಥಕಳಕೊಂಡ ವಿಷಾದದ ಗಳಿಗೆಯಲ್ಲಿ ಅವಳು ಹಾಲು ತಂದು ವೃದ್ಧರಿಗೆ ಎರಡು ಮಾತ್ರೆ ನುಂಗಿಸಿ ಬೆಡ್‌ಶೀಟ್ ಹೊದಿಸಿದಳು. ಅವನನ್ನು ಉದ್ದೇಶಿಸಿ ''ನಿಮ್ಮ ರೂಮು ಮಹಡಿಯಲ್ಲಿದೆ. ಅಟಾಚ್ಡು. ಸ್ನಾನ ಮುಗ್ಸಿ ಊಟಕ್ಕೆ ಬನ್ನಿ'' ಎಂದು ಅಡುಗೆ ಮನೆಗೆ ನುಗ್ಗಿದಳು.

ಪೊಗದಸ್ತಾದ ಊಟವನ್ನು ಮೌನವಾಗಿ ಮುಗಿಸಿ ಮಹಡಿ ಹತ್ತಿ ಅವನು ಮಂಚದಲ್ಲಿ ಬಿದ್ದುಕೊಂಡ. ಅವನನ್ನು ಇಡೀಯಾಗಿ ತಿಮ್ಮ ಆವರಿಸಿಕೊಂಡಿದ್ದ. ರಾತ್ರಿ ತುಂಬಾ ಹೊತ್ತಾಗಿರಬಹುದು. ಇನ್ನೇನು ಜೊಮ್ಮು ಹತ್ತಬೇಕು ಅನ್ನುವಷ್ಟರಲ್ಲಿ ಬಾಗಿಲ ಮೇಲೆ ಮೃದುವಾದ ಬಡಿತ. ಗಾಬರಿಯಿಂದ ಎದ್ದು ಬಾಗಿಲು ತೆರೆದರೆ ಅವಳು ! ಒಳಗೆ ಬಂದವಳೇ ಅವನನ್ನು ಪೂರ್ತಿಯಾಗಿ ಆವರಿಸಿಕೊಂಡು ''ಕ್ಷೇತ್ರದ ಕಾರ್ಣಿಕ ಉಳಿಸಿ'' ಎಂದು ಪಿಸುಗುಟ್ಟಿದಳು.

ಡಾ|| ಪ್ರಭಾಕರ ಶಿಶಿಲ
ನೆಹ್ರು ಮೆಮೋರಿಯಲ್ ಕಾಲೇಜು, ಸುಳ್ಯ- ೫೭೪ ೨೩೯ (ದ.ಕ.)

ಎಚ್‌ಎಮ್‌ಟಿ ಬಹುಮಾನಿತ ಲೇಖನ




# ಹೊಂಡಾಟ

ಎಸ್. ಜಿ. ಶಿವಶಂಕರ್

ನಾನು ವಿಶ್ವನ ಮನೆಯ ಗೇಟು ತೆಗೆದಾಗ ಅವನ ಜರ್ಮನ್ ಷಪರ್ಡ್ ನಾಯಿ 'ಡೆವಿಲ್' ಕಿವಿಯ ತಮಟೆ ಒಡೆಯುವಂತೆ ಭಯಂಕರವಾಗಿ ಬೊಗಳಿತು! ಕಿಟಕಿಯಿಂದ ಎರಡು ತಲೆಗಳು ಹಣಕಿದುವು ; ಅವು ವಿಶ್ವನ ಮಕ್ಕಳು ಆಕಾಶ್ ಮತ್ತು ರೀನಾರದ್ದು.

'ಅಂಕಲ್ ಬಂದಿದಾರೆ ಸುಮ್ಮನಿರು'

- ಎಂದು ಆಕಾಶ ಗದರಿದರೂ ಅವನ ಮಾತನ್ನು ನಂಬದೆ ನನ್ನನ್ನೇ ನೋಡುತ್ತಾ ಅನಿಷ್ಟವನ್ನು ಕಂಡಾಗ ಬೊಗಳುವಂತೆ ಡೆವಿಲ್ಲು ಒಂದೇ ಸಮನೆ ಬೊಗಳಿತು. ಹಾಗೆ ನೋಡಿದರೆ ಇದು ಮೊದಲನೆಯಸಲವೇನಲ್ಲ ನಾನು ವಿಶ್ವನ ಮನೆಗೆ ಬರುತ್ತಿರುವುದು. ವಿಶ್ವ ನನ್ನ ಹಳೆಯ ಸ್ನೇಹಿತ. ನಮ್ಮ ಸ್ನೇಹ ಚಡ್ಡಿ ಕಾಲದಿಂದ ಪ್ಯಾಂಟಿನ ಕಾಲಕ್ಕೂ ಬಂದು, ಪಂಚೆ ಮತ್ತು ವಾಕಿಂಗ್ ಸ್ಟಿಕ್ಕಿನ ಕಾಲಕ್ಕೂ ಮುಂದುವರಿಯುವ ಲಕ್ಷಣ ತೋರಿಸುತ್ತಿದೆ. ಅಂದರೆ ನಾವಿಬ್ಬರೂ ಈಗ ರಿಟೈರ್ಮೆಂಟಿನ ಕಡೆಗೆ ಧಾವಿಸುತ್ತಿದ್ದೇವೆ ಎಂದು ಹೇಳಬೇಕಾಗಿಲ್ಲವಲ್ಲ? ವಿಶ್ವನ ಮನೆಗೆ ಸಣ್ಣ ಮರಿಯಾಗಿ ಬಂದಾಗಿನಿಂದ ಡೆವಿಲ್ಲು ನನ್ನನ್ನು ನೋಡುತ್ತಿದೆ.... ಆದರೂ ಪ್ರತಿ ಬಾರಿ ಬೊಗಳುತ್ತದೆ! ನಾಯಿಯೆಂದರೆ ನನಗೆ ಅಷ್ಟಕಷ್ಟೆ! ಬಹುಶಃ ನಾಯಿಗೂ ನಾನೆಂದರೆ ಅಸಡ್ಡೆಯೆಂದು ಕಾಣುತ್ತದೆ. ಆದರೆ ವಿಶ್ವ ಹಾಗಲ್ಲ, ಡೆವಿಲ್ಲು ಅವನ ಕೊನೆಯ ಮಗನಂತೆ! ಹಾಗೆಂದು ವಿಶ್ವ-ವಿಶಾಲೂ ಹೆಮ್ಮೆಯಿಂದ ಹೇಳುವಾಗ ನಾನು ಕನಿಕರದಿಂದ ಅವರತ್ತ ನೋಡುತ್ತೇನೆ.

ನಾಯಿಯ ರಕ್ಷಣಾ ಆವರಣವನ್ನು ಪಾಸಾಗಿ ಮನೆಯನ್ನು ಹೊಕ್ಕ ನನಗೆ ವಿಶೇಷವಾಗಿ ಕಂಡಿದ್ದು ಆಕಾಶನ ವಿಚಿತ್ರ ವೇಷ! ಚರ್ಮದಿಂದ ಮಾಡಿಸಿದಂತ ಪ್ಯಾಂಟು, ಮೇಲೆ ಜರ್ಕಿನ್ನು, ಕೈಗೆ ಚರ್ಮದ ಕೈ ಚೀಲ, ತಲೆಗೆ ಹೆಲ್ಮೆಟ್ಟು! ಅಡಿಯಿಂದ ಮುಡಿಯವರೆಗೆ ದೇಹವನ್ನು ಉಡುಪಿನಲ್ಲಿ ಮರೆಸಿದ್ದ ಅವನನ್ನು ಆಶ್ಚರ್ಯದಿಂದ ಕೇಳಿದೆ :

''ಇದೇನೋ ಅವತಾರ ?''

ಆಕಾಶ ಇಂಜಿನಿಯರಿಂಗ್ ಇನ್ನೇನು ಮುಗಿಸುವುದರಲ್ಲಿದ್ದ.

''ಓ... ಇದಾ... ? ಹೊಂಡಾಟಕ್ಕೆ.... ಅಂಕಲ್... ನಂಗೆ ಹೊತ್ತಾಗಿದೆ, ಬರ್ತೀನಿ'' ಎಂದು ಹೆಲ್ಮೆಟ್ಟಿನ ಪಾರದರ್ಶಕ ಕವರಿನೊಳಗಿಂದಲೇ ಹೇಳಿ ಹೊರಟೇಹೋದ. ನನಗೆ ಅತಿ ವಿಶಿಷ್ಟವಾಗಿ ಕೇಳಿಸಿತು ಆ ಪದ – 'ಹೊಂಡಾಟ !'

ಅಂದು ಭಾನುವಾರ. ನನ್ನಂತೆಯೇ ಸುರೇಶ ಮತ್ತು ಮಹೇಶ ಸಹ ವಿಶ್ವನ ಮನೆಗೆ ಬಂದರು. ವಿಶ್ವನ ಜೊತೆ ಎಲ್ಲ ಸೇರಿ ಪಟ್ಟಾಂಗ ಹೊಡೆಯುತ್ತ ಮಧ್ಯಾಹ್ನ ಎರಡು ಗಂಟೆಯವರೆಗೂ ರಮ್ಮಿಯನ್ನು ರಮಿಸಿದೆವು. ಮಡದಿಯರ ಫೋನಿನ ಕರೆ ಬರುವವರೆಗೆ !

'ಹೊಂಡಾಟ' ನನ್ನ ತಲೆಯನ್ನು ಪೂರ್ಣವಾಗಿ ಆವರಿಸಿತ್ತು! ಒರಳು ಕಲ್ಲಿಗೆ ಹೂರಣ ಮೆತ್ತಿಕೊಳ್ಳುವಂತೆ! ಏನಿದು 'ಹೊಂಡಾಟ' ಎಂದು ವಿಶ್ವನನ್ನು ಕೇಳಬಹುದಿತ್ತು. ....ಆದರೆ ಕೇಳಲಿಲ್ಲ. ಸಾಹಿತಿಯ ಪಟ್ಟ ಬೇರೆ ನನ್ನದಲ್ಲ! ಹೀಗಿರುವಾಗ ಕನ್ನಡ ಪದವೊಂದು ಗೊತ್ತಿಲ್ಲ ಎಂದು ಒಪ್ಪುವುದಾದರೂ ಹೇಗೆ ? ಇಂಥ ಬಿಗುಮಾನವನ್ನು ಸ್ವಾಭಿಮಾನ ಎನ್ನಬಹುದೋ, ಇಲ್ಲ ಮೂರ್ಖತನ ಎನ್ನಬಹುದೋ ಗೊತ್ತಾಗುತ್ತಿಲ್ಲ. ಯಾರನ್ನೂ ಕೇಳದೆ ಖುದ್ದಾಗಿ ನಾನೇ ಈ ಪದದ ಅರ್ಥದ ಅನ್ವೇಷಣೆ ಮಾಡಬೇಕೆಂಬ ಛಲ, ಬಲ ಬಂದಿತ್ತು.

'ಹೊಂಡಾಟ' ಅಂದರೆ 'ಹೋಂಡಾ', 'ಹುಂಡಾಯ್', 'ಶೋಗನ್' – ಮುಂತಾದ ಜಪಾನೀ ಇಲ್ಲ ಕೊರಿಯಾ ಮೂಲದ ಮೋಟಾರ್ ಬೈಕೋ, ಕಾರೋ.... ಇಲ್ಲಾ ವಿಸಿಡಿಯೋ ಇರಬೇಕೆಂದು ಯೋಚಿಸಿದೆ. ಆದರೆ ಅದೇಕೋ ಸರಿಹೊಂದಲಿಲ್ಲ. ನನ್ನ ಊಹೆ ತಪ್ಪೆನಿಸಿತು ! ಆದರೂ ಪದವನ್ನು ಕೂಲಂಕಷವಾಗಿ ಗಮನಿಸಿದರೆ ಯಾವುದೋ ಆಟದಂತೆ ಗೋಚರಿಸಿತು ! ಒಂದು ಕ್ಷಣ ಖುಷಿಯಾಯಿತು. ಇದು ಒಂದು ರೀತಿಯ ಆಟವೇ ಇರಬೇಕೆನ್ನಿಸಿತು ! ಅಲ್ಲವೆ ? ತುಂಟಾಟ, ಮೊಂಡಾಟ, ಚೆಲ್ಲಾಟ, ಚೆಂಡಾಟ, ... ಭಂಡಾಟ..ಪುಂಡಾಟ.. ಬಾಂಬ್ ಆಟ.. ಕೋಲಾಟ.. ಬೈದಾಟ ಮುಂತಾದ ಆಟಗಳೆಲ್ಲಾ ಕಣ್ಮುಂದೆ ಬಂದುವು ! ಆದರೂ ಹೊಂಡಾಟದ ಕಲ್ಪನೆ ಬರಲಿಲ್ಲ! ಹಾಗಾದರೆ ಏನು ಈ ಹೊಂಡಾಟ ? ಇದೂ ಒಂದು ರೀತಿಯ ಆಟವೇ ? ಇಲ್ಲ, ಬೇರೇನೋ ಇರಬಹುದೆ ?

ಇದು ಕನ್ನಡಕ್ಕೆ ಹೊಸದಾಗಿ ಆಮದಾದ ಪದ ಇರಬಹುದೆ, ಎಂಬ ಅನುಮಾನ ಒಂದು ಕ್ಷಣ ಬಂತು ! ಛೇ... ಛೇ... ಇದು ಅಚ್ಚ ಕನ್ನಡ ಪದ ಎಂದು ಒಳದನಿ ಹೇಳಿತು. ಇದು ಅಚ್ಚ ಕನ್ನಡ ಪದವೇ ಇರಬೇಕು... ಆದರೆ ಪ್ರಯೋಗಕ್ಕೆ ಸೂಕ್ತ ಅವಕಾಶ ಸಿಗದೆ ಮೂಲೆಗುಂಪಾಗಿದೆ. ಯೋಚಿಸಿದಷ್ಟೂ ಇದೊಂದು ರೀತಿಯ ಆಟವೇ ಇರಬೇಕೆಂಬ ನಂಬಿಕೆಯೇ ಬಲವಾಗುತ್ತಾ ಹೋಯಿತು.

ಈ ಹೊಂಡಾಟ ನನ್ನ ಹಲವು ರಾತ್ರಿಗಳ ನಿದ್ರೆಯನ್ನು ಕೆಡಿಸಿತು ! ಯೋಚಿಸಿ ಬಸವಳಿದೆ ! ಆದರೂ ನಾನು ಯಾರನ್ನೂ ಕೇಳಲಿಲ್ಲ ! ಈ ಪದದ ಪೂರ್ಣ ಸ್ವರೂಪ ನನ್ನಲ್ಲಿಯೇ ಅನಾವರಣವಾಗಲಿ ಎಂದು ಚಿಂತೆಯಲ್ಲಿ ಮುಳುಗಿದೆ. ಕೂತಲ್ಲಿ, ನಿಂತಲ್ಲಿ, ತಿನ್ನುವಾಗ, ಇನ್ನೊಬ್ಬರ ತಲೆ ತಿನ್ನುವಾಗ, ಮಲಗುವಾಗ, ನಿದ್ರೆಯಲ್ಲಿಯೂ 'ಹೊಂಡಾಟ' ಕಾಡತೊಡಗಿತು.



ಒಂದು ಮುಂಜಾನೆ ಎಚ್ಚರವಾಯಿತು - ಕಿವಿಯ ಬಳಿ ದಿವ್ಯ ಸಂಗೀತ ಹಾಡುತ್ತಿದ್ದ ಸೊಳ್ಳೆಗಳಿಂದ ! ಮನೆಯಲ್ಲಿ ಮಸ್ಕಿಟೋ ಮ್ಯಾಟುಗಳ ಸ್ಟಾಕು ಮುಗಿದಿತ್ತು. ವಿಧಿಯಿಲ್ಲದೆ ಫ್ಯಾನು ಹಾಕಿಕೊಂಡು ಮಲಗಿದ್ದೆ. ಆಚೆ ಚಳಿ ಹೆಚ್ಚಾಗಿತ್ತು. ಇದರ ಜೊತೆಗೆ ಫ್ಯಾನು ಬೇರೆ. ಫ್ಯಾನು ಆರಿಸಿದರೆ ಸೊಳ್ಳೆ ! ಇತ್ತ ದರಿ ಅತ್ತ ಪುಲಿ ಎನ್ನುವಂತೆ ! ಎದ್ದು ಲೈಟು ಹಾಕಿ ಒಂದೆರಡು ಸೊಳ್ಳೆ ಹೊಡೆದು, ರಕ್ತಸಿಕ್ತ ಕೈ ನೋಡಿಕೊಂಡಾಗ ನೂರಾರು ಜನ ಶತ್ರುಗಳನ್ನು ಅಡ್ಡಾದಿಡ್ಡಿ ಹೊಡೆದುಹಾಕಿದ ಹಿಂದೀ ಚಿತ್ರದ ನಾಯಕ ಅಮಿತಾಬನ ನೆನಪಾಗಿತ್ತು.




ಎದ್ದು ಏನು ಮಾಡಬೇಕೆಂದು ಒಡನೆ ತೋರಲಿಲ್ಲ. ರಕ್ತದ ಒತ್ತಡಕ್ಕೆ ಡಾಕ್ಟರರ ಸಲಹೆ ನೆನಪಾಯಿತು : ಮೆಡಿಟೇಶನ್ನಿಗೆಂದು ಕೂತೆ. ನನಗೇನೋ ಮೆಡಿಟೇಶನ್ನು. ಆದರೆ ಸೊಳ್ಳೆಗಳಿಗೆ ಅದು [illegible] [illegible]. ಎಂಟಿವಿ, ವಿ-ಚಾನಲ್‌ನಲ್ಲಿ ರಾಚುವ ಮ್ಯೂಸಿಕ್ಕಿನಂತೆ ಸೊಳ್ಳೆಗಳು ಕಾಡತೊಡಗಿದವು ! ಇನ್ನೆಂತ ಮೆಡಿಟೇಶನ್ನು ?

ವಾಕಿಂಗಾದರೂ ಹೋಗೋಣವೆಂದು ರಸ್ತೆಗಿಳಿದೆ.

ವಿಕ್ರಮಾದಿತ್ಯನನ್ನು ಕಾಡಿಸಿದ ಬೇತಾಳನಂತೆ ಮತ್ತೆ ಕಾಡಿತು ! ಅದೇ ಪದ 'ಹೊಂಡಾಟ !' ಸಮಯ ಬೆಳಗಿನ ಜಾವ ಐದೂವರೆಯಿರಬಹುದು. ಹಿಂದಿನ ರಾತ್ರಿ ಧಾರಾಕಾರವಾಗಿ ಮಳೆ ಸುರಿದಿದ್ದು ರಸ್ತೆಗಳೆಲ್ಲಾ ತೋಯ್ದು ತೊಪ್ಪೆಯಾಗಿದ್ದವು ! ಪರಿಸರ ಸ್ವಚ್ಛವಾಗಿತ್ತು ! ವಾತಾವರಣ ಮನಸ್ಸಿಗೆ ಮುದ ನೀಡಿತು. ಇಂತಹ ಸ್ಥಿತಿಯಲ್ಲೂ ಈ ಹಾಳು 'ಹೊಂಡಾಟ' ನನ್ನ ತಲೆ ತಿನ್ನುತ್ತಿತ್ತು !

ಎಚ್ಚರಿಕೆಯಿಂದ ಹೊಂಡಾಟ ಪದವನ್ನು ಗಮನಿಸಿದೆ. ಇದನ್ನೇ ವಿಶ್ಲೇಷಿಸಿ ನೋಡೋಣ ಎನಿಸಿತು. ಹೊಂಡ ಮತ್ತು ಆಟ ಎಂಬ ಎರಡು ಪದಗಳು ಸೇರಿ ಸಂಧಿಯಾಗಿರುವುದು ಗೋಚರಿಸಿತು. ವ್ಯಾಕರಣ ಬೇರೆ ಶುರು ಮಾಡಿದನಲ್ಲಪ್ಪ ಎಂದು ಹೆದರಬೇಡಿ. ವ್ಯಾಕರಣದಲ್ಲಿ ನಾನು ಶುದ್ಧ ಶುಂಠಿ ! ಹಾ... ಹೊಂಡಾಟದಲ್ಲಿ ಮೊದಲನೆ ಪದ ಹೊಂಡ... ಎರಡನೆಯದು ಆಟ !

ಸ್ನಾನದ ತೊಟ್ಟಿಯಿಂದ ಎದ್ದು 'ಯುರೇಕಾ... ಯುರೇಕಾ...' ಎಂದು ಕೂಗುತ್ತಾ ರಸ್ತೆಯಲ್ಲಿ ಬೆತ್ತಲೆ ಓಡಿದ ಆರ್ಕಿಮಿಡೀಸನಂತೆ ಕಿರುಚುತ್ತಾ ಓಡಬೇಕೆನ್ನಿಸಿತು ! ಭಕ್ತನ ಮೇಲೆ ಕರುಣೆ ತೋರಿ ಇದ್ದಕ್ಕಿದ್ದಂತೆ ಪ್ರಕಟವಾಗುವ ಭಗವಂತನಂತೆ, ಹೊಂಡಾಟದ ಪೂರ್ಣದರ್ಶನ ನನಗಾಗಿತ್ತು !

ಹೊಂಡದಲ್ಲಿ ಆಡುವ ಆಟವೇ ಹೊಂಡಾಟ !

ಇದು ಜಪಾನೀ ಮೂಲದ ಪದವಲ್ಲ !

ಶುದ್ಧ ಕನ್ನಡ ಪದ !

ರಸ್ತೆಯನ್ನು ಹೊಸ ದೃಷ್ಟಿಯಿಂದ ಸಿಂಹಾವಲೋಕನ ಮಾಡಿದೆ. ವರ್ಷದ ಹಿಂದೆಯಷ್ಟೆ ಇದೇ ರಸ್ತೆಯನ್ನು ಡಾಂಬರು ಮಾಡಿದ್ದು ನೆನಪಾಯಿತು. ವರ್ಷದ ಹಿಂದೆ ಟಾರು ಹಾಕಿದ ರಸ್ತೆ ಇದೀಗ ಅಸಂಖ್ಯ ಹೊಂಡಗಳಿಂದ ರಾರಾಜಿಸುತ್ತಿತ್ತು ! ರಾತ್ರಿ ಸುರಿದ ಮಳೆಯಿಂದ ಹಲವು ಕಡೆಗಳಲ್ಲಿ ರಸ್ತೆ ಕಜ್ಜಿ ಹಿಡಿದಂತೆ ಕಂಡಿತು ! ಹೊಂಡಗಳೆಲ್ಲ ನೀರಿನಿಂದ ತುಂಬಿ ಪುಟ್ಟ ಪುಟ್ಟ ಸರೋವರಗಳಂತೆ ಕಂಡವು !

ರಸ್ತೆಯಲ್ಲಾಗಲೇ ಜನರ ಓಡಾಟ ಶುರುವಾಗಿತ್ತು. ಇಂಥವರಲ್ಲಿ ಮುಖ್ಯರಾದವರು ಪಡ್ಡೆ ಹುಡುಗ, ಹುಡುಗಿಯರು. ಉಪಾಧ್ಯಾಯರುಗಳ ಕಪ್ಪು ಹಣದ ಮೊತ್ತವನ್ನು ಹೆಚ್ಚಿಸುವ ಇಂದಿನ ಶಿಕ್ಷಣ ವ್ಯವಸ್ಥೆಯ ಪ್ರಮುಖರಾದ ವಿದ್ಯಾರ್ಥಿಗಳು ರಸ್ತೆಯಲ್ಲಿ ಉತ್ಸಾಹದಿಂದ ಪುಟಿದಾಡುತ್ತಿದ್ದರು. ಮನೆ ಪಾಠ ಮಾಡುವ ಉಪಾಧ್ಯಾಯರನ್ನು ಆಳತೆ ಮೀರಿದ ಶ್ರೀಮಂತರನ್ನಾಗಿ ಮಾಡುತ್ತಾ, ಪರ್ಯಾಯ ಶಿಕ್ಷಣ ವ್ಯವಸ್ಥೆಯನ್ನೇ ರೂಪಿಸಲು ಟ್ಯೂಷನ್ನಿಗೆ ಧಾವಿಸುತ್ತಿದ್ದರು. ಪಡ್ಡೆ ಹುಡುಗ, ಹುಡುಗಿಯರು, ಇವರುಗಳು ತಮ್ಮ ತಂದೆ-ತಾಯಿಯರನ್ನು ಪೀಡಿಸಿ, ಛೇಡಿಸಿ, ಕಾಡಿಸಿ, ಬೋಳಿಸಿ ತೆಗೆದುಕೊಂಡ ಲೂನಾ, ಕೈನೆಟಿಕ್, ಹೀರೋ ಪುಕ್ಕ, ಹೊಂಡಾ ಮುಂತಾದ ದ್ವಿಚಕ್ರಗಳಲ್ಲಿ ಹೊಂಡವನ್ನು ಮುಟ್ಟದೆ ಓಡಿಸಲು ಯಮ ಸಾಹಸ ಮಾಡುತ್ತಿದ್ದರು ! ಈ ಪ್ರಯತ್ನದಲ್ಲಿ ಸೋತು ಹೊಂಡದಲ್ಲಿ ಗಾಡಿ ಇಳಿದು ರಪ್ಪನೆ ನೀರನ್ನು ಸಿಡಿಸಿಕೊಳ್ಳುತ್ತಿದ್ದರು !

ಇದೇ ಹೊಂಡಾಟ !

ಅನಿವಾರ್ಯವಾದ ಆಟ ! ವಿಶ್ವದ ಉಳಿದೆಲ್ಲ ಆಟಗಳನ್ನು ಆಸಕ್ತಿಯಿದ್ದರೆ ಆಡಬಹುದು ! ಆದರೆ ಈ ಹೊಂಡಾಟವನ್ನು ಮಾತ್ರ ಇಷ್ಟವಿಲ್ಲದಿದ್ದರೂ ಆಡಲೇಬೇಕಾಗುತ್ತದೆ ! ಒಮ್ಮೆಲೇ ನನಗೆ ಈ ಆಟದ ಬಗೆಗೆ ಗೌರವ, ಕುತೂಹಲ ಉಂಟಾಯಿತು !

ವಿಶ್ವನ ಮಗ ಈ ಹೊಂಡಾಟಕ್ಕೆಂದೇ ಅಂದು ವಿಶಿಷ್ಟವಾದ ಉಡುಪು ತೊಟ್ಟು ಹೊರಟಿದ್ದು ! ನಾನು ಮಂತ್ರಮುಗ್ಧನಂತೆ ರಸ್ತೆಯನ್ನೂ ಅದರ ಮೈಯುದ್ದ ಹರಡಿದ್ದ ಅಸಂಖ್ಯ ಹೊಂಡಗಳನ್ನೂ ನೋಡುತ್ತ ಮೈ ಮರೆತೆ !

ಈ ರಸಮಯ ಸನ್ನಿವೇಶದಲ್ಲಿ ಹಿಂದಿನಿಂದ ಬಂದ ಕರ್ಕಶ ಹಾರನ್ನಿಗೆ ಬೆಚ್ಚಿ ತಿರುಗಿದೆ. ಒಂದು ಆಟೋ ನನ್ನಿಂದ ಕೆಲವೇ ಇಂಚುಗಳ ಅಂತರದಲ್ಲಿ ನಿಂತಿತ್ತು !

'ಹೇಳಿ ಬಂದಿದೀಯ ಮನೇಲಿ ?' ಆಟೋ ಚಾಲಕ ಕಣ್ಣು ಕೆಕ್ಕರಿಸಿ ಕೇಳಿದ.

'ಹೂ !' ವಿಚಲಿತನಾಗದೆ ಹೇಳಿದೆ.

'ಏನು ಮಷಾಣಕ್ಕೆ ಹೋಗ್ತೀನಂತಾನ ?'

'ಆಟೋ ಡಿಕ್ಕಿ ಹೊಡೀದೆ ಇದ್ರೆ ವಾಪಸ್ಸು ಬರ್ತೀನೀಂತ.'

'ಬಾಳಾ ದೊಡ್ಡ ಮನುಷ್ಯ... ಆಟೋಗೆ ಅಡ್ಡ ಬರೋದು ಅಲ್ಲದೆ ತಮಾಷೆ ಬೇರೆ...!' ಎಂದು ಬೈಯ್ಯುತ್ತಾ ಹೋದ ಆಟೋ ಚಾಲಕ.

ನಾನು ರಸ್ತೆಯ ಒಂದು ಬದಿಗೆ ಸರಿದು ರಸ್ತೆಯಲ್ಲಿ ತಮ್ಮ ವಿವಿಧ ರಂಗು-ರೂಪುಗಳಿಂದ, ಆಳ-ಅಳತೆಗಳಿಂದ ರಸ್ತೆಗೆ ಮೆರುಗು ನೀಡಿದ್ದ ಹೊಂಡಗಳನ್ನೂ, ಅವುಗಳಲ್ಲಿ ಗಾಡಿ ಇಳಿಸದೆ ತಪ್ಪಿಸಿಕೊಂಡು ರಸ್ತೆಯಲ್ಲಿ ವಾಹನ ಚಾಲನೆ ಮಾಡುತ್ತಾ ಹೊಂಡಾಟದಲ್ಲಿ ತೊಡಗಿದ್ದ ಸಾಹಸಿಗರನ್ನೂ ವೀಕ್ಷಿಸಿದೆ. ರೊಯ್ಯನೆ ವೇಗದಲ್ಲಿ ಬಂದು ಹೊಂಡ ಸಿಕ್ಕ ತಕ್ಷಣ ಚಾಲಕರು ಚಕ್ಕನೆ ಬ್ರೇಕು ಹಾಕುತ್ತಿದ್ದರು. ಆಗ ವಾಹನಗಳು ಮಾರಣಾಂತಿಕವಾಗಿ 'ಕೊಂಯ್ಯನೆ' ನರಳುತ್ತಿದ್ದವು; ಹೊಂಡದಿಂದ ಮೇಲೇಳುವಾಗ ಗುರ್ರೆಂದು ಗುರುಗುಟ್ಟುತ್ತಿದ್ದವು. ಒಬ್ಬಿಬ್ಬರು ಸಾಹಸಿಗರು ಯಾವ ಆಳತೆಯ ಹೊಂಡವಾದರೂ ಲೆಕ್ಕಿಸದೆ ಅವುಗಳ ಮೇಲೆಯೇ ವೇಗದಲ್ಲಿ ವಾಹನ ಓಡಿಸುತ್ತಿದ್ದರು. ಇನ್ನು ಕೆಲವರು ನಾಜೂಕಾಗಿ ಪ್ರತಿ ಹೊಂಡ ಸಿಕ್ಕಾಗಲೂ ವೇಗ ತಗ್ಗಿಸಿ ದೇವರಿಗೆ ಪ್ರದಕ್ಷಿಣೆ ಹಾಕುವಂತೆ ಹೊಂಡಗಳಿಗೆ ಅರೆ ಪ್ರದಕ್ಷಿಣೆ ಹಾಕಿ ಹೋಗುತ್ತಿದ್ದರು. ಈ ನಡುವೆ ಲಾರಿ ಮತ್ತು ಬಸ್ಸಿನವರು ಹೊಂಡಗಳ ಪರಿವೆಯೇ ಇಲ್ಲದೆ ಚಾಲನೆ ಮಾಡುತ್ತಿದ್ದರೆ ದೊಡ್ಡ ವಾಹನ ಹೊಂಡ ಇಳಿದಾಗ ಅನಾಮತ್ತಾಗಿ ಕೆಸರು ಸಿಂಚನವಾದವರು ವಾಚಾಮಗೋಚರವಾಗಿ ಚಾಲಕನನ್ನು ಬೈಯುತ್ತಿದ್ದರು.

ಆಕರ್ಷಕವಾದ, ವೈವಿಧ್ಯಮಯವಾದ ಹೊಂಡಾಟ ನೋಡುತ್ತಾ ನನ್ನಲ್ಲಿ ಅಭಿಮಾನ ಮೂಡಿತು ! ಈ ಹೊಂಡಗಳು ನಮ್ಮ ದೇಶದ 'ಹೆಮ್ಮೆಯ ಹೂ ಕುಂಡಗಳು !' ಎನಿಸಿತು. ಇಂಥ ಹೊಂಡಗಳು ಭಾರತ ಬಿಟ್ಟು ವಿಶ್ವದ ಇನ್ಯಾವುದೇ ಕಡೆ ಇರುವ ಉಲ್ಲೇಖ ನನಗೆ ಈವರೆಗೆ ಸಿಕ್ಕಿಲ್ಲ.

ಸ್ಥಳೀಯ ಮುನ್ಸಿಪಾಲಿಟಿ, ಕಾರ್ಪೊರೇಷನ್ನುಗಳಂತಹ ಆಡಳಿತ ವ್ಯವಸ್ಥೆಯ ದಿವ್ಯ ನಿರ್ಲಕ್ಷ್ಯವಿಲ್ಲದಿದ್ದರೆ ನಮಗೆ ಇಂಥ ಹೊಂಡಗಳನ್ನು ಕಾಣುವ ಸೌಭಾಗ್ಯ ಒದಗಿಬರುತ್ತಿರಲಿಲ್ಲ. ಇದಕ್ಕಾಗಿ ನಮ್ಮ ಆಡಳಿತ ವ್ಯವಸ್ಥೆಯನ್ನೂ, ಅದರ ಬೆನ್ನೆಲುಬಾದ ರಾಜಕೀಯ ವ್ಯವಸ್ಥೆಯನ್ನೂ, ಅದರ ನಾಯಕರನ್ನೂ ಎಷ್ಟು ಕೊಂಡಾಡಿದರೂ ಸಾಲದು ಎನ್ನಿಸಿತು. ಇನ್ನು ಕಂಟ್ರಾಕ್ಟುದಾರರ ಮಾತೇ ಬೇಡ.

ಇಂಥಾ ರಸ್ತೆಯಲ್ಲಿ ವಾಹನ ಚಾಲನೆ ಮಾಡುವವರಿಗೆ ಅತೀವ ಆತ್ಮ ವಿಶ್ವಾಸ, ಅಪಾರ ಸಂಯಮ, ಚಾಣಾಕ್ಷತನ ಮತ್ತು ಸಾಹಸ ಪ್ರವೃತ್ತಿ ತೀರಾ ಅವಶ್ಯಕ. ಈ ಹೊಂಡಾಟ ನಮ್ಮ ಯುವಜನರಲ್ಲಿ ಈ ಗುಣಗಳನ್ನು ಬೆಳೆಸುವುದರಲ್ಲಿ ಸಂದೇಹವೇ ಇಲ್ಲ. ಇದನ್ನು ಸಾಧ್ಯವಾದರೆ ನಮ್ಮ ರಾಷ್ಟ್ರೀಯ ಆಟವನ್ನಾಗಿ ಮಾಡಬೇಕು ! ಇದನ್ನು ಜನಪ್ರಿಯಗೊಳಿಸಲು ಅನೇಕ ರೀತಿಯಲ್ಲಿ ಪ್ರಚಾರಗಳನ್ನು ಮಾಡಬೇಕು ! ಸಾಧ್ಯವಾದರೆ ಅಂತರರಾಷ್ಟ್ರೀಯ ಮಟ್ಟದ ಹೊಂಡಾಟವನ್ನು ಹಮ್ಮಿಕೊಳ್ಳಬಹುದು. ಇದರಿಂದ ಎರಡು ರೀತಿಯ ಲಾಭವಾಗುವುದು. ಒಂದು, ಅಸಂಖ್ಯಾತ ವಿದೇಶೀಯರು ಬರುವುದರಿಂದ ನಮ್ಮ ವಿದೇಶೀ ವಿನಿಮಯ ವೃದ್ಧಿಸುವುದು. ಎರಡು, ಸ್ಥಳೀಯರಿಗೆ ಹೆಚ್ಚಿನ ಆದಾಯ ಪ್ರಾಪ್ತವಾಗಿ ಅವರ ಸ್ಥಿತಿಗತಿಗಳು ಉತ್ತಮವಾಗುತ್ತವೆ.

ಇಂಥಾ ದಿವ್ಯವಾದ ಆಲೋಚನೆಯಲ್ಲಿರುವಾಗ ಯಾರೋ ನನ್ನ ಮುಂದೆ ಬಂದು ನಿಂತುದು ಕಾಣಿಸಿತು. ರಸಾಭಾಸ ಮಾಡಿದ ದುರುಳನಾರು ಎಂದು ದುರದುರನೆ ನೋಡಿದಾಗ ನನ್ನ ಮಗ ಸ್ಕೂಟರನ್ನು ಗುರುಗುಟ್ಟಿಸುತ್ತಾ ನಿಂತಿದ್ದ.

'ಅಲ್ಲಪ್ಪಾ... ವಾಕಿಂಗಿಗೆ ಅಂತ ಹೋಗಿ ಗಂಟೆ ಮೇಲಾಯ್ತಲ್ಲಾಂತಾ ಹುಡುಕಿಕೊಂಡು ಬಂದರೆ ನನ್ನ ಮೇಲೆ ಗುರುಗುಟ್ಟುತ್ತೀಯಾ ? ನಿನ್ನ ವಿಕೃತಿ ವೀಕ್ಷಣೆ ಸಾಕು, ಹತ್ತು ಸ್ಕೂಟರು', ನಾನು ಬಾಯಿ ಬಿಡುವ ಮುಂಚೆ ಹೇಳಿದ.

ನಾನು ಗಡಿಯಾರ ನೋಡಿಕೊಂಡೆ. ಆಗಲೇ ಆರೂವರೆಯಾಗಿತ್ತು ! ಎಲಾ.... ನಾನು ಸುಮಾರು ಒಂದು ಗಂಟೆಯ ಕಾಲ ಈ ಹೊಂಡಾಟದ ವೀಕ್ಷಣೆಯಲ್ಲಿ ಮುಳುಗಿದ್ದೇನೆ ಎಂದು ಅಚ್ಚರಿಯಾಯಿತು !

ಮರುಮಾತಾಡದೆ ಸ್ಕೂಟರು ಹತ್ತಿದೆ. ಹತ್ತಿದವನು ಸುಮ್ಮನೆ ಕೂರುತ್ತೇನೆಯೇ.... ಹೊಂಡಾಟವನ್ನು ಅಂತರರಾಷ್ಟ್ರೀಯ ಆಟವನ್ನಾಗಿಸುವ ಕನಸು ಕಾಣುತ್ತಾ ನನ್ನ ಮಗನ ಹೊಂಡಾಟದ ಕೌಶಲವನ್ನು ವೀಕ್ಷಿಸತೊಡಗಿದೆ !

**ಎಸ್. ಜಿ. ಶಿವಶಂಕರ್**
ನಂ. ೫೧೭೭, ಹೆಚ್.ಟಿ. ಜೋಡಿ ರಸ್ತೆ, ವಿಜಯನಗರ ೨ನೇ ಹಂತ
ಮೈಸೂರು - ೫೭೦ ೦೧೭

ನನ್ನ ಕುರಿತು ನನ್ನಮ್ಮ ಯಾವಾಗಲೂ ಹೇಳುತ್ತಿರುತ್ತಾಳೆ - ''ಇವಳನ್ನು ಹಡೆಯುವಾಗ ಇವಳೊಬ್ಬಳನ್ನೇ ಹಡೆದಿಲ್ಲ. ಇವಳ ಅವಳಿಯಾಗಿ 'ಗಡಿಬಿಡಿ'ಯೂ ಹುಟ್ಟಿತು'' ಅಂತ. ಅದು ನಿಜವಿರಬಹುದೆಂದು ನನಗೆ ಬಹಳ ಸಲ ಅನಿಸಿದೆ. ಸಯಾಮಿ ಅವಳಿಗಳಂತೆ ನಾನು ಮತ್ತು 'ಗಡಿಬಿಡಿ' ಬೇರ್ಪಡಿಸಲಾಗದೆ ಜೊತೆಯಾಗಿ ಹುಟ್ಟಿಬಿಟ್ಟೆವು. ಚಮಚೆಯಲ್ಲಿ ಹಾಲು ಕುಡಿಯುವಾಗಲೇ ನಾನು ಗಡಿಬಿಡಿಯಿಂದ ಹಾಲನ್ನು ನುಂಗಿ ಹಾಲನ್ನು ನೆತ್ತಿಗೆ ಸೇರಿಸಿಕೊಂಡು ಒದ್ದಾಡಿದ್ದು ಎಷ್ಟೋ ಸಲವಂತ ಅಜ್ಜಿ ಹೇಳುತ್ತಿರುತ್ತಿದ್ದಳು. ಅಂಬೆಗಾಲಿಡದೆ ಒಂಬತ್ತು ತಿಂಗಳು ಮಣಯುತ್ತಿದ್ದಂತೆ ಹೆಜ್ಜೆ ಇಡಲು ಪ್ರಾರಂಭಿಸಿದ 'ಗಡಿಬಿಡಿಯ ಹುಡುಗಿ' ಇವಳು ಅಂತ ನನ್ನಜ್ಜ ಎಡವಿ ನಾನು ಬಿದ್ದಾಗಲೆಲ್ಲ ಹೇಳುತ್ತಿದ್ದ. ವರ್ಷ ತುಂಬುತ್ತಿದ್ದಂತೆ ಪಕ್ಕದ ಮನೆಗೂ ಹೋಗುವಷ್ಟು ಓಡಾಟ ಕಲಿತು ನಿತ್ಯ ಬಿದ್ದು ಹಣೆಯ ಮೇಲೊಂದು ಬೊಬ್ಬೆ ಖಾಯಂ ಗುರುತಾಗಿ ಇಟ್ಟುಕೊಳ್ಳುತ್ತಿದ್ದ ನನಗೆ ನನ್ನಮ್ಮ 'ಇಷ್ಟು ಗಡಿಬಿಡಿಯಲ್ಲಿ ನಡಿಗೆ ಕಲಿತು ಇವ್ಳು ಯಾವ ರಾಜ್ಯ ಆಳ್ಲಿಕ್ಕೆ ಹೋಗ್ಬೇಕೋ...' ಅನ್ನುತ್ತಿದ್ದಳು.

ಒಟ್ಟಾರೆ ಎಲ್ಲವನ್ನೂ ಗಡಿಬಿಡಿಯಲ್ಲಿಯೇ ಮಾಡಿಬಿಡುವ ಪ್ರವೃತ್ತಿ ನನ್ನ ಬೆನ್ನಿಗೆ ಅಂಟಿಕೊಂಡುಬಿಡ್ತು. ಚಿಕ್ಕವಳಿರುವಾಗ ನಾನು ನಡೆಯದೆ ಓಟವೇ ನಡಿಗೆಯಾಗಿತ್ತಂತೆ. ನನ್ನಮ್ಮನ ಮನೆಯ ಹೊರಬಾಗಿಲಿಗೆ ಮೂರು ಮೆಟ್ಟಿಲು ಇದೆ. ಯಾವತ್ತೂ ನಾನು ಕೆಳಗಿನ ಮೆಟ್ಟಿಲಿನಿಂದ ಮೂರನೇ ಮೆಟ್ಟಿಲಿಗೆ ಹಾರಿಯೇ ಮನೆ ಪ್ರವೇಶ ಮಾಡುತ್ತಿದ್ದೆ. ಮನೆಯಿಂದ ಹೊರ ಬೀಳುವಾಗಲೂ ಅಷ್ಟೆ, ಮೊದಲ ಮೆಟ್ಟಲಿನಿಂದ ಕೊನೆಯ ಮೆಟ್ಟಿಲಿಗೆ ಜಂಪ್ ಮಾಡಿಯೇ ಹೊರಬೀಳುತ್ತಿದ್ದೆ.

ನನಗಿನ್ನೂ ಸರಿಯಾಗಿ ನೆನಪಿದೆ. ಒಮ್ಮೆ ಹೀಗೆ 'ಹಾರುಗುಪ್ಪೆ ಹುಡುಗಿ'ಯಾಗಿದ್ದಾಗಲೇ ಕೊನೆಯ ಮೆಟ್ಟಲಿನ ಮೇಲೆ ಬಿಸಿಲು ಕಾಯಿಸುತ್ತ ಮಲಗಿದ ಪುಟ್ಟ ಬೆಕ್ಕಿನ ಮರಿಯ ಮೇಲೆ ನನ್ನ ಹೆಜ್ಜೆ ಬಿತ್ತು. ಮರಿ ಸತ್ತೇ ಹೋಯ್ತು ಅಂತಾಗಿತ್ತು. ಚೂರೂ ಅಲುಗಾಡದೆ ಬಿದ್ದಲ್ಲೆ ಬಿದ್ದ ಬೆಕ್ಕಿನ ಮರಿ ಕಂಡು ಪಾಪಭೀರು ಮನದವಳಾದ ನನಗೆ ಬೆಕ್ಕನ್ನು ಸಾಯಿಸಿದರೆ ಕೊಂದ ಪಾಪ ಕಾಶಿಗೆ ಹೋಗಿ ಚಿನ್ನದ ಬೆಕ್ಕನ್ನು ಮಾಡಿಸಿದರೂ ಹೋಗದು ಎನ್ನುತ್ತಿದ್ದ ಅಜ್ಜಿಯ ಮಾತನ್ನು ನೆನೆಸಿ ನನ್ನ ಇಡೀ ದೇಹ ನಡುಗತೊಡಗಿತ್ತು. ಮನೆ ಜನರೆಲ್ಲ 'ಹಾರುಗುಪ್ಪೆಯ ನಿನ್ನ ನಡಿಗೆಯಿಂದಲೇ ಮರಿ ಸತ್ತಿದ್ದು. ಸ್ವಲ್ಪ ನಿಧಾನವಾಗಿ ನಡೆಯಬಾರದಾ...' ಎಂದು ಬಯ್ಯತೊಡಗಿದರು. ನನ್ನ ಮೆಚ್ಚಿನ ಬೆಕ್ಕಿನ ಮರಿ ಸತ್ತ ದುಃಖದೊಂದಿಗೆ ಸುತ್ತಿಕೊಂಡ ನರಕದ ಪಾಪ.... ದೊಡ್ಡದಾಗಿ ಅಳುವೇ ಬಂದುಬಿಟ್ಟಿತು. ಆಯುರ್ವೇದ ವೈದ್ಯರಾದ ನನ್ನ ತಂದೆ ನೆನಪಿಗೆ ಬಂದ ಚಿಕಿತ್ಸೆಯನ್ನೆಲ್ಲಾ ಬೆಕ್ಕಿನ ಮರಿ ಮೇಲೆ ನಡೆಸಿ ಕೊನೆಗೆ ತನ್ನಲ್ಲಿದ್ದ... ಎಂದೋ ಮಧ್ಯರಾತ್ರಿ ಗ್ರಹಣದ ವೇಳೆಯಲ್ಲಿ ಜಪತಪ ಮಾಡಿ 'ಶಕ್ತಿ' ಪಡೆದುಕೊಂಡ ಚಿಟಿಕೆ ಮೃತ್ಯುಂಜಯ ಭಸ್ಮವನ್ನು ಬೆಕ್ಕಿನ ಮರಿಯ ಬಾಯಿಗೆ ಹಾಕಿ ಪ್ರಾಯಶಃ ತನ್ನ ಪುಣ್ಯವನ್ನೆಲ್ಲ ಧಾರೆ ಎರೆದನೇನೋ... ತುಸು ಹೊತ್ತಿನಲ್ಲಿ ಸತ್ತಂತಿದ್ದ ಮರಿ ಕಣ್ಣು ಬಿಟ್ಟು ಓಡಾಡಲು ಪ್ರಾರಂಭಿಸಿತು. ನಂತರದ ಒಂದೆರಡು ವಾರವೋ




# ಗಡಿಬಿಡಿಯ ಅವಾಂತರ

ತಿಂಗಳೋ ಹಾರುಗುಪ್ಪೆ ನಡಿಗೆಗೆ ತುಸು ವಿರಾಮ ಕೊಟ್ಟರೂ ನನಗಂಟಿದ ಗಡಿಬಿಡಿಯಿಂದ ಪುನಃ ಮೊದಲಿನ ಹುಡುಗಿಯೇ ಆಗಿಬಿಟ್ಟೆ.

ಪ್ರಾಥಮಿಕ ಶಾಲೆಗೆ ಹೋಗುವಾಗ – ಆಗ ನಾಲ್ಕೋ ಐದೋ ತರಗತಿಯಲ್ಲಿದ್ದೆ ಅನ್ನಿಸುತ್ತದೆ – ನಮ್ಮ ಶಾಲೆಯ ವಾರ್ಷಿಕೋತ್ಸವಕ್ಕೆ 'ಧ್ರುವ' ನಾಟಕ ಮಾಡುವುದು ಅಂತಾಯಿತು. ನಾಟಕದಲ್ಲಿ ನನ್ನದು ಸುರುಚಿಯ ಪಾತ್ರ. 'ಸುನೀತಿ' ಪಾತ್ರಧಾರಿ ನಮ್ಮನೆಯ ಪಕ್ಕದ ಮನೆಯ ಹುಡುಗಿಯಾಗಿದ್ದರಿಂದ ಬಿಡುವು ಸಿಕ್ಕಾಗಲೆಲ್ಲಾ ನಾವಿಬ್ಬರೂ ನಾಟಕದ ಸಂಭಾಷಣೆಯ ಪ್ರಾಕ್ಟಿಸ್ ಮಾಡುತ್ತಿದ್ದೆವು. ಸುನೀತಿ ಪಾತ್ರಧಾರಿಯ ಮಾತುಗಳೆಲ್ಲ ನನಗೆ ಕಂಠಪಾಠವಾದಂತೆ ನನ್ನ ಮಾತುಗಳೂ ಆಕೆಗೆ ಕಂಠಪಾಠವಾಗಿತ್ತು. ಸುನೀತಿಯ ಮಾತನ್ನೂ ನಾನೇ ಹೇಳಿ ಮುಗಿಸಿ ನನ್ನ ಮಾತುಗಳನ್ನು ಹೇಳುವ ಪದ್ಧತಿಯನ್ನು ಮನೆಯಲ್ಲಿ ಒಬ್ಬಳೇ ಇದ್ದಾಗ ಮಾಡತೊಡಗಿದ್ದೆ.

ವಾರ್ಷಿಕೋತ್ಸವ ಹತ್ತಿರ ಬಂದಿತ್ತು. ಅಪ್ಪ ನನಗಾಗಿ ಆ ಪಾತ್ರಕ್ಕೆ ಒಪ್ಪುವ ಹೊಸ ಸೀರೆಯನ್ನು ತಂದಿದ್ದರು. ಈಗಲೂ ಅಮ್ಮನ ಮನೆಯಲ್ಲಿ ಉಪ್ಪಿನಕಾಯಿ ಭರಣಿ ಮುಚ್ಚಳಕ್ಕೆ ಕಟ್ಟಿದ್ದ ಆ ಸೀರೆಯ ತುಂಡು ಕಂಡಾಗಲೆಲ್ಲ ನನಗೆ ನನ್ನ ಗಡಿಬಿಡಿ ಅವಾಂತರದ ಆ ಘಟನೆ ಕಣ್ಮುಂದೆ ಕಟ್ಟುತ್ತದೆ.

ಸರಿ, ನಾಟಕದ ದಿನ ಅಪ್ಪ ತಂದ ಹೊಸ ಸೀರೆಯುಟ್ಟು ವೇದಿಕೆಯ ಮೇಲಿದ್ದೆ. ಹೆಡ್‌ಮಾಸ್ತರರು ಕುಳಿತುಕೊಳ್ಳುವ

**ಜಯಾ ಯಾಜಿ. ಶಿರಾಲಿ**

ಕುರ್ಚಿ ವೇದಿಕೆಯ ಮೇಲಿಟ್ಟಿದ್ದರು. ಅದರ ಮೇಲೆ ಉತ್ಥಾನಪಾದ ರಾಜನಾದವ ಕುಳಿತಿದ್ದ. ಆತನ ತೊಡೆಯ ಮೇಲೆ 'ಧ್ರುವ' ಕುಳಿತಿದ್ದ. ಸುನೀತಿ ಮತ್ತು ಸುರುಚಿ ಪಾತ್ರಧಾರಿಗಳಾದ ನಾನು ಮತ್ತು ನನ್ನ ಗೆಳತಿ ರಾಜನ ಅಕ್ಕ-ಪಕ್ಕ ನಿಂತಿದ್ದೆವು. ನಾಟಕದ ತೆರೆ ಸರಿದೊಡನೆ ಗಡಿಬಿಡಿಯಲ್ಲಿ ನಾನು ನನ್ನ ಮಾತಿನ ಮೊದಲು ನುಡಿಯುವ ಸುನೀತಿಯ ಮಾತುಗಳನ್ನು ಹೇಳತೊಡಗಿದೆ. ಪರದೆಯ ಹಿಂದೆ ನಿಂತ ಮಾಸ್ತರರು ಎಷ್ಟು ಬಡಕೊಂಡರೂ ನನ್ನ ಮಾತುಗಳೆಲ್ಲ ಸುನೀತಿಯದೇ ಆಗಬೇಕೆ.... ಬುದ್ಧಿ ಉಪಯೋಗಿಸಿದ ಮಾಸ್ತರರು ತಕ್ಷಣ ಸುನೀತಿಯ ಜಾಗದಲ್ಲಿ ನನ್ನ ನಿಲ್ಲಿಸಿ ನನ್ನ ಜಾಗದಲ್ಲಿ ಸುನೀತಿ ಪಾತ್ರದವಳನ್ನು ನಿಲ್ಲಿಸಿ ಆಕೆಗೆ ಸುರುಚಿಯ ಮಾತುಗಳನ್ನು ನುಡಿಯಲು ಹೇಳಿದರು. ಆಗಲೂ ನಾನು ಸುರುಚಿಯ ಮಾತುಗಳನ್ನು ಹೇಳಿ ಸುನೀತಿ ಮಾತುಗಳನ್ನು ಹೇಳತೊಡಗಿ ಅವಾಂತರವಾಗಿಬಿಟ್ಟಿತು. ಹಾಗೆ ಹೇಳದಿದ್ದರೆ ನನಗೆ ಮುಂದಿನ ಮಾತುಗಳೇ ನೆನಪಿಗೆ ಬರುತ್ತಿರಲಿಲ್ಲವಲ್ಲ... ನಾಟಕ ಮುಂದುವರಿದು ಅಂದು ಮುಗಿಯಿತೇನೋ ನಿಜ. ಆದರೆ ನಂತರ ಮಾಸ್ತರರ ಹತ್ತಿರ ನಾನು ಸರಿಯಾಗಿ ಬಯ್ಸಿಕೊಂಡೆ. ಆ ಬಯ್ಗುಳು ನನಗೆ ಎಷ್ಟೊಂದು ತಾಗಿಬಿಟ್ಟವೆಂದರೆ ಅಂದಿನಿಂದ ವೇದಿಕೆ ಅಂದರೆ ವಧಾಸ್ಥಾನವಾಗಿಬಿಟ್ಟಿತು ನನಗೆ. ವೇದಿಕೆ ಅಲರ್ಜಿಯಾಗಿ ಅದರಿಂದ ದೂರವಾಗಿಬಿಟ್ಟೆ.

ಆದರೆ ಇಷ್ಟೆಲ್ಲಾ [illegible]

ತೆರೆ ಸರಿದೊಡನೆ ಗಡಿಬಿಡಿಯಲ್ಲಿ ನಾನೇ ಮೊದಲು ಹೂಮಾಲೆ ಹಾಕಿಬಿಟ್ಟೆ. ಸುತ್ತಲಿನವರು ನಕ್ಕಾಗಲೇ ನನ್ನ ಗಡಿಬಿಡಿ ಗಮನಕ್ಕೆ ಬಂದಿದ್ದು. ಹೀಗೆ ಹೆಜ್ಜೆ ಹೆಜ್ಜೆಯಲ್ಲೂ ನನ್ನ ಅವಳಿಯಾಗಿ ಹುಟ್ಟಿದ ಗಡಿಬಿಡಿ ನನ್ನನ್ನು ಆತಂಕದಲ್ಲಿ ನೂಕಿ ನಗುತ್ತಿತ್ತು. ಮನೆ ಜನ ಒಂದು ಕಣ್ಣು ನನ್ನ ಹಿಂದೆ ಇಡುವ ಪದ್ಧತಿ ಮೊದಲಿಂದ ನಡೆದುಬಂದಿತ್ತು.

ಗಡಿಬಿಡಿಯಲ್ಲಿಯೇ ಸಂಸಾರ ಸಾಗಿಸುವಾಗ ಎಷ್ಟೋ ಸಲ ಪಾಯಸಕ್ಕೆ ಒಗ್ಗರಣೆ ಹಾಕಿದ್ದೂ ಉಂಟು. ಕಾಫಿಗೆ ಉಪ್ಪು ಹಾಕಿದ್ದೂ ಉಂಟು... ತೊಟ್ಟಿಲಲ್ಲಿ ಮಗು ಮಲಗಿದ್ದಾಗಲೇ ಆಚೆ ಈಚೆ ಮನೆಯಲ್ಲಿ ಮಗುವಿನ ಹುಡುಕಾಟ ಮಾಡಿದ್ದೂ ಉಂಟು... ಇತ್ತೀಚೆಗೆ, ಬರೆಯುವ ಚಟ ಅಂಟಿದ ಮೇಲೆ, ನನ್ನ ವಿಳಾಸ ಬರೆಯದೆ ಬರಹಗಳನ್ನು ಪತ್ರಿಕೆಗೆ ಕಳಿಸಿ ಬರಬೇಕಿದ್ದ ಗೌರವ ಸಂಭಾವನೆ 'ಕೊಕ್' ಆಗಿದ್ದೂ ಉಂಟು. ಕೆಲವೊಮ್ಮೆ ಗಡಿಬಿಡಿಯಲ್ಲಿ ಸ್ಟಾಂಪ್ ಹಚ್ಚದೆ 'ಡ್ಯೂ' ಆಗಿ ನನ್ನ ವಿಳಾಸಕ್ಕೇ ಹಿಂತಿರುಗಿ ಬಂದಿದ್ದೂ ಉಂಟು....ಸ್ಟಾಂಪ್ ಹಚ್ಚಿ ವಿಳಾಸ ಬರೆಯದೇ ಕಳಿಸಿದ್ದೂ ಉಂಟು. ಓ, ಹೇಳಹೊರಟರೆ ಒಂದೇ ಎರಡೇ.... ಹೊರಹೋಗುವಾಗ ಗಡಿಬಿಡಿಯಲ್ಲಿ ಕಾಲಿಗೆ ಬೇರೆ ಬೇರೆ ಚಪ್ಪಲಿ ಹಾಕಿಕೊಂಡು ಹೊರಟಿದ್ದೂ ಉಂಟು....

ಇತ್ತೀಚೆಗೆ ಇನ್ನೊಂದು ಘಟನೆ ನಡೆಯಿತು. ಸ್ಥಳೀಯ ಕಾರ್ಯಕ್ರಮದ ಕವಿಗೋಷ್ಠಿಗೆ ಕವನ ವಾಚಿಸುವಂತೆ ಆಹ್ವಾನ ಬಂತು... ವೇದಿಕೆ ಎಂದರೆ ವಧಾಸ್ಥಾನ ನೆನಪಿಗೆ ಬರುವ ನಾನು ಇಂತಹ ಆಹ್ವಾನವನ್ನು ತಿರಸ್ಕರಿಸುವುದೇ ಜಾಸ್ತಿ... ಏನಾದರೂ ನೆವ ಹೇಳಿ ತಪ್ಪಿಸಿಕೊಳ್ಳುತ್ತಿದ್ದೆ. ಆದರೆ ಆ ದಿನ ಮಾತ್ರ ನನ್ನವರು ನನ್ನನ್ನು ವೇದಿಕೆಗೆ ಹತ್ತಿಸಲೇಬೇಕೆಂಬ ಹಟ ತೊಟ್ಟಿದ್ದರಿಂದ ಒಪ್ಪಿ ಹೊರಡುವುದೆಂದು ತೀರ್ಮಾನಿಸಿ ಓದಬೇಕಿದ್ದ ಕವನವನ್ನು ಬರೆದು ಕಾಗದವನ್ನೂ ನನ್ನ 'ವ್ಯಾನಿಟಿ' ಬ್ಯಾಗಿನಲ್ಲಿರಿಸಿಕೊಂಡೆ. ಹೊರಡುವಾಗ ನಾವು ದಿನಸಿ ಸಾಮಾನು ಕೊಳ್ಳುವ ಅಂಗಡಿ ದಾರಿಯಲ್ಲಿಯೇ ಸಿಗುವುದರಿಂದ ಮುಗಿದ ಸಾಮಾನಿನ ಹೆಸರು ಬರೆದ ಕಾಗದವನ್ನೂ ಅದೇ ಬ್ಯಾಗಿನಲ್ಲಿರಿಸಿಕೊಂಡು, ಹೋಗುವಾಗ ಅಂಗಡಿಯಲ್ಲಿ ಆ ಕಾಗದ ಕೊಟ್ಟು ಹೋದರೆ ಹಿಂತಿರುಗಿ ಬರುವಾಗ ಸಾಮಾನು ತಂದರಾಯ್ತೆಂದು ತೀರ್ಮಾನಿಸಿ ಹಾಗೇ ಮಾಡಿದೆ.

ಸರಿಯಾದ ವೇಳೆಯಲ್ಲಿ ಕವಿಗೋಷ್ಠಿ ಆರಂಭವಾಗಿ ಕವನ ವಾಚಿಸಲು ನನ್ನ ಹೆಸರು ಹೇಳಿದೊಡನೆ ವೇದಿಕೆ ಏರಿದೆ. ಮೈಕಿನ ಮುಂದೆ ನಿಂತು ಕೈಯಲ್ಲಿದ್ದ ಕವನದ ಕಾಗದ ಬಿಡಿಸಿ ಓದಬೇಕೆಂದರೆ ಕಂಡಿದ್ದೇನು... ಜೀರಿಗೆ ೧೦೦ ಗ್ರಾಂ, ಕೊತ್ತಂಬರಿ ೨೫೦ ಗ್ರಾಂ, ಮೆಣಸು ಕಾಲು ಕೆ.ಜಿ., ಸಾಸಿವೆ ೧೦೦ ಗ್ರಾಂ... ಓ ದೇವ್ರೇ ಏನಾಗಿಬಿಟ್ಟಿದೆ... ಹಿಂದಿನ ಘಟನೆ ನೆನಪಾಗಿ ವೇದಿಕೆ ವಧಾಸ್ಥಾನದಂತೆ ಕಂಡು ನಾಲಿಗೆಯ ದ್ರವ ಆರುತ್ತಿದ್ದಂತೆ ಎದುರು ಪ್ರೇಕ್ಷಕರ ನಡುವೆ ಕುಳಿತ ನನ್ನವರ ಮುಖ ನೋಡಿದೆ. ಮುಖದಲ್ಲಿಯೇ ಅವರು 'ಸಾರಿ ಕಣೆ, ನಿನ್ನ ಗಡಿಬಿಡಿಯ ಪ್ರವೃತ್ತಿ ಗೊತ್ತಿದ್ದೂ ನಿನ್ನನ್ನು ವೇದಿಕೆ ಹತ್ತಿಸಿಬಿಟ್ಟೆ, ಹೇಗಾದರೂ ಮಾನ ಕಾಪಾಡು' ಎನ್ನುತ್ತಿದ್ದರೆನಿಸಿತು. ಅವಾಂತರ ಆಗುವುದರೊಳಗೆ ಬಾಯಿಗೇ ಬರುತ್ತಿದ್ದ ನನ್ನ ಕವನವೊಂದನ್ನು ವಾಚಿಸಿ ಇಳಿದುಬಂದೆ.

ವೇದಿಕೆ ನನಗೆ ಅಲರ್ಜಿಯಾಗಿರುವ ನನ್ನನ್ನು ಹಟ ಹಿಡಿದು ವೇದಿಕೆ ಹತ್ತಿಸಿದ ಬಗ್ಗೆ ಮನೆಗೆ ಬಂದು ನನ್ನವರಿಗೆ ಸರಿಯಾಗಿ ದಬಾಯಿಸಿದೆ. ಮತ್ತೆಂದೂ ಇವರು ಆ ಸಾಹಸ ಮಾಡಲು ಹೊರಡಲಿಲ್ಲ. ಆ ದಿನ ಗಡಿಬಿಡಿಯಲ್ಲಿ ಆದ ನನ್ನ ಅವಾಂತರ ಕೇಳಿದ ನನ್ನ ಕಿರಿಮಗ 'ಅಮ್ಮಾ ನೀನು ಆ ಸಾಮಾನು ಬರೆದ ಕಾಗದವನ್ನೇ ಹಿಡಿದು

'ಜೀರಿSS

ಗೆ, ಕೊತ್ತಂಬ

ರಿ; ಮೆಣ

ಸು, ಸಾಸಿವೆ....' ಅಂತ ಓದಿದ್ದರೆ ಸಾಕಿತ್ತು. ಅದೊಂದು ನವ್ಯದಲ್ಲಿ ನವ್ಯ ಕಾವ್ಯವಾಗುತ್ತಿತ್ತು. ಯಾರಿಗೂ ನಿನ್ನ ಅವಾಂತರವೇ ಗೊತ್ತಾಗುತ್ತಿರಲಿಲ್ಲ,' ಎಂದ.

ಈಗ ಗಡಿಬಿಡಿಯ ಅವಾಂತರಗಳಿಗೆ ತಲೆ ಕೆಡಿಸಿಕೊಳ್ಳುವುದನ್ನು ಬಿಟ್ಟು ಅದರೊಂದಿಗೆ ಹೊಂದಿಕೊಂಡು ಇದೊಂದು ತರದ 'ಮಜಾ' ಎಂದುಕೊಂಡು 'ಎಂಜಾಯ್' ಮಾಡಲು ಕಲಿತಿರುವೆ. ಇದೇ ಸರಿ ದಾರಿ ತಾನೆ ?...


**ಜಯಾ ಯಾಜಿ. ಶಿರಾಲಿ**

೧೨೦, ಎಂ.ಐ.ಜಿ. ೧, ೩ನೇ ಮೇನ್ ,

ಹೌಸಿಂಗ್ ಬೋರ್ಡ್, ಜ್ಯೋತಿನಗರ

ಚಿಕ್ಕಮಗಳೂರು - ೫೭೭ ೧೦೨

# ಆಯ್ಕೆ



ಶಂಕರ ತಲ್ಲೂರ

"ಸುರೇಶ್ ಕುಲಕರ್ಣಿ".. "ಎಸ್ ಸರ್"

"ವೀರೇಶ್ ತಾಳಿಕೋಟಿ".. "ಎಸ್ ಸರ್"

"ಪ್ರಕಾಶ್ ಜೋರಾಪೂರ".. "ಪ್ರೆಸೆಂಟ್ ಸರ್"

"ಪ್ರೀತಿ ಪಾಟೀಲ".. "ಎಸ್ ಸರ್"

"ಶೀಲಾ ದೇಸಾಯಿ"... ...

ಯಾವುದೋ ಯೋಚನೆಯಲ್ಲಿ ಮುಳುಗಿದ ಶೀಲಾಳಿಗೆ ತನ್ನ ಹೆಸರನ್ನು ಕೂಗಿದ್ದು ತಿಳಿಯಲಿಲ್ಲ.

'ಶೀಲಾ ದೇಸಾಯಿ' ಎಂದು ಮತ್ತೆ ಕರೆದರು ಪ್ರೊ॥ ಶ್ರೀಕಾಂತ. ಧಡಪಡಿಸಿ ಎದ್ದು 'ಎಸ್ ಸರ್' ಎಂದಳು ಶೀಲಾ. ತಲೆ ಎತ್ತಿ ನೋಡಿದರು ಪ್ರೊಫೆಸರ್. ಸಮಾಜಶಾಸ್ತ್ರದ ಪ್ರೊಫೆಸರ್ ಶ್ರೀಕಾಂತ ಎಲ್ಲ ವಿದ್ಯಾರ್ಥಿಗಳ ಪರಿಚಯ ಮಾಡಿಕೊಳ್ಳುವ ಉದ್ದೇಶದಿಂದ ಅವರವರ ಹೆಸರು ಹಿಡಿದು ಕರೆದು ಹಾಜರಿ ತೆಗೆದುಕೊಳ್ಳುತ್ತಿದ್ದರು. ಮೊದಲನೆ ಬಿ.ಎ. ಕ್ಲಾಸಿನಲ್ಲಿ ಬರಿ ಇಪ್ಪತ್ತೇ ಜನ ವಿದ್ಯಾರ್ಥಿಗಳು ಇದ್ದದ್ದರಿಂದ ಹೆಸರಿನಿಂದ ಕರೆಯುವುದು ಸಾಧ್ಯವಾಗುತ್ತಿತ್ತು.

ತನ್ನ ಹೆಸರನ್ನು ಕರೆದಾಗ ತನ್ನ ಅನ್ಯಮನಸ್ಕತೆಯಿಂದ ಹಾಜರಿ ಕೊಡಲು ತಡವಾದುದಕ್ಕೆ ಮುಜುಗರವಾಯಿತು ಶೀಲಾಳಿಗೆ. ಇನ್ನೆಷ್ಟು ದಿನ ತಾನು ತನ್ನ ದುಃಖದಲ್ಲೇ ಮುಳುಗಿರಬೇಕು ? ತನ್ನೆಲ್ಲ ಕಷ್ಟ ಕೋಟಲೆ, ದುಃಖ ದುಮ್ಮಾನಗಳನ್ನು ಗಂಡನ ಮನೆಯಲ್ಲೇ ಬಿಟ್ಟು ಬಂದಿರುವೆನೆಂದು ಕೊಂಡರೂ ಅಲ್ಲಿಯ ನೆನಪುಗಳು ಬೆಂಬತ್ತಿ ಕಾಡುತ್ತಿವೆ. ತನ್ನ ಜೀವನೋತ್ಸಾಹವನ್ನು ಹಿಂಡಿ ಹಿಪ್ಪೆ ಮಾಡುತ್ತಿವೆ. ಧೈರ್ಯದಿಂದ ತಾನಿಡುತ್ತಿರುವ ಹೆಜ್ಜೆಗಳನ್ನು ಹಿಮ್ಮೆಟ್ಟಿಸುತ್ತಿವೆ ಎಂದೆನ್ನಿಸಿತು. ಆದರೂ ಅಧ್ಯಯನದಲ್ಲಿ ತನ್ನ ದುಃಖವನ್ನು, ಹಿಂದಿನ ಜೀವನವನ್ನು ಮರೆಯಬೇಕೆಂದುಕೊಂಡಳು ಶೀಲಾ. ಅತ್ತೆಯ ಮನೆಯಲ್ಲಿ ತಾನು ಕಳೆದ ಒಂದೆರಡು ವರುಷಗಳ ಅನುಭವ ಶೀಲಾಳಿಗೆ ಸುಖ ದುಃಖಗಳ ಮಿಶ್ರಣವಾಗಿತ್ತು.

*  *  *

"ಬಂದ ವರ್ಷದಲ್ಲೇ ನನ್ನ ಮಗನನ್ನು ತಿಂದೆಯಲ್ಲೆ" ಎಂದು ಮೂದಲಿಸಿದ್ದರು ಸಾವಿತ್ರಮ್ಮ ಅಂದು ಮುಂಜಾನೆ ಎದ್ದೊಡನೆ. ಅಪಾರ ದುಃಖದಲ್ಲೂ ಧೈರ್ಯ ಒಗ್ಗೂಡಿಸಿಕೊಂಡು ಶಾಂತಗೊಳ್ಳಲು ಪರದಾಡುತ್ತಿದ್ದ ಶೀಲಾಳ ಮನ ಮತ್ತೆ ಕಲಕಲ್ಪಟ್ಟಿತ್ತು.

'ಎಳೆ ವಯಸ್ಸಿನಲ್ಲೇ ತನ್ನ ಸುಖದ ಕ್ಷಣಗಳು ಕಳೆದುಹೋದವೆ ? ಜೀವನದ ಕೊನೆಯವರೆಗೆ ನನ್ನ ಬಾಳು ಬರಡೇ ಆಯಿತೇ ?' ಎಂದು ಚಿಂತಿಸಿ ಚಿಂತಿಸಿ ಹೈರಾಣಾದಳು. ಮನೆಗೆಲಸದಲ್ಲಿ ತನ್ನನ್ನು ತಾ ತೊಡಗಿಸಿಕೊಳ್ಳುತ್ತಿದ್ದಳು. ಮೈಮುರಿ ದುಡಿದು ಮನೆಯನ್ನು ಚೊಕ್ಕಟವಾಗಿಡುತ್ತಿದ್ದಳು. ಅತ್ತೆಗೆ ಯಾವ ಕೆಲಸವನ್ನೂ ಹಚ್ಚುತ್ತಿರಲಿಲ್ಲ. ತಮ್ಮ ಮಗನ ಮರಣದಿಂದ ದುಃಖಕ್ಕೀಡಾದ ಜೀವ ಹೌದು ಖರೆ, ಆದರೂ ತನ್ನ ದುಃಖವೇನು ಅವರದಕ್ಕಿಂತ ಕಡಿಮೆಯದೆ? ಹಾಗೆ ನೋಡಿದರೆ ಶ್ರೀಧರನ ಸಾವಿನಿಂದ ಹೆಚ್ಚು ಘಾಸಿಗೊಳಗಾದವಳು ತಾನೇ ಅಲ್ಲವೇ? 'ಶ್ರೀಧರನ ಸಾವಿಗೆ ತಾನೇ ಕಾರಣವೇನೋ' ಎಂಬಂತೆ ಇದೆ ಅತ್ತೆಯ ನಿಲುವು. ಪ್ರೀತಿಯ ಪತಿ ಶ್ರೀಧರನ ನೆನಪು ಒತ್ತರಿಸಿ ಬರುತ್ತಿತ್ತು. ಪಿ.ಯು.ಸಿ. ದ್ವಿತೀಯ ವರ್ಷದಲ್ಲಿ ಉತ್ತಮ ಅಂಕ ಪಡೆದು ಪಾಸಾದ ತಾನು ಬಿ.ಎ.ಗೆ ಹೆಸರು ಹಚ್ಚಬೇಕೆಂದಾಗ ಶ್ರೀಧರನೊಡನೆ ತನ್ನ ಮದುವೆ ನಿಶ್ಚಿತವಾದ್ದು. ಆಗ ಶೀಲಾಳ ಓದು ಅರ್ಧಕ್ಕೆ ನಿಂತು ಪಕ್ಕಾ ಗೃಹಿಣಿಯಾದಳು. ಶ್ರೀಧರನ ಒಲವಿನ ಅಲೆಯಲ್ಲಿ ತೇಲಿಹೋಗಿದ್ದಳು. ಅವನ ಹಿಂದೆ ಸ್ಕೂಟರ ಮೇಲೆ ಕುಳಿತು ಅಲೆದದ್ದೇ ಅಲೆದದ್ದು. ಅವರು ನೋಡದ ಸಿನೆಮಾಗಳಿರಲಿಲ್ಲ, ಭೆಟ್ಟಿ ನೀಡದ ಹೊಟೇಲುಗಳಿರಲಿಲ್ಲ. ಮನೆಯ ಹೊರಗೆ ಪತಿಯ ಪ್ರೀತಿಯ ಪೂರದಲ್ಲಿ ಮೈಮರೆತರೂ ಮನೆಗೆ ಬಂದೊಡನೆ ಮತ್ತೆ ಮನೆಗೆಲಸದಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಿದ್ದಳು. ಅತ್ತೆ ಮಾವಂದಿರಿಗೆ ಯಾವುದೇ ತಕರಾರು ಬರದಂತೆ ನೋಡಿಕೊಳ್ಳುತ್ತಿದ್ದಳು... ರಾತ್ರಿ ಉಂಡು ಮಲಗಲು ಹೋಗುವವರೆಗೆ ಮೈಮುರಿ ದುಡಿಯುತ್ತಿದ್ದಳು. ಬಡತನದಲ್ಲೇ ಬೆಳೆದ ಶೀಲಾಳಿಗೆ ಮನೆಗೆಲಸ ಎಂದೂ ತ್ರಾಸದಾಯಕವೆನಿಸುತ್ತಿರಲಿಲ್ಲ.

ಆದರೆ..... ಆ ದುರ್ದಿನದಂದು ಶ್ರೀಧರ ಸ್ಕೂಟರ್ ಅಪಘಾತದಲ್ಲಿ ಮೃತನಾದಾಗ ಶೀಲಾಳ ಬಾಳು ಬರಡಾಗಿತ್ತು. ಎಳೆವೆಯಲ್ಲೇ, ಜಗದ ಬೆಳಕಿಗೆ ಪೂರ್ಣ ಕಣ್ಣು ತೆರೆಯುವ ಮೊದಲೇ, ಅವಳ ಜೀವನದಲ್ಲಿ ಕತ್ತಲೆ ಆವರಿಸಿತ್ತು..... ದುಃಖ ಮರೆಯಲು ದುಡಿತವೊಂದೇ ಹಾದಿ ಎಂದು ಮನಗಂಡ ಶೀಲಾ ಎಷ್ಟೇ ದುಡಿದರೂ ಅತ್ತೆಯ ಚುಚ್ಚು ಮಾತಿನಿಂದ ಮತ್ತೆ ಕಲ್ಲಾಗುತ್ತಿದ್ದಳು. ಮಾವ ಒಳ್ಳೆಯವರಾದರೂ ಅವರದೇನೂ ನಡೆಯುತ್ತಿರಲಿಲ್ಲ. ಅತ್ತೆಯ ಬಾಯಿಗೆ ಹೆದರಿ ಸುಮ್ಮನಿರುತ್ತಿದ್ದರು. ತಾನು ವಿಧವೆಯ ಪಟ್ಟ ಹೊತ್ತು ವರುಷ ಕಳೆದರೂ ಶೀಲಾ ಮನೆಯ ಹೊಸಲು ದಾಟಿರಲಿಲ್ಲ. ಬಾಗಿಲಿಗೆ ಬಂದು ನಿಂತರೂ ಅತ್ತೆಗೆ ಸಹಿಸಲಾಗುತ್ತಿರಲಿಲ್ಲ.... ಕತೆ, ಕಾದಂಬರಿ ಅಥವಾ ಯಾವುದೇ ಪತ್ರಿಕೆ ಓದುತ್ತ ಕುಳಿತಿದ್ದರಂತೂ ಅತ್ತೆಗೆ ಸಿಟ್ಟು ಬೆಂಕಿ.

ತಾನು ಮದುವೆಯಾಗಿ ಬಂದಾಗ, ಗಿಡ್ಡ ಚಡ್ಡಿಯ ಒಂಬತ್ತನೆ ಕ್ಲಾಸಿನ ಸ್ಕೂಲ್ ಬಾಲಕನಾಗಿದ್ದ ಮೈದುನ ಪ್ರಕಾಶ ಈಗ ಕಾಲೇಜಿಗೆ ಹೋಗತೊಡಗಿದ್ದ. ಅವಳಷ್ಟೇ ಎತ್ತರ ಬೆಳೆದುಬಿಟ್ಟಿದ್ದ. ಸುಖದುಃಖ ಹಂಚಿಕೊಂಡು ಮನಬಿಚ್ಚಿ ಮಾತನಾಡುತ್ತಿದ್ದ.

"ನೀವು ಏಕೆ ಪುಸ್ತಕ ಓದಿ ಮನಸ್ಸು ಹಗುರಗೊಳಿಸಿಕೊಳ್ಳಬಾರದು, ಉತ್ತಮ ಪುಸ್ತಕಗಳು ನಮ್ಮ ಒಳ್ಳೆಯ ಸಂಗಾತಿಗಳು" ಎಂದಾಗ,

"ಎಲ್ಲಿ ಆಗತೈತಪ್ಪ, ಮನೆಗೆಲಸದಲ್ಲಿ ವೇಳೇನss ಸಿಗೋದಿಲ್ಲ. ನಾನದನ್ನೆಲ್ಲ ಓದಿ ಏನಾಗಬೇಕಾಗಿದೆ ?" ಎಂದು ಹಾರಿಕೆಯ ಉತ್ತರ ಕೊಟ್ಟರೂ ಬಿಡದೆ ಕಾರಂತ, ಚಿತ್ತಾಲ, ಭೈರಪ್ಪ ಅವರ ಕಾದಂಬರಿಗಳನ್ನು ಕಾಲೇಜು ಲೈಬ್ರರಿಯಿಂದ ತಂದು ಕೊಡುತ್ತಿದ್ದ. ಪ್ರಕಾಶನ ಸಾನ್ನಿಧ್ಯ ಶೀಲಾಳಿಗೆ ತುಸು ನೆಮ್ಮದಿ ತರುತ್ತಿತ್ತು. ಅದೂ ಅತ್ತೆಯ ನೋಟಕ್ಕೆ, ಅಪಾರ್ಥಕ್ಕೆ ಎಡೆಮಾಡಿಕೊಟ್ಟಿತ್ತು.

"ಅಲ್ಲೇ...... ದೊಡ್ಡ ಮಗನನ್ನಂತೂ ನುಂಗಿ ನೀರ ಕುಡಿದಿ..... ಇನ್ನ ಸಣ್ಣವನನ್ನೂ ಹಳ್ಳಾ ಕೂಡಿಸಬೇಕಂತ ಮಾಡೀದಿಏನ ?" ಎಂದು ಮಾತಿನ ಮೊನಚಿನಿಂದ ತಿವಿದರು. ಪ್ರಕಾಶ ಕಾಲೇಜಿನಿಂದ ಬಂದಮೇಲೆ ಅವನಿಗೂ ಕಟ್ಟುನಿಟ್ಟಿನ ಎಚ್ಚರಕೊಟ್ಟರು. ಅಂದೆ ರಾತ್ರಿಯೆಲ್ಲಾ ವಿಚಾರ ಮಾಡಿ ಮಾಡಿ ಒಂದು ನಿರ್ಧಾರಕ್ಕೆ ಬಂದಳು ಶೀಲಾ. ಬೆಳಿಗ್ಗೆ ಎಲ್ಲರೂ ಏಳುವ ಮೊದಲೇ ಮಾವನ ಟೇಬಲ್ ಮೇಲೊಂದು ಪತ್ರ ಬರೆದಿಟ್ಟು ತವರಿಗೆ ಹೊರಟೆದ್ದು ಬಂದಳು. ತಂದೆ ತಾಯಿಯ ಊರುಗೋಲಾಗಿ ನಿಂತು ತನ್ನ ಕಾಲೇಜು ಶಿಕ್ಷಣವನ್ನು ಮುಂದುವರೆಸಿದಳು. 'ತನ್ನ ಬಾಳನ್ನು ಬರಡಾಗಿಸಬಾರದು, ಅದಕ್ಕೊಂದು ಅರ್ಥಕಂಡುಕೊಳ್ಳಬೇಕು' ಎಂಬ ಯೋಚನೆಯ ಆಳದಲ್ಲಿ ಮುಳುಗಿದ್ದಳು.

*  *  *

ಹಾಜರಿ ತೆಗೆದುಕೊಳ್ಳುವುದನ್ನು ಮುಗಿಸಿ ಪ್ರೊ॥ ಶ್ರೀಕಾಂತ 'ಸಾಮಾಜಿಕ ಅನಿಷ್ಟ'ಗಳ ಬಗ್ಗೆ ತಮ್ಮ ಪಾಠ ಮುಂದುವರಿಸಿದ್ದರು. ಪಾಠ ಒಂದು ಮಹತ್ವದ ಘಟ್ಟಕ್ಕೆ ಬಂದಿತ್ತು... ವಿದ್ಯಾರ್ಥಿಗಳು ತಮ್ಮ ಕಲಿಸುವಿಕೆಯ ಬಗ್ಗೆ ಹೇಗೆ ಪ್ರತಿಕ್ರಿಯಿಸುತ್ತಿದ್ದಾರೆ ಎಂದು ಸುತ್ತ ಕಣ್ಣು ಹಾಯಿಸಿದಾಗ.... ಶೀಲಾ ಯಾವುದೋ ಯೋಚನಾಲಹರಿಯಲ್ಲಿ ಮುಳುಗಿದ್ದನ್ನು ಕಂಡು

ಬೇಜಾರಾಗಿ ಅವಳನ್ನು ಎಚ್ಚರಿಸಿದ್ದರು; ''ಏನು ಶೀಲಾ, ನಿದ್ದೆ ಮಾಡುತ್ತಿದ್ದೀರಾ ? ನೋಡಿ, ನಿಮಗೆ ಪಾಠ ಬೇಜಾರಾಗಿದ್ದರೆ ಎದ್ದುಹೋಗಬಹುದು.''

ಶೀಲಾ ತನ್ನ ಯೋಚನಾಲಹರಿಯಿಂದ ಎಚ್ಚೆತ್ತು ಪಾಠವನ್ನು ಗಮನಕೊಟ್ಟು ಕೇಳತೊಡಗಿದಳು. ಶ್ರೀಕಾಂತ ಯಾಂತ್ರಿಕವಾಗಿ ಪಾಠ ಹೇಳುತ್ತಿದ್ದರೂ ಅವರ ಲಕ್ಷ್ಯ ಮತ್ತೆ ಮತ್ತೆ ಶೀಲಾಳತ್ತ ಹೋಗುತ್ತಿತ್ತು. ಮನದೊಳಗೇ ಅವರು ಅವಳ ಬಗ್ಗೆ ವಿಚಾರಕ್ಕೆ ತೊಡಗಿದರು. 'ಬರಿ ಹಣೆಯ, ಬರಿಗೊರಳಿನ, ಬರಿಗೈಯ, ಬಿಳಿ ಸೀರೆಯ ಈ ಸೌಮ್ಯ ಮುಖದ ಚೆಲುವೆ ಯಾರು ? ದುಃಖ ಅವಳ ಮುಖದಲ್ಲಿ ಹೆಪ್ಪುಗಟ್ಟಿದ್ದರೂ ಉತ್ಸಾಹ ಬತ್ತಿಲ್ಲ' ಎಂದೆನ್ನಿಸಿತು ಪ್ರೊಫೆಸರಿಗೆ. 'ಜೀವನದಲ್ಲಿ ಬಲು ನೊಂದ ಜೀವ ಇರಬೇಕು' ಎಂದು ಒಂದು ರೀತಿಯ ಸಹಾನುಭೂತಿ ಉಂಟಾಯಿತು ಅವರಿಗೆ. ಆದರೂ ಅದನ್ನು ತೋರಗೊಡದೆ ಪಾಠ ಮುಗಿಸಿ ಹೋಗುವಾಗ ''ಶೀಲಾ, ನಿಮಗೆ ಪಾಠದಲ್ಲಿ ಲಕ್ಷ್ಯವಿಲ್ಲ. ನೀವು ಸ್ಟಾಫ್ ರೂಮಿಗೆ ಬಂದು ನನ್ನನ್ನು ಕಾಣಿ'' ಎಂದರು.

ತನ್ನ ಅನ್ಯಮನಸ್ಕತೆಗಾಗಿ ತನ್ನ ಮೇಲೆ ಸಿಟ್ಟು ಬಂದಿತು ಶೀಲಾಳಿಗೆ. ಇನ್ನೂ ಏನೇನು ಕಾದಿದೆಯೋ ಎಂದು ಅಂಜುತ್ತ ಮಧ್ಯಂತರ ಅವಧಿಯಲ್ಲಿ ಸ್ಟಾಫ್ ರೂಮಿಗೆ ಹೋಗಿ ಯಾವುದೋ ಪುಸ್ತಕ ಓದುವುದರಲ್ಲಿ ಮಗ್ನರಾಗಿದ್ದ ಪ್ರೊಫೆಸರರನ್ನು ಕಂಡಳು.

''ನಮಸ್ಕಾರ ಸಾರ್, ನಾನು ಶೀಲ, ನೀವು ಕಾಣಲು ಹೇಳಿದ್ದಿರಿ'' ಎಂದಳು ಡವಗುಡುವ ಎದೆಯನ್ನು ಪುಸ್ತಕದ ಭಾರದಿಂದ ಒತ್ತಿಹಿಡಿದು.

''ನೋಡಿ ಶೀಲಾ, ನೀವು ಬಹಳ ದುಃಖಿತರಂತೆ ಕಾಣುತ್ತೀರಿ, ನಿಜ, ಆದರೆ ತರಗತಿಯಲ್ಲಿ ನೀವು ಪಾಠದ ಕಡೆಗೆ ಲಕ್ಷ್ಯ ಕೊಡಬೇಕು. ವಿದ್ಯಾರ್ಥಿಗಳ ಅನ್ಯಮನಸ್ಕತೆಯಿಂದ ಪಾಠ ಹೇಳುವ ಪ್ರಾಧ್ಯಾಪಕರಿಗೂ ಉತ್ಸಾಹ ಬರುವುದಿಲ್ಲ. ನಿಮಗೆ ಪಾಠ ತಿಳಿಯದಿದ್ದರೆ ಕೇಳಿ, ಬೇಡವೆನ್ನುವುದಿಲ್ಲ'' ಎಂದರು ಪ್ರೊಫೆಸರ್. ತಮ್ಮ ಮಾತಿನಲ್ಲಿ ಸಾಧ್ಯವಾದಷ್ಟು ಮೃದುತ್ವವನ್ನು ತರಲು ಪ್ರಯತ್ನಿಸಿದರೂ ಪ್ರೊಫೆಸರ್‌ಗಿರಿಯ ಗತ್ತಿನಿಂದ ಮಾತು ತುಸು ಬಿರುಸೇ ಆಯಿತು.

''ಆಯಿತು ಸರ್, ಇನ್ನು ಮುಂದೆ ಎಚ್ಚರಿಕೆ ವಹಿಸುವೆ'' ಎಂದು ಹೇಳಿ ಹೊರಬಂದಳು ಶೀಲಾ.

* * *

ಶ್ರೀಕಾಂತ ಮೊದಲನೆ ಬಿ.ಎ. ಕ್ಲಾಸಿಗೆ ಬಂದಾಗಲೆಲ್ಲ ಶೀಲಾಳತ್ತ ಹೆಚ್ಚು ಗಮನ ಕೊಡತೊಡಗಿದರು. ಅಲ್ಲಿ ಪಾಠ ಹೇಳುವಾಗ ಹೆಚ್ಚಿನ ಆಸಕ್ತಿ ತೆಗೆದುಕೊಳ್ಳುತ್ತಿದ್ದರು. ತಮ್ಮ ಇಪ್ಪತ್ತು ವರ್ಷಗಳ ಕಲಿಸುವಿಕೆಯ ಅನುಭವದ ಸಾರಸರ್ವಸ್ವವನ್ನು ಧಾರೆ ಎರೆಯುತ್ತಿದ್ದರು ಆ ಕ್ಲಾಸಿನಲ್ಲಿ. ತಮ್ಮ ಮಾತು ಮಾತುಗಳಲ್ಲಿ ಗತ್ತನ್ನು, ಚಮತ್ಕಾರಿಕತೆಯನ್ನು ತುಂಬಲೆತ್ನಿಸುತ್ತಿದ್ದರು. ಪಾಠ ಹೇಳುವಾಗ ಹೆಚ್ಚುಹೆಚ್ಚು ವಿದ್ಯಾರ್ಥಿಗಳೊಡನೆ ಸಂವಾದಿಸುತ್ತಿದ್ದರು. ತಮ್ಮ ಪರಿಣಾಮಕಾರಿ ಕಲಿಸುವಿಕೆಯ ಪ್ರಭಾವ ವಿದ್ಯಾರ್ಥಿಗಳ ಮೇಲೆ ಉಂಟಾಗಿದೆಯೋ ಇಲ್ಲವೋ ಎಂದು ತಿಳಿಯಲು ಅವರತ್ತ [illegible] ದೃಷ್ಟಿ ಹರಿಸುತ್ತಿದ್ದರು. ಆ ವೇಳೆಯಲ್ಲೆಲ್ಲಾ ಅವರ ದೃಷ್ಟಿ ಕೊನೆಗೆ ಶೀಲಾಳತ್ತ ಕೇಂದ್ರೀಕೃತವಾಗುತ್ತಿತ್ತು ಹಾಗೂ ತುಸು ವೇಳೆ ಅಲ್ಲೇ ದೃಢವಾಗಿ ನಿಲ್ಲುತ್ತಿತ್ತು. ಪ್ರಶ್ನೆಗಳನ್ನು ಕೇಳುವ ಪ್ರಸಂಗ ಬಂದಾಗಲೆಲ್ಲ ಶೀಲಾಳಿಗೆ ಪದೇ ಪದೇ ಅವಕಾಶ ಕೊಡುತ್ತಿದ್ದರು. ಶೀಲಾಳೇನೋ ಚುಟುಕಾಗಿ ಉತ್ತರ ಹೇಳಿ ಕುಳಿತುಬಿಡುತ್ತಿದ್ದಳು. ಆದರೆ ಪ್ರೊಫೆಸರರು ಶೀಲಾಳ ಬುದ್ಧಿವಂತಿಕೆಯನ್ನು ಮೆಚ್ಚುತ್ತಾ ಅವಳನ್ನು ಒಳಗೊಳಗೇ ಆರಾಧಿಸತೊಡಗಿದರು. ಶಿಸ್ತುಗಾರ ಪುಟ್ಟಸ್ವಾಮಿಯಾಗಿ ಕಾಲೇಜಿಗೆ ಬರತೊಡಗಿದರು. ಫುಲ್‌ಸೂಟ್ ಹೊರ ತೆಗೆದರು. ಅತ್ತರಿನ ಪರಿಮಳದಿಂದ ಘಮಘಮಿಸ ತೊಡಗಿದರು. ಅವರ ನಡೆನುಡಿಯಲ್ಲಿ ಒಂದು ಗತ್ತು ಎದ್ದು ಕಾಣತೊಡಗಿತು. ಇಷ್ಟೆಲ್ಲಾ ಮಾಡಿದರೂ ಶೀಲಾ ಅವರತ್ತ ಆಕರ್ಷಿತಳಾಗುತ್ತಿದ್ದಾಳೆಂದೇನೂ ಅವರಿಗೆ ಅನ್ನಿಸಲಿಲ್ಲ. ವಿಧವೆಯಾದ ಶೀಲಾ ಉಕ್ಕುವ ತಾರುಣ್ಯ ಹೊಂದಿದ್ದುದರಿಂದ ಅವಳನ್ನು ತಮ್ಮವಳಾಗಿ ಮಾಡಿಕೊಳ್ಳಲು ಹವಣಿಸುತ್ತಿದ್ದರು. ಒಮ್ಮೆ ದಾಂಪತ್ಯದ ರುಚಿ ಉಂಡ ಶೀಲಾ ತಮ್ಮ ಬಯಕೆ ಈಡೇರಿಸಬಹುದೆಂಬುದು ಅವರ ಎಣಿಕೆಯಾಗಿತ್ತು.

ಅತ್ತೆಯ ತಾಪತ್ರಯದಿಂದ ಪಾರಾಗಿ ಬಂದು ತವರು ಮನೆಯಲ್ಲಿ ತನ್ನ ವಿದ್ಯಾಭ್ಯಾಸ ಮುಂದುವರಿಸಿದ ಶೀಲಾ ತನ್ನ ಅಧ್ಯಯನದಲ್ಲಿ ಒಂದು ತೆರನಾದ ತೃಪ್ತಿಯನ್ನು ಕಂಡುಕೊಳ್ಳುತ್ತಿದ್ದಳು. ತಂದೆಯ ಪೆನ್ಷನ್ ಹಣ ಮನೆಯ ಖರ್ಚಿಗೆ ಸಾಕಾಗುತ್ತಿರಲಿಲ್ಲ. ನಿವೃತ್ತರಾದ ತಂದೆ ಮತ್ತೆ ದುಡಿಯುತ್ತಿದ್ದರು. ಆಯಿಲ್ ಮಿಲ್ಲಿನಲ್ಲಿ ಲೆಕ್ಕಪತ್ರ ಬರೆಯುವ ಕೆಲಸಕ್ಕೆ ಹೋಗುತ್ತಿದ್ದರು. ಅವರು ಕೊಡುವ ಜುಜುಬಿ ಮುನ್ನೂರು ರೂಪಾಯಿಗಳಿಗಾಗಿ ಅವರು ನಾಲ್ಕು ತಾಸು ದುಡಿಯಬೇಕಾಗುತ್ತಿತ್ತು. ತಾಯಿ ಮನೆಗೆಲಸವನ್ನೆಲ್ಲಾ ತಾನೇ ನೋಡಿಕೊಳ್ಳುತ್ತಿದ್ದಳು. ಶೀಲಾಳಿಗೆ ಏನೂ ಹಚ್ಚುತ್ತಿರಲಿಲ್ಲ. ಹೀಗಾಗಿ ಶೀಲಾಳಿಗೆ ಅಭ್ಯಾಸ ಮಾಡಲು ಸಾಕಷ್ಟು ಸಮಯ ಸಿಕ್ಕುತ್ತಿತ್ತು. ಅವಳು ಮನಗೊಟ್ಟು ಅಭ್ಯಾಸ ಮಾಡುತ್ತಿದ್ದಳು. ಆದರೆ ಸಮಾಜ ಶಾಸ್ತ್ರದ ಅಧ್ಯಾಪಕ ಶ್ರೀಕಾಂತನೊಬ್ಬ ತಲೆನೋವಾಗಿದ್ದ ಅವಳಿಗೆ. ಗುರುವೆಂಬ ಭಯ - ಭಕ್ತಿಯೇ ಹುಟ್ಟುತ್ತಿರಲಿಲ್ಲ ಅವನ ಬಗ್ಗೆ. ಯಾವತ್ತೂ ತನ್ನತ್ತ ದುರುಗುಟ್ಟುತ್ತ ಅಥವಾ ಮುಗುಳುನಗುತ್ತ ಸುಮ್ಮಸುಮ್ಮನೆ ಮಾತನಾಡಿಸಲೆಳೆಯುತ್ತಿದ್ದ ನಲವತ್ತು ದಾಟಿದ್ದ ಶ್ರೀಕಾಂತ ಶೀಲಾಳಿಗೆ ಒಂದು ಸಮಸ್ಯೆಯಾಗಿದ್ದ. ತನ್ನ ಯಾವ ತಪ್ಪಿಲ್ಲದೆಯೂ 'ಗಂಡನನ್ನು ತಿಂದ ಮುಂಡೆ' ಎಂದು ಹೀಗಳೆವ ಈ ಜನ, ತಾನೀಗ ತಪ್ಪಿ ನಡೆದರೆ ಅಥವಾ ತನ್ನ ಅಜಾಗರೂಕತೆಯಿಂದ ಜಾರಿದರೆ ಅಥವಾ ಜಾರಿಸಲ್ಪಟ್ಟರೆ ಕೇಳೀತೇ.... ತನ್ನನ್ನು ಪಾತಾಳಕ್ಕೇ ನೂಕೀತು ಎಂಬ ವಿಚಾರದಿಂದ ಅಂಜಿ ಥರಥರಗುಟ್ಟಿದ್ದಳು. 'ಅರೆ, ಅಸಹಾಯಕ ಹೆಣ್ಣು ತೊಂದರೆಯಲ್ಲಿದ್ದಾಗ ಸಹಾನುಭೂತಿ ತೋರಬಾರದೆ ?' ಎಂದು ಮುಂದಾಗುವ ಗಂಡು, ಸಹಾನುಭೂತಿಯಿಂದ ಸ್ನೇಹಕ್ಕೆ, ಸ್ನೇಹದಿಂದ ಪ್ರೇಮಕ್ಕೆ, ಪ್ರೇಮದಿಂದ ಕಾಮಕ್ಕೆ, ಒಂದೊಂದೇ ಹೆಜ್ಜೆ ಇಡತೊಡಗುವನು ಎಂಬುದು ಶೀಲಾಳಿಗೆ ತಿಳಿದ ವಿಷಯವಾಗಿತ್ತು. ಆರ್ಥಿಕ ಭದ್ರತೆಯಿಲ್ಲದ ತಮ್ಮಂಥ ಮಧ್ಯಮ ವರ್ಗದವರದು ಅತ್ಯಂತ ಕಠಿಣ ಹಾಗೂ ದುರ್ಗಮ ಹಾದಿ. ಈಗ ತನ್ನ ಮೊದಲ ಉದ್ದೇಶ ಆರ್ಥಿಕವಾಗಿ ಮುಂದುವರಿಯುವುದು. ಅದಕ್ಕೆ ಒಂದೇ ಹಾದಿ ಶಿಕ್ಷಣ. ತಾನು ಯಾವತ್ತೂ ಅಧೀರಳಾಗಬಾರದು, ಅಬಲೆಯಾಗಬಾರದು. ಗಂಡನ ಆಕಸ್ಮಿಕ ಮರಣದ ಆಘಾತದಿಂದ ತನ್ನ ದೈಹಿಕ ತೃಷೆಯೆ ತಣ್ಣಗಾಗಿದೆ. ತಾನು ಯಾವುದೇ ಹಗರಣದಲ್ಲಿ ಸಿಕ್ಕಿ ಹಾಕಿಕೊಳ್ಳದೆ ಓದುವುದರಲ್ಲಿ ಮಗ್ನಳಾಗಬೇಕು. ಶೀಲಾಳ ಈ ನಿರ್ಧಾರದಿಂದ ಅವಳ ಅಭ್ಯಾಸ ಮುಂದುವರೆಯಿತು.

* * *

ಹಾಗೆ ನೋಡಿದರೆ ಪ್ರೊ॥ ಶ್ರೀಕಾಂತ ಸಭ್ಯರೇ ! ಆರು ವರ್ಷಗಳ ದಾಂಪತ್ಯ ಜೀವನ ಸವಿ ಉಣ್ಣಿಸಿ ಕಣ್ಮುಚ್ಚಿದ್ದಳು ಅವರ ಪ್ರೀತಿಯ ಪತ್ನಿ ಶಾರದಾ. ತನ್ನ ನೆನಪಿನ ಕಾಣಿಕೆಯಾಗಿ ಒಂದು ಮಗು ಪ್ರತಿಭಾಳನ್ನು ಶ್ರೀಕಾಂತನ ಮಡಿಲಲ್ಲಿ ಹಾಕಿ ಹೋಗಿದ್ದಳು. ಎರಡನೆಯ ಮಗುವನ್ನು ಹೆರುವಾಗ ಶಾರದಾ ಕೊನೆಯುಸಿರೆಳೆದಿದ್ದಳು. ಮಗುವೂ ತೀರಿಹೋಗಿತ್ತು. ಶಾರದಾ ತೀರಿ ಹೋಗಿ ಈಗ ಹತ್ತು ವರ್ಷಗಳೇ ಗತಿಸಿವೆ. ಆಗ್ಗೆ ಶ್ರೀಕಾಂತನಿಗೆ ಮೂವತ್ತೆರಡು ವರ್ಷ. ಮಗಳು ಪ್ರತಿಭಾಳ ಪಾಲನೆ ಪೋಷಣೆಯಲ್ಲೇ ತಮ್ಮ ದಿನ ತೆಗೆದಿದ್ದಾರೆ. ಈಗ ಪ್ರತಿಭಾಳಿಗೆ ೧೬ ವರ್ಷ. ಎಸ್.ಎಸ್.ಎಲ್.ಸಿ. ಓದುತ್ತಿದ್ದಾಳೆ. ಆದರೆ ೪೨ರ ಈ ಮಧ್ಯವಯಸ್ಸಿನಲ್ಲಿ ಶೀಲಾ ಶ್ರೀಕಾಂತರ ಮೇಲೆ ಪ್ರಭಾವ ಬೀರುತ್ತಿದ್ದಾಳೆ. ಏಕೋ ಏನೋ ಅವರ ಮನಸ್ಸು ಅವಳಿಗಾಗಿ ಹಾತೊರೆಯುತ್ತಿದೆ. ಅವಳು ವಿಧವೆಯೆಂದು ತಿಳಿದೇ ಅವರು ಮುಂದುವರೆಯುತ್ತಿದ್ದಾರೋ ಎಂಬುದು ತಿಳಿಯುತ್ತಿಲ್ಲ.

ಅಂತೂ ಶ್ರೀಕಾಂತ ಶೀಲಾಳ ಬಗೆಗಿನ ಎಲ್ಲ ಮಾಹಿತಿ ಸಂಗ್ರಹಿಸಿದರು. ಶೀಲಾ ತಮ್ಮ ನೆಚ್ಚಿನ ಗುರುಗಳಾದ ಸೋಮೇಶ ದೇಸಾಯಿಯವರ ಮಗಳು.

ಪ್ರೊ॥ ಶ್ರೀಕಾಂತರಿಗೆ ತಮ್ಮ ಮನದೊಳಗಿನ ಭಾವನೆಗಳನ್ನು ಶೀಲಾಳೊಂದಿಗೆ ಹಂಚಿಕೊಳ್ಳಲು ಕಾಲೇಜು ಆವರಣದಲ್ಲಿ ಆಸ್ಪದವಿರಲಿಲ್ಲ. ಆದರೂ ಸಮಯ ಸಿಕ್ಕಾಗೆಲ್ಲ ಲೈಬ್ರರಿಯಲ್ಲಿ ಅಥವಾ ಕಾಲೇಜು ಪಟಾಂಗಣದಲ್ಲಿ ಶೀಲಾ ಒಬ್ಬಳೇ ಸಿಕ್ಕಾಗೆಲ್ಲ ಅವಳ ಯೋಗಕ್ಷೇಮ ವಿಚಾರಿಸುತ್ತಿದ್ದರು.

''ಏನು ಶೀಲಾ, ಹೇಗೆ ನಡೆದಿದೆ ನಿನ್ನ ವಿದ್ಯಾಭ್ಯಾಸ ? ಏನಾದರೂ ತೊಂದರೆ ಇದ್ದರೆ ನನಗೆ ತಿಳಿಸುತ್ತಾ ಇರು. ಯಾವುದಾದರೂ ಪುಸ್ತಕ ಬೇಕಾದರೆ ಹೇಳು, ನನ್ನ ಸ್ವಂತ ಲೈಬ್ರರಿಯಿಂದ ತಂದುಕೊಡುವೆ. ನೀನು ನಮ್ಮ ಗುರುಗಳಾದ ಸೋಮೇಶ ದೇಸಾಯಿಯವರ ಮಗಳೆಂಬ ಅಭಿಮಾನದಿಂದ ಹೇಳುತ್ತಿದ್ದೇನೆ.''

''ಆಯ್ತು ಸರ್, ಹಾಗೇ ಮಾಡ್ತೇನೆ'' ಎಂದು ಚುಟುಕಾಗಿ ಉತ್ತರಿಸಿ ಸರಸರ ನಡೆದು ಬಂದುಬಿಡುತ್ತಿದ್ದಳು ಶೀಲಾ.

ಶೀಲಾಳ ಮೇಲೆ ಪ್ರಭಾವ ಬೀರಲು ಏನೆಲ್ಲಾ ಮಾಡಿದರೂ ಶ್ರೀಕಾಂತ ಸೋಲುತ್ತಲೇ ಇದ್ದ. ಹೀಗಾದರೆ ತನ್ನ ಮನದ ಇಂಗಿತ ಈಡೇರದೆಂದು ತಿಳಿದು ದೇಸಾಯರನ್ನು ಖುದ್ದಾಗಿ ಕಂಡು ಮಾತನಾಡಿಸಬೇಕೆಂದು ನಿಶ್ಚಯಿಸಿದ.

* * *

ಅಂದೊಂದು ದಿನ ಶ್ರೀಕಾಂತ ಕಾಲೇಜು ಬಿಟ್ಟೊಡನೆ ನೇರವಾಗಿ ಸೋಮೇಶ ದೇಸಾಯಿಯವರ ಮನೆಗೆ

ಬಂದು ಕರೆಗಂಟೆ ಒತ್ತಿದ್ದರು. ಒಂದೆರಡು ನಿಮಿಷ ತಡೆದು ಮತ್ತೊಮ್ಮೆ ಕರೆಗಂಟೆ ಬಾರಿಸಿದಾಗ ಸೋಮೇಶ ದೇಸಾಯಿ ಬಂದು ಬಾಗಿಲು ತೆರೆದರು. ಶ್ರೀಕಾಂತರಿಗೆ ದೇಸಾಯರ ಪರಿಚಯವಿತ್ತು, ಆದರೆ ದೇಸಾಯರಿಗೆ ಶ್ರೀಕಾಂತರ ಪರಿಚಯ ಸಿಗುವುದು ಕಷ್ಟವಿತ್ತು. ದೇಸಾಯಿಯವರ ಮುಖದ ಮೇಲೆ ಪ್ರಶ್ನಾರ್ಥಕ ಚಿಹ್ನೆ ಕಂಡು ಪ್ರೊ॥ ಶ್ರೀಕಾಂತರೇ ಮಾತಿಗೆ ಮೊದಲು ಮಾಡಿದರು.

''ನಮಸ್ಕಾರ ಸಾರ್, ನಾನು ಪ್ರೊ॥ ಶ್ರೀಕಾಂತ, ನಿಮ್ಮ ವಿದ್ಯಾರ್ಥಿ. ನಿಮ್ಮ ಕೈಯಲ್ಲೇ ಎಸ್.ಎಸ್.ಎಲ್.ಸಿ. ಕಲಿತು ಮುಗಿಸಿದೆ. ಮುಂದೆ ಸಮಾಜಶಾಸ್ತ್ರದಲ್ಲಿ ಎಂ.ಎ. ಮಾಡಿ ಸ್ಥಳೀಯ ಕಾಲೇಜಿನಲ್ಲಿ ಪ್ರಾಧ್ಯಾಪಕನಾಗಿದ್ದೇನೆ....''

''ಓಹೋ, ಬನ್ನಿ ಬನ್ನಿ.... ಏನು ವಿಶೇಷ, ಎಲ್ಲ ಕ್ಷೇಮವೇ ?'' ಎಂದರು ಸೋಮೇಶ ದೇಸಾಯಿ ಬಂದ ಅತಿಥಿಗೆ ಕುರ್ಚಿ ತೋರಿಸುತ್ತ.

''ಏನೂ ವಿಶೇಷವಿಲ್ಲ ಸರ್, ಸುಮ್ಮನೆ ತಮ್ಮನ್ನು ಕಂಡು ಹೋಗಬೇಕೆಂದು ಬಂದೆ'' ಎಂದರು ಪ್ರೊ॥ ಶ್ರೀಕಾಂತ ಕುರ್ಚಿಯಲ್ಲಿ ಕೂರುತ್ತಾ.

''ಒಳ್ಳೆಯದಾಯ್ತು, ಹಿಂದಿನ ಗುರು ಶಿಷ್ಯ ಸಂಬಂಧ ನೆನೆದು ಬಂದಿರಲ್ಲ! ಎಲ್ಲಿ ಮನೆ ಮಾಡಿದ್ದೀರಿ ?''

''ಇಲ್ಲೇ ಲಕ್ಷ್ಮೀ ಬಡಾವಣೆಯಲ್ಲಿ ಮಾಡಿದ್ದೇನೆ ಸರ್'' ಎಂದರು.

ಹೀಗೇ ಲೋಕಾಭಿರಾಮವಾಗಿ ಮಾತನಾಡುತ್ತಿರುವಾಗ ಶೀಲಾ ಹೊರಗಿನಿಂದ ಮನೆಯೊಳಗೆ ಬಂದಳು. ಹಾಲಿನಲ್ಲಿ ಅಪ್ಪನ ಜೊತೆ ಮಾತನಾಡುತ್ತ ಕುಳಿತ ಶ್ರೀಕಾಂತನನ್ನು ನೋಡಿ ಅವಳ ಎದೆ ಧಸಕ್ಕೆಂದಿತು. 'ಮತ್ತೇನು ಹಗರಣ ಮಾಡಲು ಬಂದನಿವ' ಎಂದು ಮನದೊಳಗೆ ಚಿಂತಿಸಿದಳು.

''ನಮಸ್ಕಾರ ಸಾರ್'' ಎಂದು ಶ್ರೀಕಾಂತನ ಪ್ರತಿಕ್ರಿಯೆಗೆ ಕಾಯದೆ ಒಳಗೆ ಹೋದಳು.

ಪ್ರೊ॥ ಶ್ರೀಕಾಂತ, ದೇಸಾಯರೊಂದಿಗೆ ಮಾತು ಮುಂದುವರೆಸಿದ. ''ನಿಮ್ಮ ಮಗಳ ಭವಿಷ್ಯದ ಬಗ್ಗೆ ಏನು ವಿಚಾರ ಮಾಡಿದ್ದೀರಿ ?''

''ವಿಚಾರ ಏನು ಮಾಡುವುದು ? ಅವಳ ಮಾವನ ಮನೆಯಲ್ಲಿ ಅತ್ತೆಯ ಕಾಟ ತಾಳಲಾರದೆ ಇಲ್ಲಿಗೆ ಬಂದು ವಿದ್ಯಾಭ್ಯಾಸ ಮುಂದುವರೆಸಿದ್ದಾಳೆ. ಬಿ.ಎ. ಮುಗಿಸಿ ಒಂದು ಉದ್ಯೋಗ ಹಿಡಿದರೆ ಸಾಕು ಎನ್ನಿಸಿಬಿಟ್ಟಿದೆ'' ಎಂದರು ದೇಸಾಯಿ.

ಹೇಗೆ ಮಾತು ಮುಂದುವರೆಸಬೇಕೆಂದು ತಿಳಿಯದೆ, ದೇಸಾಯಿಯವರ ಸಹಾನುಭೂತಿ ಗಿಟ್ಟಿಸಿಕೊಳ್ಳಲು ತನ್ನ ಸ್ವಂತದ ವ್ಯಥೆಯ ಕಥೆಯನ್ನು ಸವಿಸ್ತಾರವಾಗಿ ಬಿಚ್ಚಿ ಹೇಳಿದ ಶ್ರೀಕಾಂತ.

''ಹೌದಾ ! ಹತ್ತು ವರ್ಷ ವಿಧುರರಾಗಿ ಏಕೆ ಕಳೆದಿರಿ ? ಮರುಮದುವೆ ಏಕೆ ಮಾಡಿಕೊಳ್ಳಲಿಲ್ಲ ?'' ಎಂದು ಕೇಳಿದರು ದೇಸಾಯರು ಹಿತೈಷಿಯಾಗಿ.

''ಏಕೋ ಬೇಡವೆನ್ನಿಸಿತು ಸರ್; ಮಗಳನ್ನು ಬೆಳೆಸುವುದರಲ್ಲೇ ಸಮಯ ಕಳೆದೆ. ಈಗ ಮಗಳು ಪ್ರತಿಭಾ ಮ್ಯಾಟ್ರಿಕ್ ಇದ್ದಾಳೆ..... ಅಂದಹಾಗೆ ತಮ್ಮ ಮಗಳು ಶೀಲಾಳದ್ದು ಇನ್ನೂ ಸಣ್ಣ ವಯಸ್ಸು. ತಾವು ಏಕೆ ಅವಳ ಮರುಮದುವೆ ಮಾಡಬಾರದು ?'' ಎಂದು ಪೀಠಿಕೆ ಹಾಕಿಯೇಬಿಟ್ಟರು ಪ್ರೊ॥ ಶ್ರೀಕಾಂತ.

''ಏನೋಪ್ಪ, ಶೀಲಾಳ ಮನಸ್ಸಿನಲ್ಲೇನಿದೆಯೋ ಗೊತ್ತಿಲ್ಲ. ಮೊದಲನೇ ವಿವಾಹ ದುರಂತದಲ್ಲಿ ಕೊನೆಗೊಂಡು ಅದರ ಆಘಾತದಿಂದ ಅವಳು ಇನ್ನೂ ಚೇತರಿಸಿಕೊಂಡಿಲ್ಲ. ಅವಳು ಇಷ್ಟಪಟ್ಟರೆ ಮರುಮದುವೆಗೆ ನನ್ನದೇನೂ ಅಭ್ಯಂತರವಿಲ್ಲ. ಆದರೆ ಅವಳು ಬಿ.ಎ. ಮುಗಿಸಿ ನೌಕರಿ ಹಿಡಿಯುವುದು ನಮಗೆ ಈಗ ಮುಖ್ಯ. ಈಗಲೇ ಏಕೆ ಮದುವೆ ವಿಚಾರ ?'' ಎಂದು ಮಾತು ಮುಗಿಸಿದರು ಸೋಮೇಶ ದೇಸಾಯಿ.

ಶೀಲಾಳ ಮರು ಮದುವೆಗೆ ದೇಸಾಯರ ಆಕ್ಷೇಪವಿಲ್ಲವೆಂಬ ಮಾತು ಪ್ರೊ॥ ಶ್ರೀಕಾಂತರಲ್ಲಿ ಆಸೆ ಚಿಗುರಿಸಿತು. ಆದರೆ ತಮ್ಮ ಮನದ ಇಂಗಿತ ದೇಸಾಯರ ಮುಂದೆ ತಿಳಿಸದೆ ನೇರವಾಗಿ ಶೀಲಾಳನ್ನೇ ಕೇಳಿದರಾಯಿತೆಂದುಕೊಂಡರು ಪ್ರೊ॥ ಶ್ರೀಕಾಂತ್. ಸ್ವಲ್ಪ ಹೊತ್ತು ಅದೂ ಇದೂ ಮಾತಾಡಿ ''ಬರ್ತೇನೆ ಸಾರ್'' ಎಂದು ಹೊರಟುನಿಂತರು.

''ಅರೇ ಹೊರಟೇಬಿಟ್ಟಿರಲ್ಲ! ತಡೀರಿ ಚಹ ಕುಡಿದು ಹೋಗುವಿರಂತೆ'' ಎಂದು ಉಪಚಾರ ಮಾಡಿದರು ದೇಸಾಯರು.

''ಬೇಡ ಸಾರ್, ಮತ್ತೆ ಬರ್ತೇನೆ.'' ಹೊರಟೇಬಿಟ್ಟರು ಶ್ರೀಕಾಂತ.

* * *

ಶೀಲಾಳನ್ನು ಭೆಟ್ಟಿಯಾಗಿ ತಮ್ಮ ಮನದ ಇಂಗಿತ ತಿಳಿಸಲು ಅವಕಾಶ ಕೆಲದಿನಗಳಲ್ಲಿ ಬಂದೇಬಿಟ್ಟಿತು ಶ್ರೀಕಾಂತರಿಗೆ. ಕಾಲೇಜಿನ ಕೊನೆ ಪಿರಿಯಡ್ ಮುಗಿದು ಎಲ್ಲ ಪ್ರಾಧ್ಯಾಪಕರೂ ಮನೆಗೆ ಹೋಗಿದ್ದರು. ಶ್ರೀಕಾಂತ ಸ್ಟಾಫ್ ರೂಮಿನಲ್ಲಿ ಒಂದು ಕಾದಂಬರಿ ಓದುತ್ತಾ ಕುಳಿತಿದ್ದರು. ಅದೇ ಸಮಯದಲ್ಲಿ ಶೀಲಾ ಒಬ್ಬಳೇ ಸ್ಟಾಫ್‌ರೂಮಿನ ಮುಂದಿನ ಕಾರಿಡಾರಿನಲ್ಲಿ ಹಾದುಹೋಗುವುದನ್ನು ಕಂಡು ಕಾದಂಬರಿಯನ್ನು ಕಪಾಟಿನಲ್ಲಿಟ್ಟು ಹೊರಬಂದರು. ಶೀಲಾಳ ಹತ್ತಿರ ಬಂದು ''ಶೀಲಾ, ಏಕೆ ತಡವಾಯಿತು ?'' ಎಂದು ಮಾತನಾಡಿಸಿದರು.

''ನಮಸ್ಕಾರ ಸಾರ್, ರಾಜ್ಯಶಾಸ್ತ್ರ ಅಧ್ಯಾಪಕರು ಬೋರ್ಡ್ ಮೇಲೆ ಬರೆದ ಕೆಲ ಟಿಪ್ಪಣಿಗಳನ್ನು ನೋಟ್ ಮಾಡಿಕೊಳ್ಳುವುದರಲ್ಲಿ ತಡವಾಯಿತು'' ಎಂದಳು.

''ಬನ್ನಿ ಇಲ್ಲೇ ಕ್ಯಾಂಟೀನಿನಲ್ಲಿ ಟೀ ಕುಡಿಯುತ್ತಾ ಮಾತಾಡೋಣ'' ಎಂದು ನಯವಾಗಿ ಆಹ್ವಾನಿಸಿದ.

''ಬೇಡ ಸರ್, ಅದು ನನಗೆ ಇಷ್ಟವಿಲ್ಲ, ತಂದೆ ಮನೆಯಲ್ಲಿ ಕಾಯುತ್ತಿರುತ್ತಾರೆ'' ಎಂದು ಅಷ್ಟೇ ನಯವಾಗಿ ತಿರಸ್ಕರಿಸಿದಳು.

ಶೀಲಾಳ ಸಾನ್ನಿಧ್ಯದಲ್ಲಿ ಏರಿದ್ದ ಶ್ರೀಕಾಂತನ ಬಯಕೆಯ ಪಾರಜ ಸರ್ರನೆ ಕೆಳಗಿಳಿಯಿತು ಶೀಲಾಳ ಉತ್ತರದಿಂದ.

* * *

ಶೀಲಾ ಬಿ. ಎ., ಬಿ.ಎಡ್. ಮಾಡಿ ಹೊಸದಾಗಿ ಪ್ರಾರಂಭವಾದ ಶಾಲೆಯೊಂದರಲ್ಲಿ ಅಧ್ಯಾಪಕಳಾಗಿ ತನ್ನ ಕಾಲ ಮೇಲೆ ನಿಂತಿದ್ದಾಳೆ. ವಧು-ವರರ ಶೋಧನಾ ಕೇಂದ್ರದಲ್ಲಿ ಹೆಸರು ಹಚ್ಚಿದ್ದಾಳೆ, – ಒಳ್ಳೆಯ ಬಾಳಸಂಗಾತಿಯನ್ನು ಪಡೆಯುವುದಕ್ಕೆ.

'ತಾನು ಹಳಸಿದ ಅನ್ನ ಅಲ್ಲ; ಜೀವನೋತ್ಸಾಹದ ಬುಗ್ಗೆ' ಎಂದು ದೃಢವಾಗಿ ನಂಬಿದ ೨೫ ವರ್ಷದ ಶೀಲಾ, ತನ್ನ ಕನಸುಗಳನ್ನು ನನಸಾಗಿಸುವ ಸಹೃದಯ ಶೀಘ್ರದಲ್ಲೇ ಸಿಗುವನೆಂಬ ಭರವಸೆಯಲ್ಲಿದ್ದಾಳೆ.

ಈಗ ಆಯ್ಕೆ ಶೀಲಾಳ ಕೈಯಲ್ಲಿದೆ.

[illegible]

## ಪ್ರೀತಿ ಬಿಟ್ಟ ಗುರುತು



ಇದೀಗ ಅರುಣೋದಯ
ಏನು ಹುಡುಕುತ್ತೀರಿ
ಈ ಗಿಡದ ಕೆಳಗೆ –
ಹೀಗೆಂದು ಕೇಳಿದವರ
ನೋಡಬೇಕೆಂದಾಗ
ಅವರೂ ಏನೋ ಹುಡುಕುತ್ತಿರಲು
ಕಣ್ಣು ಬಿಟ್ಟಾಗ
ನಿನ್ನೆ, ಕತ್ತಲಲ್ಲಿ
ನಕ್ಕ ಬೆಳಕಿನಲ್ಲಿ
ಕಳೆದು ಹೋದ ಮುತ್ತುಗಳ
ಹುಡುಕುತ್ತಿದ್ದೇನೆ ಎಂದಾಗ,
ಅದೇ ಗಿಡದ ನೆರಳಲ್ಲಿ
ನಾನೂ ಹುಡುಕುತ್ತಿದ್ದೇನೆ

ಆ ಮುತ್ತುಗಳ
ಎಂಬ ಉತ್ತರವಿರಲು;
ಬಾಲರವಿ ನಸುನಕ್ಕಿರಲು
ತುಟಿ ತುಟಿಗಳ ಸೇರಿದ

ಮುತ್ತುಗಳ ತುಂಬ
ಪ್ರೀತಿ ಬಿಟ್ಟಿರುವ ಗುರುತು -
ಹುಡುಕುವ ನೆಲದ ತುಂಬೆಲ್ಲ
ಕಂಪು

ಪ್ರೊ॥ ವಸಂತ ಕುಷ್ಟಗಿ
ಎಂ.ಐ.ಜಿ. ಹುಡ್ಕೋ ಕಾಲೋನಿ
ಗುಲ್ಬರ್ಗ- ೫೮೫೧೦೨

# ಸಾಮಾನ್ಯ ಪ್ರಜ್ಞೆ ಈಗ ಹೆಚ್ಚಿದೆ:

**ಹೊಸತು** : ನಿಮ್ಮ ವಿದ್ಯಾಭ್ಯಾಸ, ವಿದ್ಯಾರ್ಥಿದೆಸೆಯ ಅನುಭವ ಇತ್ಯಾದಿಗಳ ಬಗ್ಗೆ ಏನಾದರೂ ಹೇಳುತ್ತೀರಾ ?

**ಶ್ರೀನಿವಾಸರಾವ್** : ೧೯೧೯ರಲ್ಲಿ ನಾನು ಪ್ರೌಢಶಾಲೆಯಲ್ಲಿದ್ದೆ - ಶಿವಮೊಗ್ಗದಲ್ಲಿ. ಆಮೇಲೆ ಎಫ್.ಎ. ಓದಿದೆ. ಆಮೇಲೆ ಅದಕ್ಕೆ ಇಂಟರ್‌ಮೀಡಿಯೇಟ್ ಎಂಬ ಹೆಸರು ಬಂತು. ಅದೇ ಸಮಯಕ್ಕೆ ಕಲ್ಕತ್ತೆಯಲ್ಲಿ ಸ್ಯಾಡ್ಲರ್ ಆಯೋಗದ ರಚನೆಯಾಗಿದ್ದಿತೆಂದು ನೆನಪು. ಆಶುತೋಷ್ ಮುಖರ್ಜಿಯವರು ವಿದ್ಯಾಭ್ಯಾಸ ಕ್ಷೇತ್ರದಲ್ಲಿ ವಿಶೇಷವಾಗಿ ಖ್ಯಾತಿ ಹೊಂದುತ್ತಿದ್ದ ಕಾಲ ಅದು. ನಾನು ಲಂಡನ್ ಮಿಷನ್ ಹೈಸ್ಕೂಲಿನಲ್ಲೂ ವ್ಯಾಸಂಗ ಮಾಡಿದ್ದೆ. ನಂತರ ಭೌತಶಾಸ್ತ್ರದಲ್ಲಿ ಆನರ್ಸ್ ಪದವಿ ಪಡೆದು ಮದ್ರಾಸಿನಲ್ಲಿ ಕಾನೂನು ಪದವಿಗಾಗಿ ವ್ಯಾಸಂಗ ಮಾಡಲು ಹೋಗಿದ್ದೆ. ಅದಾದ ಎಷ್ಟೋ ವರ್ಷಗಳ ನಂತರ ನಾನು ''ಸತ್ಯಶೋಧನೆ'' ಪತ್ರಿಕೆ ಆರಂಭಿಸಿದ್ದು. ಮಾನ್ಯ ಶ್ರೀ ಕೆ. ಸಂಪದ್ಗಿರಿರಾಯರೂ ಅದರ ಸಂಪಾದಕರಾಗಿದ್ದರು.

ನಾನು ವಿದ್ಯಾರ್ಥಿಯಾಗಿದ್ದಾಗಿನ ವರ್ಷಗಳಲ್ಲೂ ಭಾರತೀಯ ವಿಜ್ಞಾನದ ಅಧಿವೇಶನಗಳು ಸಕ್ರಮವಾಗಿ ಜರುಗುತ್ತಿದ್ದವು. ಆದರೆ ಅಲ್ಲಿ ಇಂಗ್ಲಿಷಿನವರದೇ ಪ್ರಾಬಲ್ಯ. ಎಷ್ಟರಮಟ್ಟಿಗೆಂದರೆ ನಮ್ಮ ಜಗದೀಶ ಚಂದ್ರ ಬೋಸ್ ಮತ್ತು ಸಿ. ವಿ. ರಾಮನ್ ಅಂಥವರನ್ನು ಕೂಡ ಲೇವಡಿ ಮಾಡುತ್ತಿದ್ದುದುಂಟು. ೧೯೨೯ರಲ್ಲಿ ಈ ಅಧಿವೇಶನದ ಭೌತಶಾಸ್ತ್ರ ಮತ್ತು ಗಣಿತಶಾಸ್ತ್ರ ವಿಭಾಗದ ಅಧ್ಯಕ್ಷತೆಯನ್ನು ಸಿ. ವಿ. ರಾಮನ್ ವಹಿಸಿದ್ದರು. ಕಲ್ಕತ್ತೆಯಿಂದ ಪ್ರಫುಲ್ಲ ಚಂದ್ರ ರೇ ಮತ್ತು ಢಾಕಾದಿಂದ ಜೆ. ಸಿ. ಘೋಷ್ ಆ ಅಧಿವೇಶನಕ್ಕೆ ಬಂದಿದ್ದುದು ಜ್ಞಾಪಕವಿದೆ. ಈ ಅಧಿವೇಶನದ ತರುವಾಯದಲ್ಲಿ ಅನೇಕ ವರ್ಷಗಳ ನಂತರ ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರದ ನಿರ್ದೇಶಕರಾಗಿ ಸಿ. ವಿ. ರಾಮನ್ ಆಯ್ಕೆಗೊಂಡರು. ಅವರಿಗೆ ಮುಂಚೆ ಇದ್ದವನು ಫಾಸ್ಟರ್ ಎಂಬಾತ. ರಾಮನ್ ಅವರಿಗೆ ಪ್ರತಿಭೆ ಅಗಾಧವಾಗಿತ್ತು. ಆದರೆ ಅದರ ಜೊತೆಯಲ್ಲಿ ಸಾಕಷ್ಟು ಅಹಮಿಕೆಯೂ ಇತ್ತು. ಅವರ ಭಾವನೆಗಳು ಕೆಲವೊಮ್ಮೆ ವಿಲಕ್ಷಣವಾಗಿ ಹರಿಯುತ್ತಿದ್ದುವು. ಅದೇ ಕಾರಣವಿರಬಹುದು, ನಿರ್ದೇಶಕರಾಗಿ ಅವರು ಬಹಳ ಕಾಲ ಉಳಿಯಲಿಲ್ಲ.

**ಹೊ** : ನೀವು ಎಲ್ಲಿಯವರೆಗೆ ಕಾಂಗ್ರೆಸ್‌ನ ಸದಸ್ಯರಾಗಿದ್ದಿರಿ ?

**ಶ್ರೀ** : ಅಡ್ವೊಕೇಟ್ ಜನರಲ್ ಆಗಿ ನೇಮಕವಾಗುವವರೆಗೆ. ನಾನು ನ್ಯಾಷನಲ್ ಹೈಸ್ಕೂಲಿನಲ್ಲಿ ಅಧ್ಯಾಪಕನಾಗಿದ್ದಾಗಿನಿಂದಲೂ ಕಾಂಗ್ರೆಸ್ ಮತ್ತು ಸ್ವಾತಂತ್ರ್ಯ ಚಳವಳಿಗಳತ್ತ ಆಕರ್ಷಿತನಾಗಿದ್ದೆ. ತಿಲಕರಿಗೆ ಬಹಳ ಹತ್ತಿರವಾಗಿದ್ದ ಶ್ರೀ ಸೆಟ್ಲೂರ್ ಅವರು ಬೊಂಬಾಯಿಯಲ್ಲಿ ವಕೀಲರಾಗಿದ್ದರು. ಅವರು ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಮಂಡಲಿಯ ಅಧ್ಯಕ್ಷರಾಗಿದ್ದರು. ಆ ವರ್ಷಗಳಲ್ಲೆಲ್ಲಾ ನಾನು ಸಕ್ರಿಯ ಕಾಂಗ್ರೆಸ್ ಕಾರ್ಯಕರ್ತನಾಗಿದ್ದೆ. ಗಾಂಧೀಜಿ ಕಾಂಗ್ರೆಸ್ಸಿಗೆ ವಿಶಾಲ ತಳಹದಿ ಹಾಕುವವರೆಗೆ ಅದು ಕೆಲವು ಶ್ರೀಮಂತ ಮುಂದಾಳುಗಳಿಗೆ ಸೀಮಿತವಾಗಿದ್ದ ಸಂಘಟನೆಯಾಗಿತ್ತು. ಸಾಮಾನ್ಯ ಜನ ಕಾಂಗ್ರೆಸ್ಸಿಗೆ ಬಂದು ಅದರ ಛಾಯೆಯನ್ನು ಬದಲಾಯಿಸಲು ಗಾಂಧೀಜಿಯ ದೂರದೃಷ್ಟಿಯೇ ಕಾರಣ. ಒಂದು ಪ್ರಜಾಪ್ರಭುತ್ವವಾದಿ ನೆಲೆಯು ಆ ಪಕ್ಷಕ್ಕೆ ರಚನೆಯಾಗಲು ಇದರಿಂದ ಸಾಧ್ಯವಾಯಿತು. ವಿಜಯವಾಡ ಕಾಂಗ್ರೆಸ್ ಅಧಿವೇಶನವು ಒಂದು ಕೋಟಿ ಸದಸ್ಯರನ್ನು ನೋಂದಾಯಿಸಿಕೊಳ್ಳುವ ತೀರ್ಮಾನ ಕೈಗೊಂಡಾಗ ಕಾಂಗ್ರೆಸ್ ಹಲವು ಸುಧಾರಣಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಖಾದಿ ಆಂದೋಲನ, ಅಸ್ಪೃಶ್ಯತಾ ನಿವಾರಣೆ, ಹೆಂಡದಂಗಡಿಗಳನ್ನು ಮುಚ್ಚಿಸುವುದು, ಸ್ವದೇಶಿ ಆರ್ಥಿಕತೆ ಇತ್ಯಾದಿ. ಪ್ರಾದೇಶಿಕ ಮತ್ತು ಜಿಲ್ಲಾವಾರು ಕಾಂಗ್ರೆಸ್ ಸಮಿತಿಗಳ ರಚನೆಯಾದದ್ದು ಈ ಹಿನ್ನೆಲೆಯಲ್ಲಿ. ಇಂತಹ ಸಂದರ್ಭದಲ್ಲಿ ಕಾರ್ಯಕರ್ತನಾಗಿ ಕೆಲಸ ಮಾಡುವ ಸುಯೋಗ ನನ್ನದಾಯಿತು.

**ಹೊ** : ಆ ಸಂದರ್ಭದ ಕೆಲವು ಅನುಭವಗಳನ್ನು ಮೆಲುಕಿ ಹಾಕಿಕೊಳ್ಳಬಹುದೆ ?

**ಶ್ರೀ** : ಅನೇಕ ಸಂಗತಿಗಳು ಜ್ಞಾಪಕಕ್ಕೆ ಬರುತ್ತವೆ. ಚಾಮರಾಜಪೇಟೆಯಲ್ಲಿ ಈಗ ಏಪೆಕ್ಸ್ ಬ್ಯಾಂಕ್ ಕಟ್ಟಡವಿದೆಯಲ್ಲಾ ಅದನ್ನು ಗಾಂಧಿ ಮೈದಾನ ಎನ್ನುತ್ತಿದ್ದೆವು. ಅದೆಷ್ಟು ನಾಯಕರು ಅಲ್ಲಿ ಭಾಷಣ ಮಾಡಿದ್ದಾರೆ! ವಲ್ಲಭಭಾಯಿ ಪಟೇಲರು ಕೂಡ ಅಲ್ಲಿಗೆ ಬಂದಿದ್ದರು. ಧರ್ಮಾಂಬುಧಿ ಕೆರೆಯು ನಂತರ ಸುಭಾಷ್‌ನಗರ ಮೈದಾನವಾಯಿತು. ಅಲ್ಲಿ ಸತ್ಯಮೂರ್ತಿಯಂಥವರು ಸಭೆಗಳನ್ನುದ್ದೇಶಿಸಿ ಮಾತನಾಡಿದ್ದಾರೆ. ನಮ್ಮದು ನಿರಂತರ ಚಟುವಟಿಕೆ; ಮೆರವಣಿಗೆ, ಸತ್ಯಾಗ್ರಹ ಇತ್ಯಾದಿ. ಬೈಯಣ್ಣ, ಸುಬೋಧ ರಾಮರಾವ್ ಮುಂತಾದವರು ಮುಂದಾಳುಗಳು. ಜನರ ರಾಜಕೀಯ ಪ್ರಜ್ಞೆ ಬೆಳೆಯುತ್ತಿದ್ದುದು ಇಂತಹ ಕಾರ್ಯಕ್ರಮಗಳ ಮೂಲಕ. ಬ್ರಿಟಿಷರ ವಿರುದ್ಧದ ಹೋರಾಟದಲ್ಲಿ ನಮ್ಮ ರಾಜ್ಯವು ದೇಶದ ಇತರ ಭಾಗಗಳ ಹೋರಾಟದೊಂದಿಗೆ ಸಮೀಕರಿಸಿಕೊಂಡಿತ್ತು. ನಮ್ಮದು ಮಹಾರಾಜರ ಆಳ್ವಿಕೆಯಲ್ಲಿದ್ದ ರಾಜ್ಯ. ರೆಸಿಡೆಂಟ್ ಎಂದು ಒಬ್ಬ ಬ್ರಿಟಿಷ್ ಪ್ರತಿನಿಧಿ ಇರುತ್ತಿದ್ದ. ದಿವಾನರಿರುತ್ತಿದ್ದರು. ಆಗ್ಗೆ ೧೯೨೮ರ ಗಣೇಶ ಪ್ರತಿಷ್ಠಾಪನೆಯ ಘಟನೆ ಮುಖ್ಯವಾದ್ದು. ೧೮೮೦ರಿಂದಲೂ ಮೈಸೂರಿನ ಪೀನಲ್ ಕೋಡ್ ಎಂಬುದೊಂದು ಜಾರಿಯಲ್ಲಿತ್ತು. ಇಂಡಿಯನ್ ಪೀನಲ್ ಕೋಡಿನ ಪ್ರತಿರೂಪ ಅದು. ಅದರಲ್ಲಿ ೧೨೪ (ಎ) ಎಂಬಲ್ಲಿ 'ದೇಶದ್ರೋಹಿ ಅಪರಾಧ'ಗಳ ನಮೂದನೆ ಬರುತ್ತದೆ. ಈ ಗಣೇಶನ ಗಲಾಟೆಯವರೆಗೆ ಆ ನಿಬಂಧದಡಿಯಲ್ಲಿ ಯಾವ ಮೊಕದ್ದಮೆಯನ್ನೂ ಹೂಡಲಾಗಿರಲಿಲ್ಲ. ''ವೀರಕೇಸರಿ'' ಸೀತಾರಾಮಶಾಸ್ತ್ರಿಗಳು ತಮ್ಮ ಪತ್ರಿಕೆಯ ಮೂಲಕ ಈ ಘಟನೆ ಮತ್ತು ಮೊಕದ್ದಮೆಗಳನ್ನು ಚೆನ್ನಾಗಿ ಪ್ರಚಾರ ಮಾಡಿ ಸರ್ಕಾರದ ಅಕ್ರಮಗಳನ್ನು ಕಟುವಾಗಿ ಟೀಕಿಸಿದರು. ಮೈಸೂರಿನ ತಾತಯ್ಯನವರು (ಎಂ. ವೆಂಕಟಕೃಷ್ಣಯ್ಯ) ಈ ಇಡೀ ಪ್ರಕರಣದಲ್ಲಿ ಮುಖ್ಯ ಪಾತ್ರ ವಹಿಸಿ ದಿವಾನ್ ಮಿರ್ಜಾ ಇಸ್ಮಾಯಿಲ್‌ರನ್ನು ಸಾರ್ವಜನಿಕರ ಒತ್ತಾಯಕ್ಕೆ ಮಣಿಯುವಂತೆ ಮಾಡಿದರು. ಯುವಕರಿಗೆ ರಾಜಕೀಯ ಪ್ರಜ್ಞೆ ಬೆಳೆಯುವಂತೆ ಮಾಡಲು ಕೆಲವು ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು. ಮಾನ್ಯ ಡಿ. ವಿ. ಗುಂಡಪ್ಪನವರ ನೇತೃತ್ವದಲ್ಲಿ ಗೋಖಲೆ ಸಾರ್ವಜನಿಕ ಸಂಸ್ಥೆ ಅಸ್ತಿತ್ವಕ್ಕೆ ಬಂದಿದ್ದು ೧೯೪೫ರಲ್ಲಿ. ಆದರೆ ಅದಕ್ಕೆ ಮುಂಚೆಯೂ ಅಧ್ಯಯನ ಗೋಷ್ಠಿಗಳನ್ನು ನಡೆಸುತ್ತಿದ್ದೆವು. ಈಗ ರಾಜ್ಯಸಭೆಯ ಸದಸ್ಯರಾಗಿರುವ ಶ್ರೀ ಎ. ಲಕ್ಷ್ಮೀಸಾಗರ್ ಅದರಲ್ಲಿ ಪ್ರಮುಖ ಕಾರ್ಯಕರ್ತರಾಗಿದ್ದರು. ೩೦-೪೦ ವರ್ಷಗಳ ಕಾಲ ಈ ಗೋಷ್ಠಿಗಳು ನಡೆದಿದ್ದವು.

**ಹೊ** : ನೀವು ಹೇಳುವುದನ್ನು ನೋಡಿದರೆ ಈಗೇಕೆ ಅಂತಹ ಲವಲವಿಕೆ, ಚಟುವಟಿಕೆ ವ್ಯಾಪಕವಾಗಿ ಕಂಡುಬರುತ್ತಿಲ್ಲ ಎನಿಸುತ್ತದೆ.

**ಶ್ರೀ** : ಅದಕ್ಕೆ ಹತ್ತಾರು ಕಾರಣಗಳಿವೆ. ಆಗ ಜೀವನೋಪಾಯಕ್ಕೆ ಇಂಥದೇ ವೃತ್ತಿ ಹಿಡಿಯಬೇಕು, ಅದರಲ್ಲಿ ರಭಸವಾಗಿ ಮೇಲೇರಬೇಕು ಎಂಬ ಆಕಾಂಕ್ಷೆ ಅಷ್ಟಾಗಿ ನಮ್ಮ ಯುವಕರನ್ನು ಆವರಿಸಿರಲಿಲ್ಲ. ಜೊತೆಗೆ ಜ್ಞಾನ ಸಾಧನಗಳೂ ಕಡಿಮೆ. ಈಗಿರುವಷ್ಟು ಆಸಕ್ತಿಗಳನ್ನು ಬೆಳೆಸಿಕೊಳ್ಳಲು ಆಗ ಅವಕಾಶವಿರಲಿಲ್ಲ. ಆಸಕ್ತಿಗಳಿದ್ದರೂ ಅವಕ್ಕೆ ಅಭಿವ್ಯಕ್ತಿ ನೀಡಲು ಸಾಕಷ್ಟು ಮಾರ್ಗಗಳಿರಲಿಲ್ಲ. ನಾನು ಮೆಟ್ರಿಕ್ ಪರೀಕ್ಷೆಗೆ ಹೋದಾಗ ಇಡೀ ರಾಜ್ಯದಲ್ಲಿ ಆ ಪರೀಕ್ಷೆ ಬರೆದವರು ೨೦೦೦; ಈಗ ಎರಡು ಲಕ್ಷಕ್ಕೂ ಜಾಸ್ತಿ ಇದ್ದಾರೆನ್ನುವುದು ಸಮಾಧಾನದ ಸಂಗತಿ. ಅದು ಇನ್ನೂ ಹೆಚ್ಚಬೇಕು, ಕಲಿಕೆಯ ಆಳವೂ ಹೆಚ್ಚಬೇಕು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಆಗ್ಗೆ ಡಿ.ವಿ.ಜಿ. 'ವಸಂತ ವ್ಯಾಖ್ಯಾನಮಾಲಾ' ಎಂಬ ಹೆಸರಿನಲ್ಲಿ ಸಾಮಾಜಿಕ - ರಾಜಕೀಯ

*ಅಧ್ಯಾಪಕರು, ಲೇಖಕರು, ಪ್ರಕಾಶಕರು, ವಕೀಲರು, ಉದ್ದಾಮ ಸ್ವಾತಂತ್ರ್ಯ ಹೋರಾಟಗಾರರು, ಅಡ್ವೊಕೇಟ್ ಜನರಲ್, ನ್ಯಾಯಮೂರ್ತಿ, ಉಚ್ಚ ನ್ಯಾಯಾಲಯದ ನ್ಯಾಯಾಧೀಶ, ವಿಜಿಲೆನ್ಸ್ ಕಮಿಷನರ್, ರಾಜ್ಯಪಾಲರು – ಇವೆಲ್ಲಾ ಆಗಿದ್ದು, ಸಾಮಾನ್ಯರಲ್ಲಿ ಅತಿಸಾಮಾನ್ಯರಂತೆ ಎಲ್ಲರೊಡನೆ ಬೆರೆತು ತಮ್ಮ ಚಿಂತನೆ-ಕ್ರಿಯೆಗಳಲ್ಲಿ ತೊಡಗುವ ಬಹು ಅಪರೂಪದ ವ್ಯಕ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು. ಗಾಂಭೀರ್ಯ, ಮೃದು ಸ್ವಭಾವ, ಸೌಹಾರ್ದ ಭಾವಗಳಿಗೆ ಇನ್ನೊಂದು ಹೆಸರು ನಿಟ್ಟೂರು ಎನ್ನಬಹುದು. ಶಾಂತಿ ಚಳವಳಿಯಲ್ಲಿ ಮಹತ್ತರ ಪಾತ್ರ, ಮಾನವ ಹಕ್ಕುಗಳಿಗಾಗಿ ಹೋರಾಟ, ಸಾಹಿತ್ಯ - ಸಂಸ್ಕೃತಿ - ಕಲೆಗಳಲ್ಲಿ ಸಕ್ರಿಯ ಪಾಲುಗಾರಿಕೆ ಮತ್ತು ಅಪಾರ ವಿದ್ವತ್ತು, ಇವೆಲ್ಲಾ ಅವರನ್ನು ಇತರರಿಂದ ಭಿನ್ನೈಸುವ ಲಕ್ಷಣಗಳು. ಬೆಂಗಳೂರಿನ ಸಭೆ-ಸಮಾರಂಭಗಳಲ್ಲಿ ಅವರ ಉಪಸ್ಥಿತಿ ಇಲ್ಲದಿದ್ದರೆ ಏನೋ ಕೊರತೆ ಎನ್ನಿಸುತ್ತದೆ. ಅಪಾರ ಅನುಭವವನ್ನು ಹಲವು ಕ್ಷೇತ್ರಗಳಲ್ಲಿ ಗಳಿಸಿಕೊಂಡಿರುವ ಶ್ರೀ ನಿಟ್ಟೂರರನ್ನು ಪೂರ್ತಿಯಾಗಿ ಪರಿಚಯಿಸುವುದು ಬಹಳ ಕಷ್ಟ. ಅಂತೆಯೇ ಅವರನ್ನು ಸಂದರ್ಶಿಸುವುದೂ ಕೂಡ. ನೆನಪಿನ ಗಣಿಯನ್ನು ಹೊಕ್ಕರೆ ಹೊರಬರುವುದು ಅವರಿಗೆ ಕಠಿಣ. ಕೇಳುತ್ತಿರುವವರನ್ನು ಘಟನೆಗಳ ಮಹಾಪೂರದಲ್ಲಿ ತೇಲಿಸಿಬಿಡುತ್ತಾರೆ. ಕೆಲವು ಸೀಮಿತ ವಿಷಯಗಳನ್ನು ಕುರಿತಂತೆ ಅವರ ಅಭಿಪ್ರಾಯ ಪಡೆಯಲು 'ಹೊಸತು' ಪರವಾಗಿ ಜಿ. ರಾಮಕೃಷ್ಣ, ಸಿ. ಆರ್. ಕೃಷ್ಣರಾವ್ ಮತ್ತು ಕೆ. ಪಿ. ಸ್ವಾಮಿ ಈಚೆಗೆ ಅವರನ್ನು ಭೇಟಿಯಾಗಿದ್ದರು. ಅಂದಿನ ಸಂವಾದದ ಆಯ್ದ ಭಾಗಗಳನ್ನು ಇಲ್ಲಿ ಕೊಡಲಾಗಿದೆ. ಇದನ್ನು ಸಿದ್ಧಪಡಿಸಿದವರು ಜಿ. ರಾಮಕೃಷ್ಣ.*

# ಸರಿಯಾದ ದಿಕ್ಕು ಅಗತ್ಯ

- ನಿಟ್ಟೂರು ಶ್ರೀನಿವಾಸರಾವ್

ವಿಷಯಗಳನ್ನು ಕುರಿತು ಸಾರ್ವಜನಿಕರಿಗಾಗಿ ಸಭೆಗಳನ್ನು ನಡೆಸುತ್ತಿದ್ದರು. ಈಗಿನ ಸಭೆಗಳ ವೈವಿಧ್ಯ ನೋಡಿ ಹೇಗಿದೆ, ದಿನಕ್ಕೆ ಎಷ್ಟೊಂದು ಸಭೆಗಳು ನಡೆಯುತ್ತವೆ. ಮಾನ್ಯ ತಾತಾಚಾರ್ಯ ಶರ್ಮರು 'ಮೈಸೂರ್ ಕ್ರಾನಿಕಲ್' ಎಂಬ ಪತ್ರಿಕೆ ಹೊರತರುತ್ತಿದ್ದರು. ನಾನು ಮತ್ತು ಸಂಪದ್ಗಿರಿರಾಯರು ಅವರೊಡನೆ ಕೆಲಸ ಮಾಡುತ್ತಿದ್ದೆವು. ರಂಗಭೂಮಿಗೆ ಮೀಸಲಾದ ಒಂದು ಪತ್ರಿಕೆಯನ್ನು ಎ.ಡಿ.ಎ. (ಹವ್ಯಾಸಿ ನಾಟಕ ಕಲಾಕಾರರ ಸಂಘ) ವತಿಯಿಂದ ಹೊರತರುತ್ತಿದ್ದೆವು. ಈಗ ಅಂತಹ ಪತ್ರಿಕೆಗಳು ಎಷ್ಟೊಂದಿವೆ ! ನೈತಿಕಮಟ್ಟದಲ್ಲಿ ಏರುಪೇರುಗಳಾಗಿವೆಯೆಂಬುದು ನಿಜ. ಅದನ್ನು ನಾವೆಲ್ಲಾ ಒಟ್ಟಾಗಿ ಸೇರಿ ಸರಿಪಡಿಸಿಕೊಳ್ಳಬೇಕು. ಆದರೆ ಅವಕಾಶಗಳು ಹೆಚ್ಚಿರುವುದನ್ನು ಸ್ವಾಗತಿಸಲೇಬೇಕು.

**ಹೊ** : ಈಗಿನ ಸಾಮಾನ್ಯ ಪ್ರಜ್ಞೆಯ ಬಗ್ಗೆ ನಿಮಗೇನೆನಿಸುತ್ತದೆ ?

**ಶ್ರೀ** : ಒಂದು ರೀತಿಯಲ್ಲಿ ನಾನದನ್ನು ಮೆಚ್ಚಿಕೊಳ್ಳುವವನು. ಎಲ್ಲಾ ಹದಗೆಟ್ಟಿದೆ, ಹಿಂದೆ ಎಲ್ಲಾ ಸೊಗಸಾಗಿತ್ತು ಎನ್ನುವವರ ಮನೋಧರ್ಮವನ್ನೂ ನಾನು ಬಲ್ಲೆ. ಆದರೆ ಕೆಲವು ಅಂಶಗಳನ್ನು ನಾವು ಮರೆಯಬಾರದು. ಉದಾಹರಣೆಗೆ, ೧೯೪೭ಕ್ಕೆ ಮುಂಚೆ ಚುನಾವಣೆಗಳು ಎಷ್ಟು ನಡೆಯುತ್ತಿದ್ದವು ಮತ್ತು ಮತದಾರರು ಯಾರು ? ಎಲ್ಲ ವಯಸ್ಕರಿಗೂ ಮತದಾನದ ಹಕ್ಕಿರಲಿಲ್ಲ. ಯಾರು ಆಸ್ತಿ ತೆರಿಗೆ ನೀಡುತ್ತಿದ್ದು, ನಿಗದಿಗೊಳಿಸಲಾಗಿದ್ದ ವಿದ್ಯಾಭ್ಯಾಸವನ್ನು ಪೂರೈಸಿದ್ದರೋ ಅವರು ಮಾತ್ರ ಮತದಾನದ ಹಕ್ಕು ಪಡೆದಿದ್ದರು. ಇದು ನಿಜವಾದ ಪ್ರಜಾಪ್ರಭುತ್ವವೆ ? ವಿದ್ಯಾವಂತರು ಮಾತ್ರ ಮತದಾರರಾಗಬೇಕೆಂಬ ಕೂಗು ಈಗಲೂ ಇದೆ; ಎಲ್ಲರೂ ವಿದ್ಯಾವಂತರಾಗಬೇಕು ಎನ್ನುವುದು ಸರಿ, ಆದರೆ ಕೇವಲ ವಿದ್ಯಾವಂತರೇ ಮತದಾರರಾಗಬೇಕು ಎನ್ನುವುದು ಒಪ್ಪುವ ಮಾತಲ್ಲ. ಮೊದಲಿಗೆ ಪುರಸಭೆಗಳಲ್ಲಿ ಅಧಿಕಾರಿಗಳು ಮಾತ್ರವೇ ಇರುತ್ತಿದ್ದರು. ಅಧಿಕಾರಿಗಳಲ್ಲದ ಸಾರ್ವಜನಿಕ ಪ್ರತಿನಿಧಿಗಳು ಬಂದದ್ದು ಬಹಳ ತಡವಾಗಿ. ಪುಟ್ಟಣ್ಣ ಚೆಟ್ಟಿಯವರು ಅಧಿಕಾರಿಯಲ್ಲದ ಸಾರ್ವಜನಿಕ ಪ್ರತಿನಿಧಿಯಾಗಿ ಪುರಸಭೆಯ ಅಧ್ಯಕ್ಷರಾದವರಲ್ಲಿ ಮೊದಲಿಗರು. ಅವರೂ ಸರ್ಕಾರದ ಅಧಿಕಾರದಿಂದ ನಿವೃತ್ತರಾಗಿದ್ದವರೇ ! ಅದಿರಲಿ, ಸಾಮಾನ್ಯ ಪ್ರಜ್ಞೆ ಈಗ ಹೆಚ್ಚಿದೆ. ಅದನ್ನು ಸರಿಯಾದ ದಿಕ್ಕಿನಲ್ಲಿ ಬೆಳೆಸಿ ಉಪಯೋಗ ಪಡೆದುಕೊಳ್ಳುವ ಜವಾಬ್ದಾರಿ ಎಲ್ಲರದ್ದೂ ಆಗಿದೆ.

**ಹೊ** : ನೀವು ರಾಷ್ಟ್ರಮಟ್ಟದಲ್ಲಿ ವಿಜಿಲೆನ್ಸ್ ಕಮಿಷನರ್ ಆಗಿದ್ದವರು. ಈಗಿನ ಮಟ್ಟದಲ್ಲಿ ಭ್ರಷ್ಟಾಚಾರ ಆಗ್ಗೆ ಇರಲಿಲ್ಲವೇನೋ, ಆದರೆ ನೈತಿಕ ಪ್ರಶ್ನೆಗಳನ್ನು ಎದುರಿಸಲು ವಿಜಿಲೆನ್ಸ್ ಕಮಿಷನರ್‌ಗೆ ಸಾಧ್ಯವಾಗುತ್ತದೆಯೇ ?

**ಶ್ರೀ** : ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ಸಮಾಧಾನಕಾರಕ ಫಲಿತಾಂಶಗಳು ಕಂಡುಬಂದಿವೆ. ಆದರೆ ವ್ಯಾಪಕವಾದ ನೈತಿಕ ನೆಲೆ ಎಂಬರ್ಥದಲ್ಲಿ ನಮ್ಮ ಯಾವ ಕಮಿಷನ್‌ಗಳೂ ಆಳವಾದ ಬೇರುಗಳನ್ನು ಬೆಳೆಸಿಕೊಂಡು ಯಶಸ್ವಿಯಾಗಿವೆ ಎನ್ನಲಾಗುವುದಿಲ್ಲ. ಅಲ್ಲದೆ, ವಿಜಿಲೆನ್ಸ್ ಕಮಿಷನ್‌ನ ಪರಿಧಿಗೆ ಬರುವವರು ಸರ್ಕಾರಿ ಮತ್ತು ಸಾರ್ವಜನಿಕ ಸೇವೆಯಲ್ಲಿರುವ ಅಧಿಕಾರಿಗಳು ಮಾತ್ರ; ರಾಜಕೀಯ ನಾಯಕರು ಅದರ ಪರಿಧಿಗೆ ಸೇರುವುದಿಲ್ಲ.

**ಹೊ** : ನ್ಯಾಯಾಂಗದ ಕ್ರಿಯಾಶಾಲಿತ್ವವೆಂದು ಈಚಿನ ಕೆಲವು ವರ್ಷಗಳಲ್ಲಿ ಒಂದು ಪ್ರಕ್ರಿಯೆ ಚಾಲ್ತಿಯಲ್ಲಿದೆ. ಅದರಿಂದೇನಾದರೂ ಪರಿಸ್ಥಿತಿ ಸುಧಾರಿಸಬಹುದೆ, ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ಶ್ರೀ** : ಇದಕ್ಕೆ ಸುದೀರ್ಘವಾದ ಹಿನ್ನೆಲೆ ಮತ್ತು ವಿವರಣೆ ಅಗತ್ಯವಾಗುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ನಾನು ಆಗಲೇ ಪ್ರಸ್ತಾಪಿಸಿದ ಮತದಾನದ ಹಕ್ಕಿನ ವಿಷಯವನ್ನು ನೆನಪಿನಲ್ಲಿಡಬೇಕು. ಔದ್ಯಮಿಕ ಕ್ಷೇತ್ರದ ಬಿಕ್ಕಟ್ಟುಗಳನ್ನು ಕುರಿತು ಶಾಸನವೊಂದು ನಮ್ಮಲ್ಲಿದೆ. ಸರ್ಕಾರವು ಇಂತಿಂಥದನ್ನು ಮಾಡಬೇಕೆಂದು ನಿರ್ದೇಶಿಸುವ 'ಮ್ಯಾಂಡಮಸ್' ಎನ್ನುವ ಆಜ್ಞೆಯನ್ನು ನ್ಯಾಯಾಂಗ ನೀಡಬಹುದು. 'ಹೇಬಿಯಸ್ ಕಾರ್ಪಸ್' (ಯಾರನ್ನಾದರೂ ನ್ಯಾಯಾಂಗದೆದುರು ಹಾಜರುಪಡಿಸಬೇಕೆಂದು ಸೂಚಿಸುವ ಆಜ್ಞೆ) ಇದೆ. ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳನ್ನು ನಮೂದಿಸಲಾಗಿದೆ. ಒಟ್ಟಿನಲ್ಲಿ ಕಾನೂನಿನ ಚೌಕಟ್ಟು ವಿಶಾಲವಾಗಿದೆ. ಆದರೆ ಎಲ್ಲದಕ್ಕೂ ನಮ್ಮಲ್ಲಿ ಹಿಂದಿನ ತೀರ್ಪುಗಳು ಸಮರ್ಥನೆ ನೀಡಬೇಕೆಂಬ ಸಂಪ್ರದಾಯ ಬೆಳೆದುಬಿಟ್ಟಿದೆ. ಎಲ್ಲ ವ್ಯವಹಾರಗಳಿಗೂ 'ಪ್ರಿಸಿಡೆನ್ಸ್' ಇರಬೇಕೆಂದರೆ 'ಪ್ರೋಗ್ರೆಸ್' ಕುಂಠಿತವಾಗುವ ಸಾಧ್ಯತೆ ಇರುತ್ತದೆ. ಹೊಸ ಸನ್ನಿವೇಶಕ್ಕೆ ಹಳೆಯ ಒಂದು ಘಟನೆ ಅಥವಾ ತೀರ್ಮಾನದ ಸಮರ್ಥನೆಯ ಅವಶ್ಯಕತೆ ಎಲ್ಲಿದೆ ? ಮತ್ತೆ ಎಲ್ಲದಕ್ಕೂ ಬ್ರಿಟನ್ನಿನತ್ತ ನೋಡುವುದು ನಮ್ಮ ರೂಢಿ. ಅಲ್ಲಿಯ ನ್ಯಾಯಾಂಗ ಯಾವುದೋ ಮೊಕದ್ದಮೆಯಲ್ಲಿ ಏನು ಹೇಳಿತು, ಇತ್ಯಾದಿ. ನ್ಯಾಯಾಂಗವು ನೀಡುವ ತೀರ್ಮಾನಗಳು ರಾಜ್ಯ ಪ್ರಭುತ್ವಕ್ಕೆ ಅಂತಿಮ ಕಾನೂನಾಗಿ ಪರಿಗಣನೆಗೆ



ಬರುತ್ತದೆಯಾದ್ದರಿಂದ ಸಾಮಾನ್ಯವಾಗಿ ನ್ಯಾಯಾಂಗವು ಸಂಪ್ರದಾಯ ಶರಣತೆಯನ್ನು ಪ್ರದರ್ಶಿಸುತ್ತದೆ. ಒಂದು ಪ್ರಶ್ನೆ ಎತ್ತಲು ಯಾರಾದರೂ ಬಂದರೆ ಮೊದಲಿಗೆ ಇದರಲ್ಲಿ ಆತನಿಗೆ ಸಂಬಂಧಪಟ್ಟದ್ದೇನಿದೆ ಎಂಬುದನ್ನು ನ್ಯಾಯಾಂಗವು ಸ್ಪಷ್ಟಪಡಿಸಿಕೊಳ್ಳುತ್ತದೆ. ಅದನ್ನು 'ಲೋಕಸ್ ಸ್ಟ್ಯಾಂಡೈ' ಎನ್ನುತ್ತೇವೆ. ಅಂದರೆ, ಸುಮ್ಮಸುಮ್ಮನೆ ನೀನು ಮೂಗುತೂರಿಸಲು ಬರಬೇಡ ಎಂಬರ್ಥ. ಸದಾಕಾಲಕ್ಕೂ ಈ ಸೂತ್ರ ಅನ್ವಯವಾಗಲು ಸಾಧ್ಯವೆ ? ನನಗೆ ನೇರವಾಗಿ ತಟ್ಟದೆ ಇದ್ದರೂ ನನ್ನ ಸುತ್ತಮುತ್ತಣ ಘಟನೆಗಳು ಆಸಕ್ತಿ ಮೂಡಿಸುತ್ತವೆ. ಇತರರ ಕಷ್ಟ-ಸುಖಗಳು ನನ್ನ ಆಕಾಂಕ್ಷೆಗೆ ಹೊರತಾದುವಲ್ಲ. ಆದ್ದರಿಂದ ನನಗೇ ನೇರವಾಗಿ ಅನ್ಯಾಯವಾದಾಗ ಮಾತ್ರ ನಾನು ನ್ಯಾಯಾಂಗಕ್ಕೆ ದೂರು ಒಯ್ಯಬೇಕೆಂಬುದು ಕ್ರಮೇಣ ಮಾನ್ಯತೆ ಕಳೆದುಕೊಳ್ಳುತ್ತದೆ. ಎಲ್ಲವೂ ಎಲ್ಲರಿಗೂ ಸಂಬಂಧಿಸಿದ್ದು. ಕೇವಲ ಖಾಸಗಿಯಾದ ವಿಷಯಗಳನ್ನು ಬಿಡಿ; ಎಲ್ಲರಿಗೂ ಅನ್ವಯವಾಗುವ ಕಾನೂನು, ಅದರ ಅರ್ಥೈಸುವಿಕೆ, ಅದರ ಅನ್ವಯ ಇರುತ್ತವೆಯಲ್ಲವೆ ? ನ್ಯಾಯಾಂಗವೂ ನಿಧಾನವಾಗಿ ಇಂತಹ ಉದಾರ ನಿಲುವನ್ನು ತಾಳುವತ್ತ ಸರಿದಿದೆ. ಅದಕ್ಕೆ ಮೊದಲು ಚಾಲನೆ ಕೊಟ್ಟವರು ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್. ಎಲ್ಲಿ ಪರಿಣಾಮವು ಎಲ್ಲರ ಮೇಲೂ ಇರುತ್ತದೋ ಅಂತಹ ಸಂದರ್ಭದಲ್ಲಿ ನೇರವಾಗಿ ನೊಂದವನೇ ನ್ಯಾಯಾಂಗದ ಮೆಟ್ಟಿಲು ಹತ್ತಬೇಕಾಗಿಲ್ಲವೆಂದು ಅವರು ಹೊಸ ಪದ್ಧತಿಯನ್ನು ಜಾರಿಗೆ ತಂದರು. ಸಾರ್ವಜನಿಕ ಹಿತಾಸಕ್ತಿ ರಕ್ಷಿಸುವ ಕಾನೂನು ಕ್ರಮಗಳು ಅಸ್ತಿತ್ವಕ್ಕೆ ಬಂದಿದ್ದು ಹೀಗೆ.

ನ್ಯಾಯಾಂಗದ ಕ್ರಿಯಾಶೀಲತೆಯು ನ್ಯಾಯಾಂಗದ ಸಾಮ್ರಾಜ್ಯದ ವಿಸ್ತರಣೆಯಲ್ಲ. ತನ್ನ ಅಧಿಕಾರವನ್ನು ಚಲಾಯಿಸುವುದರಲ್ಲಿ ನ್ಯಾಯಾಂಗವು ಜಾಗರೂಕತೆ ವಹಿಸುತ್ತದೆ. ನಮ್ಮ ರಾಜಕಾರಣವೆಲ್ಲಾ ಸಂವಿಧಾನದ ಚೌಕಟ್ಟಿನಲ್ಲಿ ನಡೆಯಬೇಕೆಂಬ ನಿರೀಕ್ಷೆಯನ್ನು ಹುಸಿ ಮಾಡಿ, ಅಧಿಕಾರ ಲಾಲಸೆಯಿಂದ ಯಾರಾದರೂ ಕಾರ್ಯಾಂಗವನ್ನು ದುರುಪಯೋಗಪಡಿಸಿಕೊಂಡರೆ ಆಗ ಏನು ಮಾಡಬೇಕು ? ದುಂಡಾವರ್ತಿಯಿಂದ ಅಧಿಕಾರ ಚಲಾಯಿಸುವಂತಿರಬಾರದು. ನ್ಯಾಯಾಂಗದ ವಿರುದ್ಧ ಆಪಾದನೆ ಹೊರಿಸುವವರು ಬಹುಶಃ ತಮ್ಮ ಅಧಿಕಾರಕ್ಕೆ ಕಡಿವಾಣ ಹಾಕಲಾಯಿತೆಂದು ಭಾವಿಸುತ್ತಾರೆ. ವಸ್ತುತಃ ನೋಡಿದರೆ ನ್ಯಾಯಾಂಗವು ತನ್ನ ವ್ಯಾಪ್ತಿಯನ್ನು ಮೀರುವುದಿಲ್ಲ, ಮೀರಬಾರದು. ಶಾಸಕಾಂಗದ ಹಕ್ಕನ್ನು ಮೊಟಕುಗೊಳಿಸುವುದು ಅದರ ಉದ್ದೇಶವಲ್ಲ. ಯಾವುದೇ ಶಾಸನವು ಸಂವಿಧಾನಬದ್ಧವಾಗಿದೆಯೆ. ಅದನ್ನು ಮಾಡಿದವರಿಗೆ ಅಂತಹ ಶಾಸನ ಮಾಡುವ ಹಕ್ಕುಂಟೆ, ಎಂಬುದಷ್ಟೇ ನ್ಯಾಯಾಂಗದ ಪರಿಗಣನೆಗೆ ಬರುವುದು. ನ್ಯಾಯಾಂಗಕ್ಕೂ ತನ್ನದೇ ಆದ ಮಿತಿಗಳಿವೆ. ಅದನ್ನು ಮೀರಿದರೆ ಯಾರು ಬೇಕಾದರೂ ಪ್ರಶ್ನಿಸಬಹುದು. ಶಾಸಕಾಂಗದ ವ್ಯಾಪ್ತಿಗೆ ಬರುವುದನ್ನು ನ್ಯಾಯಾಂಗವು ಮಾಡಿದರೆ ಅದನ್ನು ಶಾಸಕಾಂಗವು ಪ್ರಶ್ನಿಸಬೇಕು. ಅದಕ್ಕೆ ಬೇರೆ ಮಾರ್ಗ ಇನ್ನೇನಿರಲು ಸಾಧ್ಯ ?



ಒಂದು ಉದಾಹರಣೆ ನೋಡಿ : ಸಂವಿಧಾನದ ೨೧ನೇ ನಿಬಂಧವು ಜೀವನ ಮತ್ತು ಸ್ವಾತಂತ್ರ್ಯಗಳಿಗೆ ಸಂಬಂಧಿಸಿದ್ದು. ಅಂದರೆ, ಕಾನೂನಿನ ಚೌಕಟ್ಟನ್ನು ಯಾರೂ ಮೀರುವಂತಿಲ್ಲವೆಂದು ಅದು ವಿಧಿಸುತ್ತದೆ. ಈಗ ನಮ್ಮ ಮುಂದಿರುವ ಪ್ರಶ್ನೆ ಆ ನಿಬಂಧವನ್ನು ಹೇಗೆ ಅರ್ಥೈಸಬೇಕೆಂಬುದು. ಯೋಗ್ಯವಾದ ಜೀವನ ನಡೆಸಲು ಸಾಧ್ಯವಾಗದಂತಹ ಸನ್ನಿವೇಶವೊಂದಿದ್ದರೆ ಅದನ್ನು ತೊಡೆದುಹಾಕಬೇಕು. ಇಲ್ಲದಿದ್ದರೆ ಮಾನವನ ಜೀವನ ಬರಡಾಗುತ್ತದೆ. ಅಂತಹ ಸನ್ನಿವೇಶದ ಸೃಷ್ಟಿ ಮತ್ತು ರಕ್ಷಣೆಯೂ ಈ ನಿಬಂಧದಡಿಯಲ್ಲಿ ಬರುತ್ತದೆ. ಹಾಗೆ ಮಾಡುವುದಷ್ಟೇ ನ್ಯಾಯಾಂಗದ ಕ್ರಿಯಾಶೀಲತೆ ಎಂಬುದರ ಅರ್ಥ; ಅಂದರೆ, ಸಂವಿಧಾನದ ನಿಬಂಧದ ವ್ಯಾಪ್ತಿಯನ್ನು ಹೆಚ್ಚಿಸುವುದು. ಸಹಜವಾಗಿಯೇ ಯಾವ ಕಾನೂನು ಸಹ ಸಂಕೀರ್ಣ ಜೀವನದ ಎಲ್ಲ ಸಾಧ್ಯತೆಗಳನ್ನೂ, ಸನ್ನಿವೇಶಗಳನ್ನೂ ಮೊದಲು ಕಲ್ಪಿಸಿಕೊಂಡು ಅದಕ್ಕೆ ಸೂಕ್ತ ಪರಿಹಾರ ಕೊಟ್ಟುಬಿಟ್ಟಿರುವುದಿಲ್ಲ. ಆದ್ದರಿಂದ ಕಾನೂನು ಸದಾ ವಿಸ್ತಾರವಾಗುತ್ತಲೇ ಇರುತ್ತದೆ. ಎಷ್ಟು ವಿಸ್ತಾರವೆಂಬುದನ್ನು ನ್ಯಾಯಾಂಗ ತಿಳಿಸಿಕೊಡಬಹುದು. ಸರ್ವೋಚ್ಚ ನ್ಯಾಯಾಲಯಕ್ಕೆ ಕೂಡ ತನ್ನದೇ ಆದ ಪೂರ್ವ ತೀರ್ಮಾನಗಳ ಒತ್ತಾಸೆ ಇರುತ್ತದೆ. ಬ್ರಿಟನ್ನಿನ ಪ್ರಿವಿ ಕೌನ್ಸಿಲ್ಲಿನ ಮುಖ್ಯಸ್ಥನಾದ ಲಾರ್ಡ್ ಚಾನ್ಸಲರ್ ಒಮ್ಮೆ ಹೇಳಿದ್ದಂತೆ ''ತನ್ನ ತೀರ್ಮಾನಗಳ ಪುನರ್ವಿಮರ್ಶೆ ಮಾಡಿಕೊಳ್ಳಲು ಸರ್ವೋಚ್ಚ ನ್ಯಾಯಾಲಯಕ್ಕೆ ಮುಕ್ತ ಅವಕಾಶವಿದೆ.'' ಆದರೆ ಬ್ರಿಟನ್ನಿನ ಪಾರ್ಲಿಮೆಂಟಿನ ಮೇಲ್ಮನೆಯಾದ ಹೌಸ್ ಆಫ್ ಲಾರ್ಡ್ಸ್ ಇದನ್ನೊಪ್ಪಲಿಲ್ಲ. ಬ್ರಿಟನ್ನಿನಲ್ಲಿ ಲಿಖಿತ ಸಂವಿಧಾನವೊಂದಿಲ್ಲ. ಅಲ್ಲಿಯ ಪಾರ್ಲಿಮೆಂಟ್ ಯಾವ ಶಾಸನವನ್ನು ಮಾಡುತ್ತದೆಯೋ ಅದೇ ಆ ದೇಶದ ಅತ್ಯುಚ್ಚ ಕಾನೂನು. ನಮ್ಮದು ಹಾಗಲ್ಲ. ನಮಗೆ ಲಿಖಿತ ಸಂವಿಧಾನವಿದೆ. ಅದೇ ನಮ್ಮ ಮೂಲಸೂತ್ರ. ಅದರ ಅರ್ಥವ್ಯಾಪ್ತಿಯನ್ನು ಸರ್ವೋಚ್ಚ ನ್ಯಾಯಾಲಯವು ವ್ಯಾಖ್ಯಾನಿಸಿ ಹೇಳುತ್ತದೆ.

**ಹೊ** : ಸಂವಿಧಾನ ಪುನರ್ವಿಮರ್ಶಾ ಮಂಡಲಿಯ ರಚನೆಯಾಗಿದೆ. ಅದರ ಬಗ್ಗೆ ಏನು ಹೇಳುತ್ತೀರಿ ?

**ಶ್ರೀ** : ಅದು ಮೂರ್ಖತನದ ಕೆಲಸವಾಗಿಹೋಗಿದೆ. ಮೊದಲಿನಲ್ಲೇ ಎಡವಿದ್ದು ಇದರಲ್ಲಿ ಸ್ಪಷ್ಟವಾಗಿದೆ. ಈಗಿನ ಸರ್ಕಾರ ಭಾರತೀಯ ಜನತಾ ಪಕ್ಷದ್ದು. ಮುಂಚೆ ಎರಡು ಬಾರಿ ಅಧಿಕಾರ ಪಡೆದು ಅದನ್ನು ಕಳೆದುಕೊಂಡಿದ್ದರು. ಅದಕ್ಕೇ ಈಗ ಸಂಮಿಶ್ರ ಸರ್ಕಾರ ರಚಿಸಿರುವುದು. ನಾವು ಪೂರ್ತಿ ಐದು ವರ್ಷ ಬಾಳುವುದು ಹೇಗೆ ಎಂಬುದೇ ಅವರಿಗೆ ಆದ್ಯತೆಯ ಪ್ರಶ್ನೆ ಆಗಿಬಿಟ್ಟಿತು. ಪಾರ್ಲಿಮೆಂಟಿನಲ್ಲಿ ಬಹುಮತ ಕಳೆದುಕೊಂಡರೂ ಪೂರ್ತಿ ಐದು ವರ್ಷ ಇರಬೇಕೆಂದರೆ ಏನರ್ಥ ? ಹಿಂಬಾಗಿಲಿನಿಂದ ಅಧ್ಯಕ್ಷೀಯ ಮಾದರಿ ಸರ್ಕಾರವನ್ನು ಅಸ್ತಿತ್ವಕ್ಕೆ ತರುವುದೇ ಅಲ್ಲವೆ !

**ಹೊ** : ಸಂವಿಧಾನವನ್ನು ಬದಲಾಯಿಸಲು ಈ ಸರ್ಕಾರಕ್ಕೆ ಬಹುಮತವಿಲ್ಲದಿದ್ದರೂ ಈ ಮುಸುಕಿನಾಟ ಏಕೆ ನಡೆಯುತ್ತಿದೆ ?

**ಶ್ರೀ** : ಈ ಸಂವಿಧಾನವೇ ಒಂದು ಅಡಚಣೆಯೆಂದು ಜನಕ್ಕೆ ತಿಳಿಸಲು ಪ್ರಯತ್ನವಿರಬಹುದು. ಆದರೆ ಸಂವಿಧಾನದ ಮೂಲತತ್ತ್ವಗಳನ್ನು ಬದಲಿಸುವ ಉದ್ದೇಶವಿಲ್ಲವೆಂದು ಹೇಳಿದ್ದಾರೆ. ಅಂದರೆ, ಮೊದಲ ಹೆಜ್ಜೆಯಲ್ಲಿ ಅವರು ಮುಗ್ಗರಿಸಿದ್ದಾರೆ.

**ಹೊ** : ಈ ಮೂಲತತ್ತ್ವ ಯಾವುದು ? ಅದನ್ನು ಹಾಗೆಂದು ನಿರ್ಧರಿಸುವವರು ಯಾರು ?

**ಶ್ರೀ** : ಗೋಲಕನಾಥ ಮೊಕದ್ದಮೆಯಲ್ಲಿ ನ್ಯಾಯಮೂರ್ತಿ ಸುಬ್ಬರಾವ್ ನೇತೃತ್ವದ ತೀರ್ಪು ಪ್ರಸಿದ್ಧವಾಗಿದೆ. ನಿಬಂಧ ೩೬೮ರ ಪ್ರಕಾರ ಸಂವಿಧಾನವನ್ನು ತಿದ್ದುವ ಹಕ್ಕು ತಮಗಿದೆಯೆಂದು ಪಾರ್ಲಿಮೆಂಟ್ ಸದಸ್ಯರು ಹೇಳುತ್ತಿದ್ದರು. ಕೆಲವನ್ನು ತಿದ್ದುವುದು ಅವರ ಹಕ್ಕಿಗೆ ಹೊರತಾದ್ದೆಂದು ನ್ಯಾಯಾಲಯ ಹೇಳುತ್ತಿದೆ. ಒಂದಂಶವಂತೂ ನಿರ್ವಿವಾದವಾದ್ದು. ಯಾವ ಸಂವಿಧಾನದಲ್ಲೂ ಸರ್ವಜ್ಞತ್ವ ಇರುವುದಿಲ್ಲ. ಯಾವುದೂ ಸರ್ವಕಾಲಾಬಾಧಿತವೂ ಅಲ್ಲ. ಈಗಿನ ಚಿಂತನೆ, ವ್ಯವಸ್ಥೆ, ಆಂತರಿಕ ಸಂಬಂಧಗಳು, ಕಟ್ಟುಪಾಡುಗಳು ಇವೆಲ್ಲಾ ಒಂದು ಸಾವಿರ ವರ್ಷ ಕಳೆದರೂ ಹೀಗೇ ಇರಬೇಕೆಂದು ಹೇಳುವುದು ಸರಿಯೆ ? ಸಮಾಜ ಬದಲಾಗದೆ ಸ್ಥಗಿತವಾಗಿರುತ್ತದೆಯೆ ? ಪ್ರತಿಯೊಂದು ಪೀಳಿಗೆಯೂ ತನ್ನ ವಿವೇಕದ ಎಲ್ಲೆಗಳನ್ನು ಅರಿತುಕೊಳ್ಳಬೇಕು. ನಾಳೆ ಹೇಗಿರುತ್ತದೆಂದು ಇಂದು ಭವಿಷ್ಯ ನುಡಿಯಲಾಗುವುದಿಲ್ಲ. ಹಿಂದೊಂದು ಕಾಲವಿತ್ತು : ಚಾತುರ್ವರ್ಣ್ಯ ವ್ಯವಸ್ಥೆ ಸ್ವಾಭಾವಿಕವಾದ್ದೆಂದು ನಂಬಿದ್ದ ಕಾಲ ಅದು. ಈಗ ಅದನ್ನು 'ಸ್ವಾಭಾವಿಕ' ಎಂದು ಒಪ್ಪುತ್ತೇವೆಯೆ ? ಒಳಿತು-ಕೆಡಕುಗಳ ಬಗೆಗಿನ ನಮ್ಮ ಇಂದಿನ ತಿಳಿವಳಿಕೆ ಸದಾಕಾಲಕ್ಕೂ ಮಾನ್ಯವೇ ? ಆಸ್ತಿಯ ಹಕ್ಕೋ ಇನ್ನೊಂದೋ ಯಾವಾಗಲೂ ಇಂದಿನಂತೆಯೇ ಇರಬೇಕೆಂದು ವಿಧಿಸಲು ನಮಗೆ ಅಧಿಕಾರವೆಲ್ಲಿದೆ ?

**ಹೊ** : ಹಿಂದಿನ ಕಾಲದಲ್ಲಿ ತಮ್ಮದೇ ಆದ ರೀತಿಯಲ್ಲಿ ಒಳಿತು-ಕೆಡಕುಗಳನ್ನು ವ್ಯಾಖ್ಯಾನಿಸಿದ್ದರಲ್ಲವೆ ? ಸಂವಿಧಾನ ಎಂಬುದಿಲ್ಲದಿದ್ದರೂ ವ್ಯವಸ್ಥೆಯ ಕಲ್ಪನೆ ಇದ್ದಿತಲ್ಲವೆ ?

**ಶ್ರೀ** : ನಮ್ಮ ರಾಮಾಯಣ - ಮಹಾಭಾರತಗಳಂತಹ ಮಹಾಕಾವ್ಯಗಳನ್ನು ನೋಡಿದರೆ ಸಾಂಸ್ಥಿಕವಾಗಿ ಎರಡು ಮೂಲಾಂಶಗಳನ್ನು ವಿಕಾಸಗೊಳಿಸಿದ್ದರೆಂದು ತೋರುತ್ತದೆ : ಒಂದು, ಆಡಳಿತ ವ್ಯವಸ್ಥೆ; ಇನ್ನೊಂದು, ಆಳುವ ರಾಜನೆಂಬ ಪರಿಕಲ್ಪನೆ. ಮಾನವಿಕ ಮೌಲ್ಯಗಳ ಬಗ್ಗೆ ತಿರಸ್ಕಾರ ಭಾವನೆ ಇರಲಿಲ್ಲ. ಅವು ಸೌಹಾರ್ದದ ವಾತಾವರಣದಲ್ಲಿ ಮಾತ್ರವೇ ಅಸ್ತಿತ್ವದಲ್ಲಿರಬಲ್ಲವು. ದುರಾಸೆ ಹೇಗೆ ಮತ್ತು ಏಕೆ ಹುಟ್ಟಿತೋ ತಿಳಿಯದು. ಆದರೆ ಅದು ಕೆಲವರಲ್ಲಿ ಉಂಟಾದಾಗ ಅದನ್ನು ಹದಕ್ಕೆ ತರಲು ರಾಜಪ್ರಭುತ್ವ ಬೇಕೆಂಬ ಕಲ್ಪನೆ ಅರ್ಥವಾಗುತ್ತದೆ. ಮುಖ್ಯವಾಗಿ ನ್ಯಾಯದ ಬುನಾದಿ ಏನಾಗಿರಬೇಕು ? - ಪ್ರಕೃತಿಯು ಏನನ್ನು ಸೂಚಿಸುತ್ತದೋ ಅದು ಸ್ವಾಭಾವಿಕ ನ್ಯಾಯ, ಕಾನೂನು. ಅದರಲ್ಲಿ ನ್ಯೂನತೆ ಉಂಟಾದಾಗ ಅಥವಾ ಅದನ್ನು ಯಾರೋ ಮುಕ್ಕು ಮಾಡಲು ಹೊರಟಾಗ ಪ್ರತಿಬಂಧಕ ಒಡ್ಡಬೇಕು. ನಮ್ಮ ವ್ಯವಸ್ಥೆಯ ಮುಖ್ಯ ಕೆಲಸ ಅದೇ. ಮಾನವ ಸಮಾಜದ ವಿಕಾಸ ಎಂದಿಗೂ ಪೂರ್ಣವಲ್ಲ. ನಾಗರಿಕ ಪ್ರಜ್ಞೆ ಮೂಡಿ ಒಂದು ತಿಂಗಳಾಗಿದೆ ಎನ್ನಬಹುದು. ಅದಕ್ಕೆ ಹಿಂದಿನ ೯೯ ವರ್ಷ ೧೧ ತಿಂಗಳು ಆ ಪ್ರಜ್ಞೆ ಇಲ್ಲದೆ ಕಳೆದ ಕಾಲ. ಊಳಿಗಮಾನ್ಯ ಪದ್ಧತಿ, ರಾಜನ ದೈವೀ ಹಕ್ಕು, ಪರರಾಷ್ಟ್ರಗಳನ್ನು ತಮ್ಮ ಸ್ವತ್ತೆಂದು ಅನುಭೋಗಿಸುವುದು, ಇವೆಲ್ಲಾ ನಾಗರಿಕ ಪ್ರಜ್ಞೆ ಇಲ್ಲದ ಕಾಲದ ಸಂಗತಿಗಳು. ರಾಷ್ಟ್ರವೆಂಬ ಕಲ್ಪನೆ ಕೂಡ ಆಧುನಿಕವಾದ್ದು. ರವೀಂದ್ರನಾಥ ಟಾಗೋರ್ ಏನು ಹೇಳುತ್ತಿದ್ದರು ಗೊತ್ತೆ ? - ತೀವ್ರವಾದ ರಾಷ್ಟ್ರೀಯತೆ ಎಂಬುದು ಅಪಾಯಕಾರಿ ಎಂದು. ಪ್ರಜಾಪ್ರಭುತ್ವ ಇದನ್ನೆಲ್ಲಾ ಜೀರ್ಣಿಸಿಕೊಳ್ಳುತ್ತದೆ.

**ಹೊ** : ಹಾಗಾದರೆ ಪ್ರಜಾಪ್ರಭುತ್ವದ ಲಕ್ಷಣ ಯಾವುದು ?

**ಶ್ರೀ** : ಅದು ಬಹಳ ಸಂಕೀರ್ಣವಾದ್ದು. ಅಮೆರಿಕಾದ ಐ. ಎಫ್. ಸ್ಟೋನ್ ಎಂಬಾತ ಸಾಕ್ರಟೀಸ್ ಬಗ್ಗೆ ಬರೆದಿದ್ದಾನೆ. ಪ್ರಾಚೀನ ಗ್ರೀಸಿನಲ್ಲಿ ಅವನಿಗೆ ವಿಷ ಉಣಿಸಿ ಸಾಯಿಸಿದ್ದು ಸರಿ, ಏಕೆಂದರೆ ಅವನು ಪ್ರಜಾಪ್ರಭುತ್ವದ ವಿರೋಧಿಯಾಗಿದ್ದ ಎಂಬುದು ಆತನ ವಾದ. ಅದು ಸರಿಯೋ ತಪ್ಪೋ ನೀವೇ ತೀರ್ಮಾನಿಸಿಕೊಳ್ಳಿ. ಒಂದು ಮಾತಂತೂ ನಿಜ: ಪ್ರಜಾಪ್ರಭುತ್ವವು ಸರಾಸರಿ ನಿಯಮದಂತೆ ನಡೆಯುತ್ತದೆ. ಎಲ್ಲಾ ಶ್ರೇಷ್ಠರು, ಪರಿಣತರು, ಮೌಲ್ಯಗಳ ರಕ್ಷಕರು, ಎಂದಲ್ಲ; ಅಥವಾ ಎಲ್ಲರೂ ಕಬಳಿಸುವ ಜನರೇ ಎಂದೂ ಅಲ್ಲ. ಇದೊಂದು ಮಿಶ್ರಣ. ಬಹುಮತ ಎನ್ನುವುದು ಒಂದು ವಿಶಾಲ ತಳಹದಿ ಒದಗಿಸುತ್ತದೆ, ಅಷ್ಟೆ. ವೈಯಕ್ತಿಕ ನೆಲೆಯಲ್ಲಿ ನಿಂತು ತೀರ್ಮಾನ ಕೊಡುವುದನ್ನು ಸಂಪೂರ್ಣವಾಗಿ ತೊಡೆದುಹಾಕಲು ಸಾಧ್ಯವೆಂದು ನನಗನಿಸುವುದಿಲ್ಲ. ಎಲ್ಲರ ಒಪ್ಪಿಗೆಯನ್ನೂ ಪಡೆದಂತಹ ಅಂಶವೆಂದು ಯಾವುದನ್ನಾದರೂ ಹೇಳಿದರೆ ಅದು ಭ್ರಮೆ. ಯಾರನ್ನೂ ಕೇಳದೆ ವರ್ತಿಸುವ ಸರ್ವಾಧಿಕಾರಿಗಿಂತಲೂ ಬಹುಮತದಂತೆ ನಡೆಯುವ ಪ್ರಜಾಪ್ರಭುತ್ವದ ಕ್ರಮ ಉತ್ತಮವಾದ್ದು. ಯಾವನೋ ರಾಜನಿಗೆ ದೈವೀ ಹಕ್ಕಿದೆ ಎಂಬುದು ಪುರಾಣದ ಕಂತೆ, ಅಷ್ಟೆ. ಈಗಿನ ಹಂತದಲ್ಲಿ ''ರಾಜಾ ಪ್ರತ್ಯಕ್ಷ ದೇವತಾ'' ಎನ್ನುವುದು ಖಂಡಿತಾ ಸಾಧ್ಯವಿಲ್ಲ. ಬೇರೆಯದಕ್ಕಿಂತ ಪ್ರಜಾಪ್ರಭುತ್ವ ವಾಸಿ ಎಂದು ಹೇಳಲು ಅಡ್ಡಿಯಿಲ್ಲ. ಪ್ರಜಾಪ್ರಭುತ್ವವಿತ್ತೆಂದು ಹೇಳಲಾಗುವ ಪ್ರಾಚೀನ ಗ್ರೀಸಿನಲ್ಲಿ ಪ್ಲೇಟೋ ಗುಲಾಮಗಿರಿಯನ್ನು ಸಮರ್ಥಿಸಿದ್ದ. ಆದರೆ ಸೈದ್ಧಾಂತಿಕ ತಿಳಿವಳಿಕೆಯೂ ಬೆಳೆದಿದೆ. ಗುಲಾಮಗಿರಿಯನ್ನು ಸಮರ್ಥಿಸುವಂತಹ ಪ್ರಜಾಪ್ರಭುತ್ವ ಇಂದು ನಮಗೆ ಬೇಡ.

**ಹೊ** : ನಿಮ್ಮೊಡನೆ ಹೀಗೇ ಇನ್ನೂ ಎಷ್ಟೋ ವಿಷಯಗಳನ್ನು ತಿಳಿಯಬೇಕೆಂಬ ಕುತೂಹಲ ನಮ್ಮದು. ಅದಕ್ಕೆ ಮತ್ತೆ ಮತ್ತೆ ಅವಕಾಶ ದೊರಕಲೆಂದು ಆಶಿಸುತ್ತಾ ನಿಮ್ಮ ಜೊತೆಗಿನ ಈಗಿನ ಚರ್ಚೆಯನ್ನು ಸದ್ಯಕ್ಕೆ ಇಲ್ಲಿಗೆ ನಿಲ್ಲಿಸೋಣ. ನಿಮಗೆ ನಾವು ಕೃತಜ್ಞರು. ಆದರೆ ಇನ್ನೊಂದು ಸಣ್ಣ ಪ್ರಶ್ನೆ. ನಿಮ್ಮ ದೀರ್ಘಾಯುಷ್ಯದ ಗುಟ್ಟೇನು ?

**ಶ್ರೀ** : ಅದು ನನ್ನಿಂದಲೂ ಗುಟ್ಟಾಗಿಯೇ ಉಳಿದಿದೆ !

**ಹೊ** : ಗುಟ್ಟು ಏನೇ ಇರಲಿ, ನೀವು ಬಹುಕಾಲ ನಮ್ಮ ಮಧ್ಯೆ ಇದ್ದು ಈಗಿನಂತೆಯೇ ನಮಗೆಲ್ಲಾ ಸ್ಫೂರ್ತಿ ತುಂಬುತ್ತಿರಬೇಕೆಂಬುದು ನಮ್ಮ ಆಶಯ. ನಮಸ್ಕಾರ.

❑❑❑

# ಹೀಗೇಕೆ ?

ಚಾರಣದಿ ಮುನ್ನಡೆವ ಗುಂಗಿನಲಿ ದಿಕ್ಕೆಟ್ಟು
ದಾರಿಯು ಕಳೆದಿರಲು ಅಲೆದಲೆದು ಕಂಗೆಟ್ಟು
ಹೊತ್ತಾಗಿ ಹೋಗಿರಲು, ಕಪ್ಪಿರುಳು ಕವಿದಿರಲು
ಗೊತ್ತುಗುರಿಯಿಲ್ಲವಾಯ್ತು ಅಂದೆನಗೆ !

ತರುಲತೆಗಳು ಓಲಾಡುತಿವೆ ಕರಿಭೂತಗಳಂತೆ
ಇನಿಯನ ತಬ್ಬಿರುವ ರತಿಯೆಂದುಕೊಂಡಿದ್ದ
ಬಳ್ಳಿಗಳು ಕಾಣುತಿವೆ ವಿಷನಾಗರದಂತೆ!

ಚಿಲಿಪಿಲಿ, ಜುಳು ಜುಳು, ಮಂಜುಳ ಮಾಧುರ್ಯಗಳು
ನಿಡುಸುಯ್ವ ದೆವ್ವಗಳ ಬಿಕ್ಕಳಿಕೆಯಂತೆ



ಈ ಹಳ್ಳವ ಹಾರಿದ್ದೆನೇ ? ಆ ಬಂಡೆಯಲ್ಲಿ ಜಾರಿದ್ದೆನೇ ?
ಗುರುತಿಟ್ಟುಕೊಂಡಿದ್ದ ಆ ಡೊಂಕು ಮರವೆಲ್ಲಿ ?
ಆಲಿಬಾಬನ ಒಣಿಯ ಬಾಗಿಲುಗಳಂತೀಗ
ಎಲ್ಲೆಲ್ಲೂ ಕಾಣುವುದು ಡೊಂಕು ಮರಗಳ ಸಾಲು !

ಪುಡಿಯಾಗುತಿರೆ ಒಳತರಗೆಲೆಗಳ ಹಪ್ಪಳ
ಗಿಡಗಳಲಿ, ಪೊದೆಗಳಲಿ ಪರಿಚಯದ ಹುಡುಕಾಟ
ಅಸಮಾನ ಪರಿಸರ ಪ್ರೇಮಿ ನಾನೆಂದು
ತಟ್ಟಿದ್ದ ಎದೆಯೊಳಗೆ ಕುಟ್ಟುತ್ತಿದೆ ಅವಲಕ್ಕಿ !

ಹಸಿರುಡುಗೆ ಉಟ್ಟಿರುವ ಮದುಮಗಳು ಎಂದಿದ್ದ

ಹೊಟ್ಟೆ ಚುರುಗುಟ್ಟುತ್ತ ಹಿಟ್ಟನ್ನು ಬೇಡುತಿರೆ
ಅಂಗಾಂಗಗಳು ಸೋತು ತಂಗುತಾಣವನರಸೆ !

ಹಣತೆಯ ಬೆಳಕೊಂದು ದೂರದಲಿ ಕಂಡಿರಲು
ತನುಮನಕೆ, ಸುಧೆಯ ಸಿಂಚನವಾದಂತಾಯ್ತು !

೨

ತಟ್ಟಿಯರಮನೆಯೊಡೆಯ ಬೆಳ್ಳಿ ಬಿಳಿ ಪಾತ್ರೆಯಲಿ
ಕೊಟ್ಟಿದ್ದ ನೀರಿಂದ ಜೀವ ಉಳಿದಿತ್ತು
ಕೋರೆ ಹುಲ್ಲಿನ ಚಾಪೆ ಮೃದು ತಲ್ಪವೆನಿಸಿತ್ತು
ಬಿಸಿ ರೊಟ್ಟಿ ಚಟ್ನಿ ಹೋಳಿಗೆಯ ಮರೆಸಿತ್ತು !

ಬುಡ್ಡಿಯ ಬೆಳಕಲ್ಲಿ ರೊಟ್ಟಿ ಬಡಿಯುತ್ತಿದ್ದ
ಬೇಲೂರ ಮೈಮಾಟ ಬೆರಗುಗೊಳಿಸಿತ್ತು
ಕಪ್ಪು ಕೈಗೊಪ್ಪುವ ಕೆಂಪು ಬಳೆಗಳ ಉಲಿತ
ಹೊಳೆವ ಕಣ್ಣುಗಳೆರಡೂ ಮುಗ್ಧತೆಯ ಸಂಕೇತ !

ಅಲ್ಲೊಂದು ಮೂಲೆಯಲಿ ನಿದ್ರಿಸಿದ ಹಸುಳೆಗಳ
ಜೊಲ್ಲಿಳಿಯ ಬಾಯಲ್ಲಿ ಹೂ ನಗೆಯು ಅರಳುತಿದೆ.
ಚಿಕ್ಕ ಗೂಡಾದರೂ ಚೊಕ್ಕ ಸಂಸಾರವಿದು
ಆದರದ ಸತ್ಕಾರ ಮೈ ತಳೆದ ಸಂಸ್ಕಾರ !

ಆಪತ್ತಿಗಾದವರು, ಆಡದೆ ಕೊಟ್ಟವರು
ಲೋಕದಲಿ ಉತ್ತಮರು, ಈ ನನ್ನ ಬಾಂಧವರು
ದೊಡ್ಡ ಕಂಬಳಿಯೊಳಗೆ ನಿದ್ದೆಗೆ ಜಾರುತಿರೆ
ಇನ್ನಿಲ್ಲದಂತೆ ಮನ ತುಂಬಿ ಬಂದಿತ್ತು !

೩

ಮೇಲಿದ್ದ ನೇಸರನು ಕರಿಹೊದಿಕೆಯ ಸರಿಸಿ
ಇಳೆಗೆ ಬಣ್ಣವನೀಡೆ, ಈಗೆಲ್ಲ ನಿಚ್ಚಳವು !
ದಾಟಿದ್ದ ತೊರೆಯಲ್ಲಿ , ನುಸುಳಿದ್ದ ಗವಿಯಲ್ಲಿ
ಕಣ್ಮನವ ತಣಿಸುತಿದೆ ಪ್ರಕೃತಿ ವೈಭವವು !

ಈಚೆ ತಿರುಗಿದರಿಲ್ಲಿ ಮಸಿ ಪಾತ್ರೆಗಳ ತಿಕ್ಕಿ
ಮಡಿಕೆ ನೀರಲಿ ತೊಳೆವ ಕೊಳಕು ಹೆಣ್ಣಿನ ಮೋರೆ !
ಸಿಲವರ ಗಂಗಾಳದಲ್ಲಿ ತಂಗಳನು ಮೆಲ್ಲುತಿಹ
ಸಿಂಬಳದ ಸಣಕಲರು ನೀಡುವ ಬೆತ್ತಲ ಸೇವೆ !

ಮಾಡಿಗೆ ತೇಪೆಯಿಡುವ ಲಂಗೋಟಿ ಸರದಾರನ
ಬೀಡಿಯ ವಾಸನೆಗೆ ವಾಕರಿಕೆ ಬಂದಿತ್ತು !
ಇಸ್ಸೀ ! ಈ ಕೂಪದಲಿ ಇರುಳನ್ನು ಕಳೆದೆನೇ ?
ಈ ಕ್ಷುದ್ರ ಜನರೆಲ್ಲಿ ? ಎನ್ನ ಪ್ರತಿಷ್ಠೆಯೆಲ್ಲಿ ?

ಕೈಗಷ್ಟು ಎಸೆದವರ ಕೈ ತೊಳೆದು ಬಿಡಬೇಕು
ಗೆಳೆಯರು ಕಾಣುವ ಮುನ್ನ ಜಾಗ ಬಿಟ್ಟರೆ ಸಾಕು !
ಹಗಲಿನಂದವು ನಿನ್ನೆ ಇರುಳಲ್ಲಿ ಭಯಪಡಿಸೆ
ಇರುಳಿನಂದವು ಏಕೋ 'ಹೊಲಸು' ಅನಿಸುವುದೀಗ!

**ಸರೋಜ ಆರ್. ಆಚಾರ್ಯ**
'ಭಾಗ್ಯಶ್ರೀ', ೧.೨.೫೦ ಬಿ. ಕುಂಜಿಬೆಟ್ಟು, ಉಡುಪಿ -೫೭೬೧೦೨

# ಅವಲೋಕನ

ಕಡಲತೀರದಲ್ಲಿ ಕಂಡೆ
ಮುನ್ನುಗ್ಗುವ ಅಲೆಗಳ
ಅಣು ಅಣುಗಳ ಮಲೆಗಳ
ಒಂದೊಂದಕು ತನ್ನದೆ ಹಾಡು
ತನ್ನದೇ ಪಾಡು
ಒಂದರಿಂದೊಂದಕೆ ಅನಂತದಂತರ
ಎಲ್ಲ ಹೇಗೋ ಇಲ್ಲಿ ಸೇರೆ
ಶುಭ್ರ ಶ್ವೇತ ಶ್ವೇತ ನೊರೆ

ಯುಗ ಯುಗಗಳ ಪೂರ್ವಕೆ
ಕಾಂಬ ನೋಟದಿಂದ ಹಿಂದಕೆ
ಅಪ್ಪಳಿಸಿವೆ ತೀರಕೆ
ಜೀವವಿನಿತು ಇಲ್ಲದಿರೆ
ಅಬ್ಬರದೀ ಸದ್ದಿನಾಟ
ಯಾರಿಗಾಗಿ ? ಏತಕೆ ?
ಭಣಭಣಿಸುತಿರುವ ರಂಗದಿ
ಅರ್ಥವೇನು ನಡೆವ ನಾಟ್ಯಕೆ ?

ಅವಿಶ್ರಾಂತ ರವಿಯ ಕುಲುಮೆ
ಅನವರತ ಶಕ್ತಿಯಬ್ಬರ
ಆಕಾಶಕೆ ಚೈತನ್ಯಯಾನ
ಜಲಬಿಂದುವಿಗೂ ಸಿಂಚನ
ಕಿರಣ ಸಂತೆ ಕಣಗಳೋಕುಳಿ
ಅಂಬುಧಿ ತುಂಬ ಘರ್ಜನ
ಸಾಗರಾಂತರಾಳದಲ್ಲಿ
ಅಣುಕಣಗಳ ಸ್ಪಂದನ
ಸ್ಥಿತಿ ಲಯಗಳ ತಾಳದಲ್ಲಿ
ಸಾಮಗಾನ ಆವರ್ತನ
ತದ್ರೂಪ ಸೃಷ್ಟಿ ನರ್ತನ
ನಿತ್ಯ ನವ್ಯ ನೂತನ

ಸರಳದಿಂದ ಜಟಿಲಕೆ
ಸೂಕ್ಷ್ಮದಿಂದ ಸ್ಥೂಲಕೆ
ಧಾತು ಧಾತು ಸೇರಿತೆ ?
ಆಮ್ಲದೆಳೆಯ ಹೆಣೆಯಿತೆ ?



ಕುದಿದ ಪಾಕ ಹದಕೆ ಬಂದು
ಜೀವ ಸೃಷ್ಟಿಯಾಯಿತೆ ?

ಪ್ರತಿಕಣವೂ ಅರಿವು ತುಂಬಿ
ನೀರಿನಿಂದ ನೆಲಕೆ ತೆವಳಿ
ವಿಸ್ಮಯದೀ ದ್ರವ್ಯರಾಶಿ
ನನ್ನ ರೂಪ ತಾಳಿದೆ
ತೊಟ್ಟಿಲಲ್ಲಿ ಮಲಗಿದೆ
ತೊಟ್ಟಿಲಿಂದ ನೆಲಕೆ ಜಿಗಿದು
ಕಡಲೆದುರಿಗೆ ಬಂದಿದೆ
ನಿಬ್ಬೆರಗುಗೊಂಡು ನಿಂತಿದೆ
''ಕಣಕಣಗಳ ಜಗವು ನಾನೆ
ಜಗದ ಕಣವು ನಾನೆ ತಾನೆ''
ಎಂಬ ನಿತ್ಯ ಸತ್ಯ ಬೆರಗಿಗೆ

ಮೂಲ ಇಂಗ್ಲ ಕವಿತೆ : ವಿಜ್ಞಾನಿ ರಿಚರ್ಡ್ ಫೇಯ್ನ್‌ಮನ್
ಅನುವಾದ : ಡಾ॥ ಕೆ. ಎಸ್. ಮಲ್ಲೇಶ್
ಭೌತವಿಜ್ಞಾನ ಅಧ್ಯಯನ ವಿಭಾಗ, ಮಾನಸಗಂಗೋತ್ರಿ ,ಮೈಸೂರು-೬

# ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳಲ್ಲಿ ಸ್ವಯಂ ನಿವೃತ್ತಿ ಯೋಜನೆ

ಸ್ವಯಂ ನಿವೃತ್ತಿ ಯೋಜನೆಯೆಂಬುದು ಉದ್ಯೋಗಿಗಳ ಸಂಖ್ಯೆಯನ್ನು ಕಡಿಮೆ ಮಾಡುವ ಮತ್ತು ಅವರ ಕಾರ್ಯಕೌಶಲವನ್ನು ಹೆಚ್ಚಿಸುವ ಸಲುವಾಗಿ ಆಡಳಿತ ಘಟಕಗಳು ಮತ್ತು ಸಾಂಸ್ಥಿಕ ವ್ಯವಸ್ಥೆಗಳು ಆಗಾಗ ಕೈಗೊಳ್ಳುವ ಒಂದು ಪ್ರಯೋಗ. ಈ ಯೋಜನೆಯು ಉದ್ಯೋಗಿಗಳಿಗೆ ಆಯಾ ಸಂಸ್ಥೆಯ ಸೇವೆಯಿಂದ ನಿವೃತ್ತಿಯ ಆಯ್ಕೆ ಮಾಡಿಕೊಳ್ಳಲು ಅವಕಾಶ ಮಾಡಿಕೊಡುತ್ತದೆ. ಇಂಥ ಯೋಜನೆಯೊಂದನ್ನು ಕಾರ್ಯಗತಗೊಳಿಸಿದಾಗ ನಿರ್ವಹಣಾ ವೆಚ್ಚವು ಕಡಿಮೆಯಾಗಿ, ಕಾರ್ಯದಕ್ಷತೆಯಲ್ಲಿ ಗುಣಾತ್ಮಕ ಬದಲಾವಣೆಯಾಗುವುದೆಂದು ನಿರೀಕ್ಷಿಸಲಾಗುತ್ತದೆ. ನಿವೃತ್ತಿಯನ್ನು ಆಯ್ಕೆ ಮಾಡಿಕೊಂಡ ಎಲ್ಲ ಉದ್ಯೋಗಿಗಳಿಗೂ ಈ ಯೋಜನೆಯು ಒಂದೇ ಬಗೆಯ ಅನುಕೂಲಗಳನ್ನು ಒದಗಿಸುವುದೆಂದು ಹೇಳುವಂತಿಲ್ಲ. ಆಯಾ ಉದ್ಯೋಗಿಯ ಸೇವಾ ಹಿರಿತನ, ಅಧಿಕಾರ ದರ್ಜೆಯ ಅಂಕಿತ, ಪರಿಹಾರ ನೀಡಲು ರೂಪಿಸಿಕೊಂಡಿರುವ ಸೂತ್ರ ಇತ್ಯಾದಿಗಳನ್ನು ಅವಲಂಬಿಸಿ ಸಂಸ್ಥೆಯಿಂದ ನಿವೃತ್ತರಾಗುವ ಉದ್ಯೋಗಿಗಳಿಗೆ ದೊರೆಯುವ ಪ್ರತಿಫಲದ ಪ್ರಮಾಣವು ಹೆಚ್ಚು ಕಡಿಮೆಯಾಗುತ್ತದೆ.

ಸ್ವಯಂ ನಿವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವ ಉದ್ಯೋಗಿಯು ಒಂದು ವಿಚಾರ ಸಮ್ಮತವಾದ, ಮುಂದಿನ ವರ್ಷಗಳ ಅವಧಿಯಲ್ಲಿ ಒದಗಬಹುದಾದ ಲಾಭ-ನಷ್ಟಗಳನ್ನೂ ಕುರಿತು ಪೂರ್ವಭಾವಿಯಾಗಿ ಪರ್ಯಾಲೋಚಿಸಬೇಕಾಗುತ್ತದೆ.

**ಬ್ಯಾಂಕ್‌ಗಳಲ್ಲಿ ನಿವೃತ್ತಿ ಯೋಜನೆ**

ಸಾರ್ವಜನಿಕ ಕ್ಷೇತ್ರದ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಇತ್ತೀಚಿನ ವಿಶೇಷ ಸ್ವಯಂ ನಿವೃತ್ತಿ ಯೋಜನೆ (ವಿ.ಸ್ವ.ನಿ.ಯೋ.) ಅಥವಾ ಜನಪ್ರಿಯವಾಗಿ ''ದಿ ಗೋಲ್ಡನ್ ಹ್ಯಾಂಡ್‌ಷೇಕ್'' ಎಂಬ ಹೆಸರಿನಿಂದ ಪರಿಚಿತವಾಗಿರುವುದು ಬರುವುದಕ್ಕಿಂತ ಮುಂಚೆಯೂ ಸ್ವಯಂ ನಿವೃತ್ತಿ ಯೋಜನೆ (ಸ್ವ.ನಿ.ಯೋ.)ಯು ಜಾರಿಯಲ್ಲಿತ್ತು. ಆದರೆ ವಿ.ಸ್ವ.ನಿ.ಯೋ.ಗೆ ಮುಂಚೆ ಇದ್ದ ಪದ್ಧತಿಯು ಅಷ್ಟೊಂದು ಆಕರ್ಷಕವಾಗಿರಲಿಲ್ಲ. ಆ ಸ್ವ.ನಿ.ಯೋ.ಯು ಸಾಮಾನ್ಯ ನಿವೃತ್ತಿಯಿಂದ ದೊರೆಯುವ ಪ್ರತಿಫಲಕ್ಕಿಂತ ಹೆಚ್ಚಿನದೇನನ್ನೂ ಕೊಡುತ್ತಿರಲಿಲ್ಲವಾಗಿ ಸ್ವಲ್ಪ ಹೆಚ್ಚು ಕಡಿಮೆ ಸಾರ್ವಜನಿಕ ಕ್ಷೇತ್ರದ ಎಲ್ಲ ಬ್ಯಾಂಕ್‌ಗಳಲ್ಲಿಯೂ ಪ್ರತಿಕ್ರಿಯೆಯು ಉದಾಸೀನದ್ದಾಗಿತ್ತು.

ಈ ಯೋಜನೆಯನ್ನು ಉಪಯೋಗಿಸಿಕೊಂಡು ನಿವೃತ್ತರಾಗುವವರ ಸಂಖ್ಯೆಯು ಗಣನೀಯವಾಗಿಲ್ಲದ್ದರಿಂದ ಬ್ಯಾಂಕ್ ಉದ್ಯೋಗಿಗಳ ಸಂಘಗಳು ಕೂಡ ಈ ಯೋಜನೆಯನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಆದರೆ ಕೇಂದ್ರ ಅರ್ಥಸಚಿವಾಲಯದ ನಿರ್ದೇಶನದ ಮೇರೆಗೆ ಭಾರತೀಯ ಬ್ಯಾಂಕ್‌ಗಳ ಸಂಘವು (ಐಬಿಎ) ಘೋಷಿಸಿದ 'ವಿಶೇಷ ಸ್ವಯಂ ನಿವೃತ್ತಿ ಯೋಜನೆ'ಯು ಸಾರ್ವಜನಿಕ ವಲಯದ ಹೆಚ್ಚು ಕಡಿಮೆ ಎಲ್ಲ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿಯೂ ಹಿಂದೆಂದೂ ಕಾಣದ ಅತ್ಯುತ್ಸಾಹದ ಪ್ರತಿಕ್ರಿಯೆಯನ್ನುಂಟುಮಾಡಿತು. ಕೇಂದ್ರ ಹಣಕಾಸು ಸಚಿವ ಲೋಕಸಭೆಯಲ್ಲಿ ಹಣಕಾಸು ವಿಭಾಗದ ಸುಧಾರಣೆ ಮತ್ತು ರಾಷ್ಟ್ರೀಕೃತ ಬ್ಯಾಂಕ್‌ಗಳ ಪುನಾರಚನೆಯ ಜರೂರು ಅಗತ್ಯವನ್ನು ಕುರಿತು ಮಾತಾಡಿದಾಗ ಇಂಥ ಸುಧಾರಣೆಯು ತಮ್ಮ ಬಾಗಿಲಲ್ಲೇ ಪ್ರತ್ಯಕ್ಷವಾಗುವುದೆಂದು ಬ್ಯಾಂಕ್ ಉದ್ಯೋಗಿಗಳು ನಿರೀಕ್ಷಿಸಿರಲಿಲ್ಲ. ಬ್ಯಾಂಕ್ ರಾಷ್ಟ್ರೀಕರಣದ ಅನಂತರ ನೌಕರ ಸಂಘಟನೆಗಳು, ತಮ್ಮ ಸದಸ್ಯರಲ್ಲಿ ಹೆಚ್ಚಿನವರು ಕಾಲಕಾಲಕ್ಕೆ ದೊರೆಯುತ್ತಿದ್ದ ವೇತನ ಹೆಚ್ಚಳ, ಪದೋನ್ನತಿ ಮೊದಲಾದ ಸೌಲಭ್ಯಗಳನ್ನು ಪಡೆದುಕೊಂಡು ಸಂತುಷ್ಟರಾಗಿರುವುದನ್ನು ಖಚಿತಪಡಿಸಿಕೊಂಡಿದ್ದವು.

ಒಂದು ಕಡೆಯಲ್ಲಿ ನಿರ್ವಹಣಾ ವೆಚ್ಚ ಮತ್ತು ಪ್ರತಿ ನೌಕರನ ಮೇಲೆ ತಗಲುವ ತಲಾ ಖರ್ಚಿನ ಆಧಿಕ್ಯ, ಮತ್ತೊಂದು ಕಡೆಯಲ್ಲಿ ಬ್ಯಾಂಕಿಂಗ್ ಉದ್ಯಮದಲ್ಲಿ ಸುಮಾರು ೬೦,೦೦೦ ಕೋಟಿ ರೂಪಾಯಿಗಳಷ್ಟು ಕಾರ್ಯನಿರತವಲ್ಲದ ಆಸ್ತಿಯ ಬೆಳವಣಿಗೆಯು ಇದ್ದಕ್ಕಿದ್ದಂತೆ ಸಂಭವಿಸಿದುದಲ್ಲ. ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ, ಅಂದಿನ ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರ ಆದೇಶದ ಮೇರೆಗೆ ೧೪ ಪ್ರಮುಖ ವಾಣಿಜ್ಯ ಬ್ಯಾಂಕ್‌ಗಳು ರಾಷ್ಟ್ರೀಕರಣಗೊಂಡವು. ೧೯೬೯ರ ಜುಲೈ ೧೯ರಂದು ರಾಷ್ಟ್ರೀಕರಣ ಕಾಯ್ದೆಯನ್ನು 'ಸಮಾಜವಾದಿ ಸಮಾಜ'ದತ್ತ ಪ್ರಗತಿಪರ ಹೆಜ್ಜೆಯೆಂದು ಸಂಭ್ರಮದಿಂದ ಸ್ವಾಗತಿಸಲಾಯಿತು. ಗ್ರಾಮೀಣ ಪ್ರದೇಶಗಳಿಗೆ ಸಾಲ ಸೌಲಭ್ಯಗಳನ್ನು ಒದಗಿಸುವ ಮತ್ತು ಪ್ರಾದೇಶಿಕ ಅಸಮಾನತೆಯನ್ನೂ ನಿವಾರಿಸುವ ದೃಷ್ಟಿಯಿಂದ ಬ್ಯಾಂಕ್‌ಗಳ ರಾಷ್ಟ್ರೀಕರಣ ಮಾಡಲಾಯಿತು. ರಾಷ್ಟ್ರೀಕೃತ ಬ್ಯಾಂಕ್ ಶಾಖೆಗಳು ಗ್ರಾಮೀಣ ಪ್ರದೇಶಗಳಲ್ಲಿ ಭರದಿಂದ ಬೆಳೆದವು. ರಾಷ್ಟ್ರೀಕೃತ ಬ್ಯಾಂಕ್ ತುಂಬ ದೊಡ್ಡ ಪ್ರಮಾಣದಲ್ಲಿ ಗ್ರಾಮೀಣ ಕ್ಷೇತ್ರವನ್ನು ಪ್ರವೇಶಿಸಿತು.

**ಶಂಕರನಾರಾಯಣ್**

ಮೂರು ದಶಕಗಳಿಗಿಂತ ಹೆಚ್ಚಿನ ಕಾಲಾವಧಿಯಲ್ಲಿ ಸಾರ್ವಜನಿಕ ವಲಯದ ಬ್ಯಾಂಕ್‌ಗಳು ನಗರ ಮತ್ತು ಗ್ರಾಮೀಣ ಪ್ರದೇಶಗಳಿಂದ ದೊಡ್ಡ ಪ್ರಮಾಣದಲ್ಲಿ ಠೇವಣಿ ಸಂಗ್ರಹಿಸಿದವು. ಗ್ರಾಮೀಣ ಪ್ರದೇಶಗಳಲ್ಲಿ ಸಾಲ ಸೌಲಭ್ಯದ ಅಡಿಪಾಯವನ್ನು ಕ್ರಮೇಣ ವಿಸ್ತರಿಸುವುದಕ್ಕಾಗಿ ಒಂದು ಕಾರ್ಯ ಯೋಜನೆಯನ್ನು ಸಿದ್ಧಪಡಿಸಲಾಯಿತು; ಇದನ್ನೂ ಸ್ವಲ್ಪ ಹೆಚ್ಚು ಕಡಿಮೆ ಪರಿಣಾಮಕಾರಿಯಾಗಿಯೇ ಕಾರ್ಯಗತಗೊಳಿಸಲಾಗಿದೆ. ಸಣ್ಣಪುಟ್ಟ ವ್ಯಾಪಾರಿಗಳು, ತುಂಬ ಚಿಕ್ಕ ಪ್ರಮಾಣದ ಅಥವಾ ಅದರ ಆಜುಬಾಜು ಇದ್ದ ವ್ಯವಸಾಯಗಾರರು, ಸ್ಥಳೀಯ ಕಸುಬುದಾರರು, ನಿರುದ್ಯೋಗಿಗಳಾದ ಗ್ರಾಮೀಣ ಯುವಕರು ಮೊದಲಾದವರಿಗೆ ಬ್ಯಾಂಕ್ ರಾಷ್ಟ್ರೀಕರಣವು ಸುಲಭ ಸಾಲ ಸೌಲಭ್ಯದ ಅನುಕೂಲಗಳನ್ನು ತೋರಿಸಿಕೊಟ್ಟಿತು; ಮತ್ತು ಸ್ಥಳೀಯವಾಗಿ ಸಾಲ ಕೊಡುವವರ, ಕತ್ತು ಹಿಚುಕುವ ಯಮ ಬಂಧನವನ್ನು ಸಾಕಷ್ಟು ಕಡಿಮೆ ಮಾಡಿತು. ಗ್ರಾಮೀಣ ಶಾಖೆಗಳು ಒದುಬರಹ ಬಾರದ ಹಳ್ಳಿಯ ಜನರಲ್ಲಿ ಬ್ಯಾಂಕಿಂಗ್ ಅಭ್ಯಾಸವನ್ನು ಬೆಳೆಸಿದವು; ಬ್ಯಾಂಕ್ ಆವರಣದಲ್ಲಿ ಈಗ ಅವರು ಅಪರಿಚಿತರೇನಲ್ಲ. ಠೇವಣಿ ಮತ್ತು ಮುಂಗಡಗಳ ಅಂಕಿ ಸಂಖ್ಯೆಗಳು ನಾಗಾಲೋಟದಲ್ಲಿ ಮುಂದುವರೆದವು. ಬ್ಯಾಂಕ್ ರಾಷ್ಟ್ರೀಕರಣವನ್ನು ಟೀಕಿಸುವವರು ಕೂಡ ಸಾರ್ವಜನಿಕ ವಲಯದ ಬ್ಯಾಂಕ್‌ಗಳು ಸಾಧಿಸಿದ ಬ್ಯಾಂಕ್ ವ್ಯವಹಾರದ ಅಭಿವೃದ್ಧಿಯನ್ನು ಮೆಚ್ಚಿ ಕೊಂಡಾಡಿರುವುದುಂಟು.

ಬ್ಯಾಂಕ್ ರಾಷ್ಟ್ರೀಕರಣವೆಂಬ ಈ ನಾಣ್ಯಕ್ಕೆ ಮತ್ತೊಂದು ಮುಖವಿದೆ. ಬ್ಯಾಂಕ್ ವ್ಯವಹಾರಗಳಲ್ಲಿನ ಅಗಾಧ ಬೆಳವಣಿಗೆಯು ಬ್ಯಾಂಕ್‌ಗಳಿಗೆ ಸಮರ್ಥ ನಿರ್ವಹಣೆಯ ಸಮಸ್ಯೆಗಳನ್ನು ತಂದೊಡ್ಡಿತು. ತಮ್ಮ ಅಗಾಧ ಸಂಪನ್ಮೂಲಗಳನ್ನು ಲಾಭದಾಯಕವಾಗಿ ವಿತರಿಸಿ ಮೂಲ ಬಂಡವಾಳವನ್ನು ಬೆಳೆಸುವುದು ಮತ್ತು ಮಾರುಕಟ್ಟೆಯ ಜಾಣತನಗಳನ್ನು ಹಿಡಿತದಲ್ಲಿಟ್ಟುಕೊಳ್ಳುವ ವಿಚಾರದಲ್ಲಿ ಬ್ಯಾಂಕ್ ಆಡಳಿತವು ವಿಫಲವಾಯಿತೆಂಬುದನ್ನು ನಿಸ್ಸಂಕೋಚವಾಗಿ ಒಪ್ಪಿಕೊಳ್ಳಲೇಬೇಕು. ಪ್ರಮುಖ ನಿರ್ಧಾರಗಳನ್ನು ಕೈಗೊಳ್ಳುವ ಮಟ್ಟದ ಬ್ಯಾಂಕ್ ಆಡಳಿತಾಧಿಕಾರಿಗಳು ಮತ್ತು ಕಾರ್ಪೊರೇಟ್ ತಿಮಿಂಗಿಲಗಳ ನಡುವೆ ಒಂದು ಪರಸ್ಪರ ಲಾಭದಾಯಕ ಒಳವ್ಯವಹಾರವೇರ್ಪಟ್ಟಿತು; ಕ್ರಮೇಣ ರಾಷ್ಟ್ರೀಕೃತ ಬ್ಯಾಂಕ್‌ಗಳ ಅಪಾರ ಪ್ರಮಾಣದ ನಿಧಿಯನ್ನು ಕಾರ್ಪೊರೇಟ್ ವಲಯದ **ಸಾಹಸೋದ್ಯಮ** ಮತ್ತು ಸಟ್ಟಾವ್ಯಾಪಾರದ ಉದ್ದೇಶಗಳಿಗೆ ಹರಿಸಲಾಯಿತು. ದೊಡ್ಡ ದೊಡ್ಡ ದಳ್ಳಾಳಿಗಳು ಕಾನೂನಿನ ದೋಷಗಳನ್ನು ದುರುಪಯೋಗಪಡಿಸಿಕೊಂಡು, ಸ್ಟಾಕ್ ಮಾರುಕಟ್ಟೆಯಲ್ಲಿ ನೀಚ ವ್ಯವಹಾರ ನಡೆಸುವುದಕ್ಕಾಗಿ ಬ್ಯಾಂಕ್ ಹಣವನ್ನು ಕೊಳ್ಳೆಹೊಡೆದರು. ೧೯೯೦ರ ಉತ್ತರಾರ್ಧದಲ್ಲಿ ಬಯಲಿಗೆ ಬಂದ ದೊಡ್ಡ ಗೂಳಿ ಹರ್ಷದ್ ಮೆಹ್ತಾ ಮತ್ತು ಆತನ ತಂಡದವರು ಹಾಗೂ ಕೆಲವು ಪ್ರಮುಖ ಬ್ಯಾಂಕರುಗಳು ಜೊತೆಯಾಗಿ ನಡೆಸಿದ ಸ್ಟಾಕ್ ಮಾರುಕಟ್ಟೆ ದುರ್ವ್ಯವಹಾರವು ಅತ್ಯಂತ ಆಘಾತಕಾರಿಯಾದುದು. ಇದು ಒಳಸಂಚು ಹಾಗೂ ಸಾರ್ವಜನಿಕ ಹಿತಾಸಕ್ತಿಯ ನಿರ್ಲಕ್ಷ್ಯದ ಬಹು ಕೆಟ್ಟ ನಿದರ್ಶನವಾಗಿದೆ.

ನಿಧಾನವಾಗಿ ವರ್ಷದಿಂದ ವರ್ಷಕ್ಕೆ ಬ್ಯಾಂಕುಗಳ ಸಾಲದ ಮರುಪಾವತಿಯು ಕಗ್ಗಂಟಾಯಿತು; ವಸೂಲಿಯಾಗದ ಸಾಲದ ಪ್ರಮಾಣವು ಅಗಾಧವಾಗಿ ಬೆಳೆಯಿತು. ದೊಡ್ಡ ದೊಡ್ಡ ಮೊತ್ತಗಳನ್ನು 'ವಸೂಲಾಗದ ಸಾಲ' ಎಂದು ಪರಿಗಣಿಸಿ ಲೆಕ್ಕದಿಂದ ಹೊಡೆದು ಹಾಕಲಾಯಿತು. ಅನಂತರ ಬಂದ, ಬ್ಯಾಂಕ್‌ಗಳ ಸುಧಾರಣೆಯನ್ನು ಕುರಿತ ನರಸಿಂಹನ್ ಸಮಿತಿಯು, ಸಾಲ ನೀಡಿಕೆಯಲ್ಲಿ ವ್ಯಾವಹಾರಿಕ ವಿವೇಕದ ನಿಯಮಗಳನ್ನು ಅಳವಡಿಸುವುದು; 'ಸೆಕ್ಟೊರಲ್ ಬುಕ್ ಕೀಪಿಂಗ್' ಪದ್ಧತಿಯ ಜಾರಿ; ಮತ್ತು ಆಸ್ತಿಪಾಸ್ತಿಗಳ ವರ್ಗೀಕರಣವನ್ನು ಶಿಫಾರಸು ಮಾಡಿತು. ಸಮಿತಿಯು ಅನೇಕ ವಾಣಿಜ್ಯ ಬ್ಯಾಂಕ್‌ಗಳಲ್ಲಿ ಪ್ರಚಲಿತವಿರುವ ಲೆಕ್ಕಾಚಾರ ವಿಧಾನ, ಆಯವ್ಯಯ ಪಟ್ಟಿಗಳಲ್ಲಿ ಲೋಪದೋಷಗಳನ್ನು ಎತ್ತಿ ತೋರಿಸಿತು. ಬ್ಯಾಂಕ್‌ಗಳು ಹೇಳಿಕೊಳ್ಳುತ್ತಿದ್ದ ಅಪಾರ ಪ್ರಮಾಣದ ಲಾಭ ಗಳಿಕೆಯ ಪೊಳ್ಳುತನವನ್ನು ಬಹಿರಂಗಪಡಿಸಿ, ಸಮಿತಿಯು ಕಾಳನ್ನೂ ಹೊಟ್ಟನ್ನೂ ವಿಂಗಡಿಸಿತು. ಆದರೆ, ಬ್ಯಾಂಕಿಂಗ್ ಪರಿಣತರು ಎಷ್ಟೆಲ್ಲ ಎಚ್ಚರಿಕೆ ನೀಡುತ್ತಿದ್ದರೂ ಬ್ಯಾಂಕ್‌ಗಳು ಸಾಲ ನಿರ್ವಹಣೆಯಲ್ಲಿ ಹಿಂದಿನ ನೀತಿಯನ್ನೇ ಅನುಸರಿಸಿದರು. ಆಡಳಿತ ನಡೆಸುವ ಮೇಲುವರ್ಗದವರ ಕೃಪಾಕಟಾಕ್ಷದಡಿಯಲ್ಲಿ, ಸಾಹಸೋದ್ಯಮಗಳ ಸಾಧ್ಯಾಸಾಧ್ಯತೆ, ಲಾಭ ಗಳಿಕೆ ಮೊದಲಾದ ಅಂಶಗಳನ್ನು ಸರಿಯಾಗಿ ಲೆಕ್ಕ ಹಾಕದೆಯೆ ಹಣ ಹೂಡಿಕೆಯನ್ನು ಮುಂದುವರಿಸಿದರು.

ಪರಿಣಾಮವಾಗಿ ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳ ಪೈಕಿ

'ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ', 'ಯೂಕೋ ಬ್ಯಾಂಕ್', ಮತ್ತು 'ಇಂಡಿಯನ್ ಬ್ಯಾಂಕ್' - ಇವುಗಳು ಅಪಾರ ನಷ್ಟಕ್ಕೆ ಒಳಗಾದವು. ನೌಕರರಿಗೆ ಸಂಬಳ ಕೊಡುವುದೂ ಕೂಡ ಕಷ್ಟವಾಯಿತು. ಕಳೆದ ವರ್ಷ ಒಪ್ಪಂದವಾದಂತೆ ಪುನರ್ವಿಮರ್ಶಿತ ವೇತನ ಬಾಕಿಯನ್ನು ಈ ಬ್ಯಾಂಕ್‌ಗಳು ಇವತ್ತಿಗೂ ಪಾವತಿಸಿಲ್ಲ!

ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳ ಪರಿಸ್ಥಿತಿಯು ಹದಗೆಡುತ್ತಿರುವ ಬಗ್ಗೆ ಬ್ಯಾಂಕ್ ಆಡಳಿತವರ್ಗ ಮತ್ತು ನೌಕರ ಸಂಘಗಳಿಗೆ ಸಾಕಷ್ಟು ಮುಂಚಿತವಾಗಿಯೆ ಎಚ್ಚರಿಕೆ ಕೊಡುವ ಗಂಟೆ ಬಾರಿಸಿತ್ತು; ನಿರ್ದಿಷ್ಟ ನಿರ್ಧಾರಗಳನ್ನು ತೆಗೆದುಕೊಳ್ಳಲು ಸೂಚಿಸಲಾಗಿತ್ತು. ಆದರೆ, ಗೊತ್ತಾದ ಅವಧಿಯಲ್ಲಿ ಬ್ಯಾಂಕ್‌ಗಳ ವಂಚನೆಯು ಮರುಕಳಿಸುತ್ತ ಹೋದರೂ ಸಹ ಆಡಳಿತವರ್ಗಗಳು ನಿರ್ಬಂಧಕ ವಿಧಾನಗಳನ್ನಾಗಲಿ, ನಿಯಂತ್ರಕ ವ್ಯವಸ್ಥೆಯನ್ನಾಗಲಿ ಬಲಪಡಿಸಲಿಲ್ಲ. ಬ್ಯಾಂಕ್ ಉದ್ಯೋಗಿಗಳ ಕೆಲವು ಸಂಘಗಳು ಸ್ವಲ್ಪ ಗದ್ದಲ ಗಲಾಟೆ ಮಾಡಿದುವಾದರೂ ಅಂತಿಮವಾಗಿ ಅರ್ಥಪೂರ್ಣ ಸಾಧನೆಯೇನೂ ಆಗಲಿಲ್ಲ. ಅವುಗಳು ತಮ್ಮ ಸ್ವಂತಕ್ಕೆ ಕೆಲವು ಅನುಕೂಲಗಳನ್ನು ಪಡೆದುಕೊಳ್ಳುವುದಕ್ಕಾಗಿ ಬ್ಯಾಂಕ್ ಆಡಳಿತವರ್ಗಗಳು ಅನುಸರಿಸುತ್ತಿದ್ದ ತಪ್ಪು ನೀತಿಗಳ ಒಳಗೊಳಗೇ ಅಡಕವಾಗಿದ್ದ ಅಪಾಯಗಳನ್ನು ನೋಡಿಯೂ ನೋಡದಂತೆ ಕಣ್ಣುಮುಚ್ಚಿ ಇದ್ದುಬಿಟ್ಟವು. ನಿರ್ದೇಶಕ ಮಂಡಳಿಗಳು ಠರಾವುಗಳನ್ನು ಅನುಮೋದಿಸುವ, ದಿನನಿತ್ಯದ ವ್ಯವಹಾರದಂತೆ ತೀರ್ಮಾನಗಳನ್ನು ಅನುಮೋದಿಸುವ ಮಟ್ಟಕ್ಕೆ ಇಳಿದುಬಿಟ್ಟವು.

| ಬ್ಯಾಂಕಿನ ಹೆಸರು | ಒಟ್ಟು ಉದ್ಯೋಗಿಗಳ ಸಂಖ್ಯೆ | ವಿ.ಸ್ವ.ನಿ.ಯೋ. ಆಯ್ಕೆ ಮಾಡಿಕೊಂಡವರು | ಶೇಕಡಾವಾರು % |
|---|---|---|---|
| ೧. ಭಾರತೀಯ ಸ್ಟೇಟ್ ಬ್ಯಾಂಕ್ | ೨,೩೭,೦೦೦ | ೩೫,೦೦೦ | ೧೪.೯೪ |
| ೨. ಅಲಹಾಬಾದ್ ಬ್ಯಾಂಕ್ | ೨೨,೩೪೫ | ೧,೫೭೧ | ೭.೦೩ |
| ೩. ಆಂಧ್ರ ಬ್ಯಾಂಕ್ | ೧೪,೬೦೩ | ೧,೭೫೮ | ೧೨.೦೪ |
| ೪. ಬ್ಯಾಂಕ್ ಆಫ್ ಬರೋಡ | ೪೭,೦೫೪ | ೩,೨೦೦ | ೬.೮೦ |
| ೫. ಬ್ಯಾಂಕ್ ಆಫ್ ಮಹಾರಾಷ್ಟ್ರ | ೧೬,೧೯೮ | ೨,೭೦೦ | ೧೬.೭೭ |
| ೬. ಬ್ಯಾಂಕ್ ಆಫ್ ಇಂಡಿಯಾ | ೫೧,೯೬೨ | ೭,೭೦೦ | ೧೪.೮೨ |
| ೭. ಕೆನರಾ ಬ್ಯಾಂಕ್ | ೫೫,೩೬೩ | ೮,೬೦೦ | ೧೫.೫೩ |
| ೮. ದೇನಾ ಬ್ಯಾಂಕ್ | ೧೪,೪೪೨ | ೩,೭೦೦ | ೨೫.೭೪ |
| ೯. ಇಂಡಿಯನ್ ಬ್ಯಾಂಕ್ | ೨೫,೯೩೫ | ೩,೯೮೮ | ೧೫.೩೮ |
| ೧೦. ಐ.ಒ.ಬಿ | ೨೮,೦೦೮ | ೩,೯೪೪ | ೧೪.೦೮ |
| ೧೧. ಓರಿಯಂಟಲ್ ಬ್ಯಾಂಕ್ | ೧೪,೩೯೮ | ೮೦೦ | ೫.೫೬ |
| ೧೨. ಪಿ.ಎನ್.ಬಿ. | ೬೫,೭೦೫ | ೫,೮೦೦ | ೮.೮೩ |
| ೧೩. ಪಂಜಾಬ್ ಅಂಡ್ ಸಿಂಧ್ ಬ್ಯಾಂಕ್ | ೧೨,೧೯೨ | ೨,೦೦೦ | ೧೬.೪೦ |
| ೧೪. ಸಿಂಡಿಕೇಟ್ ಬ್ಯಾಂಕ್ | ೩೩.೮೮೩ | ೭,೧೫೭ | ೨೧.೧೨ |
| ೧೫. ಯುಕೋ ಬ್ಯಾಂಕ್ | ೩೧.೨೨೩ | ೫,೪೭೯ | ೧೭.೫೫ |
| ೧೬. ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ | ೩೦,೯೩೪ | ೪,೩೦೩ | ೧೩.೯೬ |
| ೧೭. ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ | ೨೧,೩೧೬ | ೩,೦೦೦ | ೧೪.೦೭ |
| ೧೮. ವಿಜಯಾ ಬ್ಯಾಂಕ್ | ೧೩,೬೪೬ | ೨,೪೦೦ | ೧೭.೫೯ |

*ಆಕರ: ದಿ ವೀಕ್ ಮ್ಯಾಗಜೈನ್ - ಏಪ್ರಿಲ್ ೧, ೨೦೦೧*

ಈಚಿನ ದಿನಗಳಲ್ಲಿ ಕಾಣಿಸಿಕೊಂಡ ಜಾಗತೀಕರಣ ಮತ್ತು ಉದಾರೀಕರಣದ ಒಲವುಗಳು ಕೂಡ ದೇಶೀಯ ಬ್ಯಾಂಕ್‌ಗಳಿಗೆ ಗಂಭೀರ ಸವಾಲಾಗಿದೆ. ಸದ್ಯದ ರಾಷ್ಟ್ರೀಯ ಪ್ರಜಾಸತ್ತಾತ್ಮಕ ರಂಗ (ಎನ್.ಡಿ.ಎ.) ಸರ್ಕಾರವು ಉಪಕ್ರಮಿಸಿದ ನೀತಿಗಳು ಉದಾರೀಕರಣ ಮತ್ತು ಜಾಗತೀಕರಣಗಳಿಗೆ ಪ್ರೋತ್ಸಾಹಕವಾಗಿದ್ದು ದೇಶದೊಳಕ್ಕೆ ಹೆಚ್ಚು ಹೆಚ್ಚು ವಿದೇಶೀ ಬ್ಯಾಂಕ್‌ಗಳು ಪ್ರವೇಶಿಸಲು ಅವಕಾಶಮಾಡಿಕೊಟ್ಟಿದೆ. ಬ್ಯಾಂಕ್‌ಗಳ ಕಾರ್ಯ ನಿರ್ವಹಣೆಯಲ್ಲಿ ಅತ್ಯಂತ ಉನ್ನತ ಮಟ್ಟದ ಸ್ವಂತಶೈಲಿ ತಂತ್ರಜ್ಞಾನವುಳ್ಳ ಮತ್ತು ಮಾರುಕಟ್ಟೆಯಲ್ಲಿ ಆಕ್ರಮಣಕಾರಿ ಪ್ರವೃತ್ತಿಯ ವಿದೇಶೀ ಬ್ಯಾಂಕ್‌ಗಳು ನಮ್ಮ ಸಾರ್ವಜನಿಕ ವಲಯದ ಬ್ಯಾಂಕ್‌ಗಳನ್ನು ಮೂಲೆಗೆ ತಳ್ಳಿದವು. ಈ ವಿದೇಶೀ ಸಹಚರರ ಗಂಭೀರ ಸ್ಪರ್ಧೆಯನ್ನೆದುರಿಸಬೇಕಾಗಿ ಬಂದುದರಿಂದ ನಮ್ಮ ಬ್ಯಾಂಕ್‌ಗಳ ಗಿರಾಕಿಗಳ ಸಂಖ್ಯೆ ಕ್ಷೀಣಿಸತೊಡಗಿತು. ಹೆಚ್ಚು ಸಂಪನ್ಮೂಲಗಳು ಮತ್ತು ಸಾಮರ್ಥ್ಯವುಳ್ಳ ಗಿರಾಕಿಗಳು ವಿದೇಶೀ ಬ್ಯಾಂಕುಗಳತ್ತ ಸರಿದರು. ನಮ್ಮ ಸಾರ್ವಜನಿಕ ವಲಯದ ಬ್ಯಾಂಕ್‌ಗಳ ವಹಿವಾಟು ಕುಸಿಯಿತು. ವಿದೇಶೀ ಬ್ಯಾಂಕುಗಳ ಸವಾಲನ್ನೆದುರಿಸುವುದಕ್ಕಾಗಿ ನಮ್ಮ ಬ್ಯಾಂಕುಗಳು ತಮ್ಮ ಬ್ಯಾಂಕಿಂಗ್ ವಿಧಾನವನ್ನು ಮತ್ತು ಬೆಳವಣಿಗೆಯ ಉಪಾಯಗಳನ್ನು ಪುನರ್ ರೂಪಿಸಬೇಕಾಗಿ ಬಂದಿತು.

ಅನೇಕ ವಾಣಿಜ್ಯ ಬ್ಯಾಂಕ್‌ಗಳ ವಿಷಾದಕರ ನಿರ್ವಹಣೆಯ ಹಿನ್ನೆಲೆಯಲ್ಲಿ ಆರ್ಥಿಕ ಮಂತ್ರಾಲಯವು ಮಾನವ ಸಂಪನ್ಮೂಲ ಅಧ್ಯಯನ ನಡೆಸಿ, ಅನಗತ್ಯ ಹೊರೆಯನ್ನು ಇಳಿಸುವ ಕಾರ್ಯಾಚರಣೆ ಕೈಗೊಂಡು, ವ್ಯವಹಾರಕ್ಕೆ ಅಗತ್ಯವಾದಷ್ಟು ಮಾತ್ರ ಉದ್ಯೋಗಿಗಳನ್ನು ಉಳಿಸಿಕೊಳ್ಳಬೇಕೆಂದು ಆದೇಶಿಸಬೇಕಾಯಿತು. ಬರಲಿರುವ ಅಪಾಯದ ಗುಮಾನಿ ಹಿಡಿದ ಉದ್ಯೋಗಿಗಳು ವಿ.ಸ್ವ.ನಿ.ಯೋ. ಪ್ರಕಟಣೆ ಹೊರಬೀಳುವುದನ್ನೇ ಕಾಯುತ್ತಿದ್ದರು.

ಸಾರ್ವಜನಿಕ ಕ್ಷೇತ್ರದ ಬ್ಯಾಂಕ್ ಉದ್ಯೋಗಿಗಳ ಸಂಖ್ಯೆಯನ್ನು ಆಗ ಇದ್ದುದಕ್ಕಿಂತ ಕನಿಷ್ಠ ಪಕ್ಷ ಶೇಕಡಾ ೧೦ ರಷ್ಟು ಇಳಿಸಲು ಆರ್ಥಿಕ ಮಂತ್ರಾಲಯವು ಬಯಸಿತು. ಆಮೇಲೆ ಬಂದದ್ದು ವಿ.ಸ್ವ.ನಿ.ಯೋ. ಇದರ ಪ್ರಕಾರ ಉದ್ಯೋಗಿಯು ಸೇವೆಯನ್ನು ಪೂರ್ತಿಗೊಳಿಸಿದ ಪ್ರತಿಯೊಂದು ವರ್ಷಕ್ಕೆ ೬೦ ದಿನಗಳ ಸಂಬಳ ಅಥವಾ ನಿವೃತ್ತನಾಗಲು ಉಳಿದಿರುವ ಸೇವಾವಧಿಗೆ ಸದ್ಯದಲ್ಲಿ ಬರುತ್ತಿರುವಷ್ಟು ಸಂಬಳ ಇವುಗಳ ಪೈಕಿ ಯಾವುದು ಕಡಿಮೆಯೋ ಅದನ್ನು ಕೊಡುವ, ಸಾಕಷ್ಟು ಆಕರ್ಷಕವಾದ, ಸಗಟು ವ್ಯವಹಾರವನ್ನು ಘೋಷಿಸಿತು. ಈ ಘೋಷಣೆಯ ಪ್ರತಿಕ್ರಿಯೆಯಾಗಿ ಅಧಿಕಾರಿ ದರ್ಜೆಯ ಮತ್ತು ನೌಕರದರ್ಜೆಯ ಉದ್ಯೋಗಿಗಳಿಂದ ವಿ.ಸ್ವ.ನಿ. ಬಯಸಿದ ಅರ್ಜಿಗಳ ಪ್ರವಾಹವೇ ಹರಿದುಬಂದಿತು. ಕೆಲವು ಬ್ಯಾಂಕ್‌ಗಳ ಕಾರ್ಯನಿರ್ವಾಹಕರು ಕೂಡ ಈ ಆಯ್ಕೆಯಲ್ಲಿ ಹಿಂದೆ ಬೀಳಲಿಲ್ಲ. ಈ ಮೇಲಿನ ಪಟ್ಟಿಯು ವಿ.ಸ್ವ.ನಿ.ಯೋಗೆ ವಿವಿಧ ಬ್ಯಾಂಕ್‌ಗಳಿಂದ ಬಂದ ಪ್ರತಿಕ್ರಿಯೆಯು ಯಾವ ಮಟ್ಟದಲ್ಲಿತ್ತೆಂಬುದನ್ನು ತೋರಿಸುತ್ತದೆ.

ಈಗ ಹೆಚ್ಚು ಕಡಿಮೆ ಎಲ್ಲ ಸಾರ್ವಜನಿಕ ವಲಯದ ಬ್ಯಾಂಕ್‌ಗಳೂ ವಿ.ಸ್ವ.ನಿ.ಯೋ. ಕಾರ್ಯಕ್ರಮವನ್ನು ಮುಗಿಸಿವೆ. ಒಂದು ಲಕ್ಷಕ್ಕಿಂತಲೂ ಹೆಚ್ಚು ಸಂಖ್ಯೆಯ ಉದ್ಯೋಗಿಗಳು ಬಿಟ್ಟು ಹೋಗಿದ್ದಾರೆ.

**ಪರಿಣಾಮಗಳು**

ವಿ.ಸ್ವ.ನಿ.ಯೋ. ತರುವಾಯದ ಪರಿಣಾಮಗಳು ಈಗ ಕಾಣಿಸಿಕೊಳ್ಳುತ್ತಿವೆ. ಸಾರ್ವಜನಿಕ ವಲಯವು ಈ ವಿ.ಸ್ವ.ನಿ.ಯೋ. ಯಿಂದ ಅನುಕೂಲ ಪಡೆದಿದೆಯೇ ಎಂಬುದನ್ನು ಈಗಲೇ ಖಚಿತವಾಗಿ ತೀರ್ಮಾನಿಸುವುದು ಕಷ್ಟ. ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ನಗರ ಕೇಂದ್ರಗಳಲ್ಲಿ ಬ್ಯಾಂಕ್‌ಗಳು ಈಗ ಕಡಿಮೆ ಉದ್ಯೋಗಿಗಳಿಂದ ಹಿಂದಿನಷ್ಟೇ ವ್ಯವಹಾರ ನಿರ್ವಹಿಸುವ ಸವಾಲನ್ನು ಎದುರಿಸುತ್ತಿವೆ. ಇದರಿಂದ ಮೊದಲು ಬಲಿಯಾಗುವುದೆಂದರೆ, ಗಿರಾಕಿಗಳಿಗೆ ದೊರೆಯುವ ಸೇವೆಯ ಗುಣಮಟ್ಟ. ಒಬ್ಬನೇ ಉದ್ಯೋಗಿಯು ಎರಡು ಮೂರು ಇಲಾಖೆಗಳನ್ನು ನೋಡಿಕೊಳ್ಳಬೇಕಾಗುವುದರಿಂದ ಸೇವೆಯ ಗುಣಮಟ್ಟದ ಮೇಲೆ ಪರಿಣಾಮವಾಗುವುದು ನಿಶ್ಚಿತ. ಹಲವು ಬ್ಯಾಂಕ್ ಆಡಳಿತ ವರ್ಗಗಳು ಈಗಾಗಲೆ ಬಾಕಿ ಉಳಿಯುವ ಕೆಲಸಗಳು, ಗಿರಾಕಿಗಳು ಸಲ್ಲಿಸುವ ದೂರು ಇತ್ಯಾದಿಗಳ ಬಗೆಗೆ ಕಠಿಣ ನಿಲುವು ತಾಳಿವೆ. ವಿ.ಸ್ವ.ನಿ.ಯೋ.ಯು ಹೆಚ್ಚು ಕಡಿಮೆ ಎಲ್ಲ ಬ್ಯಾಂಕ್ ಶಾಖೆಗಳಲ್ಲಿಯೂ ಕೆಲಸದ ಹೊರೆಯನ್ನು ಹೆಚ್ಚಿಸಿದೆ. ಈ ಬ್ಯಾಂಕ್‌ಗಳು ವಿ.ಸ್ವ.ನಿ.ಯೋ.ಯನ್ನು ಕಾರ್ಯಗತಗೊಳಿಸುವ ಮುನ್ನ ಸಾಕಷ್ಟು ಸಿದ್ಧತೆ ಮಾಡಿಕೊಳ್ಳಬೇಕಾಗಿತ್ತು. ಆದರೆ, ತಮಗೆ ರೂಢಿಯಾಗಿದ್ದ ಕಾರ್ಯಶೈಲಿಯನ್ನು ಸಮರ್ಥಿಸುವಂತೆ ವಿ.ಸ್ವ.ನಿ.ಯೋ. ಅನಂತರದ ಪರಿಸ್ಥಿತಿಯನ್ನು ಕಲ್ಪಿಸಿಕೊಳ್ಳದೆಯೆ ಆತುರಾತುರದಲ್ಲಿ ಯೋಜನೆಯನ್ನು ಕಾರ್ಯಗತಗೊಳಿಸಿ ದೊಡ್ಡ ತಪ್ಪು ಮಾಡಿದವು.

**ತೀರ್ಮಾನ**

ಈಗ ಬ್ಯಾಂಕ್ ಆಡಳಿತವರ್ಗಗಳು ತಮ್ಮ ಅಸ್ತಿತ್ವದ ಸವಾಲನ್ನು ಎದುರಿಸುವುದಕ್ಕಾಗಿಯೆ ಹೊಸ ಸಮೀಕರಣಗಳನ್ನು ರೂಪಿಸಿಕೊಳ್ಳಬೇಕಾಗಿದೆ. ಸದ್ಯಕ್ಕೆ ಉಳಿದಿರುವ ಉದ್ಯೋಗಿಗಳ ಮೇಲೆ ಅತಿಯಾದ ಒತ್ತಡ ಹೇರಿದರೆ ಅದರಿಂದ 'ಉತ್ಪಾದನೆ' ಕುಸಿದು ಋಣಾತ್ಮಕ ಪರಿಣಾಮಗಳುಂಟಾಗಬಹುದು. ಆದ್ದರಿಂದ ವಿ.ಸ್ವ.ನಿ.ಯೋ. ಅನಂತರದ ಪರಿಸ್ಥಿತಿಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ ಅದಕ್ಕೆ ಹೊಂದುವಂತಹ ಹೊಸ ತೀರ್ಮಾನಗಳನ್ನು ಎಚ್ಚರಿಕೆಯಿಂದ ತೆಗೆದುಕೊಳ್ಳಬೇಕಾಗಿದೆ. ಸರಿಯಾದ ರೀತಿಯಲ್ಲಿ ಪ್ರೇರಣೆ ಪ್ರೋತ್ಸಾಹಗಳನ್ನು ಪಡೆದ ಉದ್ಯೋಗಿಯು ಬ್ಯಾಂಕ್ ಶಾಖೆಗಳಲ್ಲಿ ಒದಗಿರುವ ಕಷ್ಟದ ಪರಿಸ್ಥಿತಿಯನ್ನು ಎದುರಿಸುವುದಕ್ಕೆ ಅರ್ಥಪೂರ್ಣ ಕೊಡುಗೆ ಸಲ್ಲಿಸಬಹುದು.

*(ಶಂಕರನಾರಾಯಣರ ಈ ಲೇಖನವನ್ನು ಪ್ರಕಟಣೆಗೆ ಸಿದ್ಧಗೊಳಿಸಿಕೊಟ್ಟವರು ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ.)*

ಶಂಕರನಾರಾಯಣ್
ನಂ. ೫೪/೧೧೪, ಕೆನರಾ ಬ್ಯಾಂಕ್ ಕಾಲೋನಿ, ಚಿಕ್ಕಸಂದ್ರ, ಸುಬ್ರಹ್ಮಣ್ಯಪುರ ಪೋಸ್ಟ್, ಬೆಂಗಳೂರು-೫೬೦ ೦೬೧

# ರಾಷ್ಟ್ರೀಕೃತ ಬ್ಯಾಂಕ್‌ಗಳ ಸ್ವಯಂ ನಿವೃತ್ತಿ ಯೋಜನೆ

## - ಒಂದು ವಿಶ್ಲೇಷಣೆ

ಬ್ಯಾಂಕ್ ಕ್ಷೇತ್ರ ನಮ್ಮ ದೇಶದ ಆರ್ಥಿಕ ವ್ಯವಸ್ಥೆಯ ಬೆನ್ನೆಲುಬು. ಸಾರ್ವಜನಿಕ ಕ್ಷೇತ್ರದಲ್ಲಿರುವ ಬ್ಯಾಂಕ್‌ಗಳು ರಾಷ್ಟ್ರೀಯ ಅಭಿವೃದ್ಧಿಗೆ ಸಲ್ಲಿಸಿರುವ ಕೊಡುಗೆ ಅಪಾರ. ಈ ಕ್ಷೇತ್ರ ಬೆಳೆದದ್ದು, ವಿಸ್ತರಿಸಿದ್ದು ರಾಷ್ಟ್ರೀಕರಣಗೊಂಡ ನಂತರವೇ ಎಂಬುದು ಗಮನಾರ್ಹ ಅಂಶ. ರಾಷ್ಟ್ರೀಕರಣಕ್ಕಿಂತ ಮುಂಚೆ ಖಾಸಗಿ ಕ್ಷೇತ್ರದಲ್ಲಿದ್ದ ಬ್ಯಾಂಕ್‌ಗಳ ಒಡೆತನ ದೊಡ್ಡ ಬಂಡವಾಳಗಾರರ, ವ್ಯಾಪಾರಸ್ಥರ ಗುಂಪುಗಳ ಕಪಿಮುಷ್ಟಿಯಲ್ಲಿದ್ದವು. ಸಾರ್ವಜನಿಕ ಹಿತಾಸಕ್ತಿಗಿಂತ ಮಾಲಿಕರ ಸ್ವಹಿತಕ್ಕಾಗೇ ಬ್ಯಾಂಕ್ ಸೌಲಭ್ಯಗಳು ಸೀಮಿತವಾಗಿದ್ದವೆಂದರೆ ತಪ್ಪಾಗಲಾರದು. ಆಡಳಿತ ವರ್ಗದವರ ಬಂಧುಗಳಿಗೇ ಹೆಚ್ಚಿನ ಮನ್ನಣೆ. ಶ್ರೀಸಾಮಾನ್ಯ ನಗಣ್ಯನಾಗಿದ್ದ. ಅದು ಗ್ರಾಮೀಣ ಪ್ರದೇಶಗಳಲ್ಲಿ ಶಾಖೆಗಳು ಬಹಳ ವಿರಳವಾಗಿದ್ದ ಕಾಲ. ಅಲ್ಲಿನ ಜನರು ಜಮೀನುದಾರರ, ಲೇವಾದೇವಿ ಮಾಡುವವರ ಹಿಡಿತದಲ್ಲಿ ಸಿಲುಕಿ ನಲುಗುತ್ತಿದ್ದರು. ಇವಲ್ಲದೇ, ದೇಶದ ಸರ್ವಾಂಗೀಣ ಏಳಿಗೆಗೆ ಯಾವುದೇ ನಿರ್ದಿಷ್ಟವಾದ ಯೋಜನೆಗಳನ್ನು ಜಾರಿ ಮಾಡುವಲ್ಲಿ ಈ ಖಾಸಗಿ ಕ್ಷೇತ್ರದ ಬ್ಯಾಂಕ್‌ಗಳು ನೆರವಾಗಲು ಆಸಕ್ತಿ ವಹಿಸದೇ ಇದ್ದದ್ದು ಎಲ್ಲರಿಗೂ ತಿಳಿದ ವಿಷಯ.

ಈ ಹಿನ್ನೆಲೆಯಲ್ಲಿ ಅಖಿಲ ಭಾರತ ಬ್ಯಾಂಕ್ ನೌಕರರ ಸಂಘದ (ಎ ಐ ಬಿ ಇ ಎ) ನೇತೃತ್ವದಲ್ಲಿ ಬ್ಯಾಂಕ್ ನೌಕರರು ೫೦-೬೦ರ ದಶಕದಲ್ಲಿ ಬ್ಯಾಂಕ್‌ಗಳ ರಾಷ್ಟ್ರೀಕರಣಕ್ಕಾಗಿ ಹೋರಾಡಲು ಸನ್ನದ್ಧರಾದರು. ಈ ನಿಟ್ಟಿನಲ್ಲಿ ಜನರಲ್ಲಿ ಜಾಗೃತಿ ಮೂಡಿಸಲು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಸೀಮಿತ ಆರ್ಥಿಕತೆಯನ್ನು ಮೀರಿ ರಾಷ್ಟ್ರೀಯ ಹಿತದೃಷ್ಟಿಯಿಂದ ಬ್ಯಾಂಕ್ ನೌಕರರು ಹೋರಾಟದ ಕಣಕ್ಕೆ ಇಳಿದಿದ್ದು ಶ್ಲಾಘನೀಯ ಸಂಗತಿ. ಚರಿತ್ರಾರ್ಹವೂ ಕೂಡ.

ಈ ಚಳುವಳಿ ಕಾಂಗ್ರೆಸ್ ಪಕ್ಷದ ರಾಜಕೀಯ ಮತ್ತು ಆರ್ಥಿಕ ಧೋರಣೆಗಳ ಮೇಲೂ ಪರಿಣಾಮ ಬೀರಿತು. ಈ ದಿಶೆಯಲ್ಲಿ ಕಾಂಗ್ರೆಸ್ ಪಕ್ಷ ಕೆಲವು ನಿರ್ಧಾರಗಳನ್ನು ತೆಗೆದುಕೊಳ್ಳುವಂತೆ ಪ್ರೇರೇಪಿಸಿತು. ಈ ಚಳುವಳಿಗೆ ಅನೇಕ ಪ್ರಗತಿಪರ ಸಂಘಟನೆಗಳ, ಆರ್ಥಿಕ ತಜ್ಞರ, ಬುದ್ಧಿಜೀವಿಗಳ ಬೆಂಬಲ ದೊರಕಿದ್ದು ಗಮನಾರ್ಹ.

ಜುಲೈ ೧೯, ೧೯೬೯ರಂದು ಅಂದಿನ ಪ್ರಧಾನಿ ಇಂದಿರಾ ಗಾಂಧಿ ಬ್ಯಾಂಕ್‌ಗಳನ್ನು ರಾಷ್ಟ್ರೀಕರಣಗೊಳಿಸುವ ಮಸೂದೆಯನ್ನು ಸಂಸತ್‌ನಲ್ಲಿ ಮಂಡಿಸಿದ ಸಂದರ್ಭದಲ್ಲಿ ಬಿಜೆಪಿಯ ಹಿಂದಿನ ಅವತಾರವಾಗಿದ್ದ ಜನಸಂಘ ಮತ್ತಿತರ ಬಲಪಂಥೀಯ ಶಕ್ತಿಗಳು ಈ ಕ್ರಮವನ್ನು ಬಲವಾಗಿ ವಿರೋಧಿಸಿದವು. ತೋರಿಕೆಗಾದರೂ ಇಂದಿರಾ ಗಾಂಧಿ ಅವರಿಗೆ ಎಡಪಂಥೀಯ ನಿಲುವಿನ ಅವಶ್ಯಕತೆಯಿತ್ತೆಂದು, ರಾಜಕೀಯ ತಂತ್ರಕ್ಕೆ ಅನುಗುಣವಾಗಿ ಆಕೆ ಈ ನಿರ್ಧಾರ ಕೈಗೊಂಡರೆಂದು ಬಿಂಬಿಸಲಾಯಿತು. ಈ ವಾದದಲ್ಲಿ ಸ್ವಲ್ಪ ಹುರುಳಿಲ್ಲದೆ ಇಲ್ಲ. ಆದರೆ ಅಂದಿನ ಸರ್ಕಾರ ಸಮಾಜವಾದಿ ನಿಟ್ಟಿನಲ್ಲಿ ಕೈಗೊಂಡ ಒಂದು ನಿರ್ಣಾಯಕವಾದ ಕ್ರಮ ಇದು ಎಂಬುದನ್ನು ಯಾರೂ ಅಲ್ಲಗಳೆಯುವ ಹಾಗಿಲ್ಲ. ಕೆಲವರಿಂದ ಅಪಸ್ವರವೆದ್ದರೂ, ಹೆಚ್ಚಿನವರು ಈ ಚಾರಿತ್ರಿಕ ನಿರ್ಧಾರವನ್ನು ಸ್ವಾಗತಿಸಿದರು.

ಎಣಿಸಿದಂತೆಯೇ, ರಾಷ್ಟ್ರೀಕರಣದ ನಂತರ ಬ್ಯಾಂಕ್ ಕ್ಷೇತ್ರ ಅಗಾಧವಾಗಿ ಬೆಳೆದದ್ದು ಈ ಅವಧಿಯಲ್ಲಿಯೇ. ವಿವಿಧ ಜನವಿಭಾಗಗಳಲ್ಲಿ ಉಳಿತಾಯ ಮನೋಭಾವವನ್ನು ಜನಪ್ರಿಯಗೊಳಿಸುವ ಪ್ರಯತ್ನಗಳಾದವು. ಜೊತೆಗೆ ಹಲವು ಜನಪರ ಯೋಜನೆಗಳು ಜಾರಿಗೆ ಬಂದದ್ದು ಆ ಕಾಲಾವಧಿಯಲ್ಲಿಯೇ. ಅಂಚಿನಲ್ಲಿದ್ದವರಿಗೆ ಬ್ಯಾಂಕ್ ಸೌಲಭ್ಯಗಳು ದೊರೆತು ಆರ್ಥಿಕವಾಗಿ ಸಬಲರಾಗುವುದರಲ್ಲಿ ಬ್ಯಾಂಕ್‌ಗಳು ಮಹತ್ವದ ಪಾತ್ರ ವಹಿಸಿದವು. ಬ್ಯಾಂಕ್ ಕ್ಷೇತ್ರದಲ್ಲಿ ಉದ್ಯೋಗಾವಕಾಶಗಳು ಹೆಚ್ಚಿದವು. ಇವು ಸಕಾರಾತ್ಮಕ ಬೆಳವಣಿಗೆಗಳಾಗಿದ್ದವು. ಜೊತೆಯಲ್ಲೇ ಕೆಲವು ನಕಾರಾತ್ಮಕ ಬೆಳವಣಿಗೆಗಳು ತಲೆದೋರಿದವು. ಬ್ಯಾಂಕ್‌ಗಳು ರಾಷ್ಟ್ರೀಕರಣಗೊಂಡನಂತರವೂ ಕೆಲವು ಪಟ್ಟಭದ್ರ ಹಿತಾಸಕ್ತಿಗಳು, ಗುತ್ತೇದಾರಿ ಬಂಡವಾಳಗಾರರ ಗುಂಪುಗಳು, ರಾಷ್ಟ್ರೀಕೃತ ಬ್ಯಾಂಕ್‌ಗಳನ್ನು ತಮ್ಮ ಹಿಡಿತದಲ್ಲಿರಿಸಿಕೊಂಡವು. ಆಳುವ ವರ್ಗವಲ್ಲದೆ ಇತರೆ ರಾಜಕೀಯ ದುಷ್ಟ ಶಕ್ತಿಗಳು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಹಸ್ತಕ್ಷೇಪ ಮಾಡಿದವು. ದೊಡ್ಡ ಉದ್ಯಮಿಗಳು, ಬಂಡವಾಳಗಾರರು, ರಾಜಕೀಯ ಧುರೀಣರು ಹಾಗೂ ಬ್ಯಾಂಕ್‌ಗಳ ಕೆಲವು ಉನ್ನತ, ಭ್ರಷ್ಟ ಅಧಿಕಾರಿಗಳು ಷಡ್ಯಂತ್ರ ರೂಪಿಸಿ, ಸಾಲಗಳ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿದ್ದ ಸಾರ್ವಜನಿಕರ ಹಣವನ್ನು ಲೂಟಿ ಮಾಡಿದರು. ಪರಿಣಾಮವಾಗಿ ಈಗ ಮರುಪಾವತಿಯಾಗದಿರುವ ಸಾಲಗಳ (ಅನುತ್ಪಾದಕ ಸ್ವತ್ತುಗಳು - ಎನ್.ಪಿ.ಎ.) ಮೊತ್ತ ಸುಮಾರು ರೂ. ೭೦,೦೦೦ ಕೋಟಿ. ಇದಕ್ಕೆ ಬಡ್ಡಿಯನ್ನೂ ಸೇರಿಸಿದರೆ, ಸುಮಾರು ಒಂದು ಲಕ್ಷ ಕೋಟಿಯಾಗುತ್ತದೆ. ಈ ಹಗಲು ದರೋಡೆಯಲ್ಲಿ ಖಾಸಗಿ ರಂಗದ ಕಾರ್ಪೊರೇಟ್ ಕ್ಷೇತ್ರದ ಪಾಲು ಅತಿ ದೊಡ್ಡದೆಂಬುದು ಜನಸಾಮಾನ್ಯರ ಗಮನಕ್ಕೆ ಬರ ಬೇಕಾಗಿದೆ. ಆದರೆ ಕಾರ್ಪೊರೇಟ್ ರಂಗದ ದೊಡ್ಡ ತಲೆಗಳೇ ಅಲ್ಲವೇ ನಮ್ಮ ದೇಶದ ಆರ್ಥಿಕ ನೀತಿ-ರೀತಿಗಳನ್ನು ರೂಪಿಸುತ್ತಿರುವುದು ! ಹಲವು ವರ್ಷಗಳು ವ್ಯವಸ್ಥಿತವಾಗಿ ಜರುಗಿದ ಈ ಲೂಟಿ ಬ್ಯಾಂಕುಗಳ ಅಸ್ತಿತ್ವವನ್ನೇ ಅಲುಗಾಡಿಸಿತು. ಎಐಬಿಇಎಯ ಮುಂದಾಳತ್ವದಲ್ಲಿ ದೇಶಾದ್ಯಂತ ಬ್ಯಾಂಕ್ ನೌಕರರು ಪ್ರತಿಭಟನೆ ಮಾಡಿದರು. ರೂ. ೧೦ ಲಕ್ಷಕ್ಕೂ ಮೀರಿದ ಸಾಲಗಳನ್ನು ಮರುಪಾವತಿ ಮಾಡದ ಸುಸ್ತಿದಾರರ ಒಂದು ಹೊತ್ತಿಗೆಯನ್ನೇ ಈ ಸಂಘಟನೆ ಪ್ರಕಟಿಸಿದೆ. ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸಲು ಸೂಕ್ತ ಕಾರ್ಯಕ್ರಮಗಳನ್ನು ನೌಕರರ ಸಂಘಟನೆಗಳಿಂದ ಹಮ್ಮಿಕೊಳ್ಳಲಾಯಿತು. ಗ್ರಾಹಕರ ಸೇವೆಯಲ್ಲೂ ಸ್ವಲ್ಪ ಇಳಿಮುಖವಾದದ್ದು ದುರಂತದ ವಿಷಯ. ಆದರೆ ಎಐಬಿಇಎ ಮೊದಲಿನಿಂದಲೂ ಗ್ರಾಹಕರ ಸೇವೆಗೆ ಪ್ರಾಶಸ್ತ್ಯ ನೀಡುತ್ತಾ ಬಂದಿರುವುದು ಹಾಗೂ ಸದಸ್ಯರಿಗೆ ಸೂಕ್ತ ರೀತಿಯಲ್ಲಿ ಮನವರಿಕೆ ಮಾಡಿಕೊಡುತ್ತಿರುವುದು ಗಮನಾರ್ಹ ವಿಷಯ.

ಮಡಕಶಿರ ಶ್ರೀ. ಮು. ಕೃಷ್ಣ



೧೯೯೧ರಲ್ಲಿ ಅಂದಿನ ಕಾಂಗ್ರೆಸ್ ಸರ್ಕಾರ ಆರ್ಥಿಕ ಸುಧಾರಣೆಗಳೆಂಬ ಹೆಸರಿನಲ್ಲಿ ನೂತನ ಆರ್ಥಿಕ ನೀತಿಗಳನ್ನು ಘೋಷಿಸಿತು. ಅದು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಹಾಗೂ ವಿಶ್ವ ಬ್ಯಾಂಕುಗಳ ಆದೇಶಗಳ ಮೇರೆಗೆ ನಮ್ಮ ದೇಶದಲ್ಲಿ ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣದ ನೀತಿಗಳಿಗೆ ನಾಂದಿ ಹಾಡಿತು. ಸಾರ್ವಜನಿಕ ವಲಯದ ಉದ್ದಿಮೆಗಳ ಖಾಸಗೀಕರಣ, ಬಹುರಾಷ್ಟ್ರೀಯ ಕಂಪನಿಗಳಿಗೆ ಮುಕ್ತ ಸ್ವಾಗತ ಹಾಗೂ ನಿರ್ಬಂಧನಾ ಕ್ರಮಗಳ ಸಡಿಲಿಕೆ ಮುಂತಾದುವು ಈ ನೀತಿಗಳ ಹಿಂದಿದ್ದ ಧ್ಯೇಯೋದ್ದೇಶಗಳು. ಆರ್ಥಿಕ ಸುಧಾರಣೆಗಳನ್ನು ಜಾರಿ ಮಾಡುವ ನಿಟ್ಟಿನಲ್ಲಿ, ಆರ್ಥಿಕ ರಂಗದಲ್ಲಿ, ನರಸಿಂಹಂ ಸಮಿತಿಯನ್ನು ರಚಿಸಲಾಯಿತು. ಮುಖ್ಯವಾಗಿ ಬ್ಯಾಂಕ್ ಕ್ಷೇತ್ರದಲ್ಲಿ ಆಗಬೇಕಾಗಿದ್ದ ಸುಧಾರಣೆಗಳಿಗೆ ಹೆಚ್ಚು ಒತ್ತನ್ನು ಕೊಟ್ಟ ವರದಿಯೊಂದನ್ನು ಈ ಸಮಿತಿ ನೀಡಿತು. ಶೇ. ೨೨ರಷ್ಟು ಹೆಚ್ಚು ನೌಕರರು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿದ್ದಾರೆಂಬುದು ಅದರ ಅಂದಾಜು. ಈ ಬ್ಯಾಂಕ್‌ಗಳು ಬೊಜ್ಜನ್ನು ಕರಗಿಸಿಕೊಂಡು (ಅರ್ಥಾತ್ ನೌಕರರನ್ನು ಕಡಿಮೆಗೊಳಿಸುವುದು), ಗಣಕೀಕರಣ ಹಾಗೂ ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡರೆ ಮಾತ್ರ ಜಾಗತೀಕರಣದ ಸಂದರ್ಭದಲ್ಲಿ ಉದ್ಭವಿಸುವ ಸ್ಪರ್ಧೆಯನ್ನು ಎದುರಿಸಬಹುದೆಂಬುದು ನರಸಿಂಹಂ ಸಮಿತಿಯ ಅಭಿಪ್ರಾಯ. ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಸಾಲ ನೀಡುವಾಗ ಈ ಅಂತರರಾಷ್ಟ್ರೀಯ ಸಂಸ್ಥೆಗಳು ವಿಧಿಸುವ ಷರತ್ತುಗಳೆಂದರೆ - ಸಾರ್ವಜನಿಕ ಕ್ಷೇತ್ರಗಳ ಖಾಸಗೀಕರಣ, ಆರ್ಥಿಕ ಕ್ಷೇತ್ರದಲ್ಲಿ ಹಾಗೂ ಕಾರ್ಮಿಕರಿಗೆ ಸಂಬಂಧಿಸಿದ ಕಾನೂನುಗಳಲ್ಲಿ ಆಗಬೇಕಾದ ಸುಧಾರಣೆಗಳು, ಆಧುನಿಕ ತಂತ್ರಜ್ಞಾನಗಳ ಅಳವಡಿಕೆ – ಮುಂತಾದುವು. ನರಸಿಂಹಂ ಸಮಿತಿಯ ವರದಿಯು ಈ ಸಂಸ್ಥೆಗಳ ಉದ್ದೇಶಗಳಿಗೆ ತಕ್ಕಂತೆ ಇದ್ದದ್ದು ಕಾಕತಾಳೀಯವೇನೂ ಆಗಿರಲಿಲ್ಲ. ಎಲ್ಲವೂ ವ್ಯವಸ್ಥಿತವಾಗಿ ನಡೆಯಿತು: *ಭಾರತದ ಆರ್ಥಿಕ ಕ್ಷೇತ್ರದ ಜೀವಾಂಶವಾಗಿದ್ದ ಬ್ಯಾಂಕ್ ರಂಗದಲ್ಲಿ ಸಂಘಟಿತ, ಬಲಿಷ್ಠ ಕಾರ್ಮಿಕ ಸಂಘಟನೆಗಳಿರುವುದು ಆಡಳಿತ ವರ್ಗಕ್ಕೆ ನುಂಗಲಾರದ ತುತ್ತಾಗಿತ್ತು. ಹೇಗಾದರೂ ಮಾಡಿ, ಇದರ ಶಕ್ತಿಯನ್ನು ಮುರಿಯುವತ್ತ ನೀಲಿ ನಕ್ಷೆಯೊಂದನ್ನು ತಯಾರಿಸಲಾಯಿತು. ಇದರ ಫಲವೇ ವಿಶೇಷ ಸ್ವಯಂ ನಿವೃತ್ತಿ ಯೋಜನೆ (ವಿ.ಸ್ವ.ನಿ.ಯೋ.).* ಜೊತೆಯಲ್ಲಿ, ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿನ ಸರ್ಕಾರದ ಸ್ವಾಮ್ಯವನ್ನು ಇಳಿಸುವುದು, ಹೊಸ ಖಾಸಗಿ ಬ್ಯಾಂಕ್‌ಗಳ ಸ್ಥಾಪನೆಗೆ ಪ್ರೋತ್ಸಾಹ ನೀಡುವುದು.... ಇತ್ಯಾದಿ ಯೋಜನೆಗಳು ಸೇರಿದವು.

ಬ್ಯಾಂಕ್ ಕ್ಷೇತ್ರದಲ್ಲಿ ಸುಧಾರಣೆಗಳು ಜಾರಿಯಾಗುವ ಸ್ವಲ್ಪ ಮುನ್ನವೇ ಸಿಬ್ಬಂದಿಯ ನೇಮಕಾತಿಯ ವಿಷಯದಲ್ಲಿ ನಿರ್ಬಂಧಗಳನ್ನು ಹೇರಲಾಗಿತ್ತು. ಜಾರಿಯಾದ ಮೇಲೆ, ಇನ್ನೂ ಬಿಗಿಗೊಳಿಸಲಾಯಿತು. ಸುಧಾರಣೆಗಳು ಜಾರಿಯಾದ ಒಂಬತ್ತು ವರ್ಷಗಳ ನಂತರ ಉದ್ಯೋಗಗಳನ್ನು ಕಡಿಮೆಗೊಳಿಸುವ ಉದ್ದೇಶದಿಂದ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ವಿ.ಸ್ವ.ನಿ.ಯೋ. ಜಾರಿಯಾಯಿತು. ೧೯೯೪-೯೫ರಲ್ಲಿ ಚಾಲ್ತಿಗೆ ಬಂದ ಪಿಂಚಣಿ ಯೋಜನೆಯ ಸ್ವಯಂ ನಿವೃತ್ತಿ ಯೋಜನೆಯಡಿಯಲ್ಲಿ ತೀರಾ ಕಡಿಮೆ ಸಿಬ್ಬಂದಿ ನಿರ್ಗಮಿಸುತ್ತಿದ್ದುದರಿಂದ, ಆಕರ್ಷಕವಾದ ಈ ಬದಲೀ ತಂತ್ರವನ್ನು ಬಳಸಲಾಯಿತು. ''ಉದ್ಯೋಗಿಗಳೇ, ನಿಮ್ಮ ಕೆಲಸಗಳನ್ನು ಬಿಟ್ಟುಕೊಡಿ. ಅತ್ಯಾಕರ್ಷಕವಾದ ಇಡುಗಂಟನ್ನು ಪಡೆಯಿರಿ'' ಎಂಬ ಆಮಿಷವನ್ನು ಒಡ್ಡಲಾಯಿತು. ಎಐಬಿಇಎ ನೇತೃತ್ವದಲ್ಲಿ ಬ್ಯಾಂಕ್ ಸಂಘಗಳ ಸಂಯುಕ್ತ ವೇದಿಕೆ ಈ ಯೋಜನೆಗೆ ಪ್ರಬಲ ವಿರೋಧ ವ್ಯಕ್ತಪಡಿಸಿತು. ಕೆಲಸಗಳನ್ನು ಕಬಳಿಸುವ, ಕೆಲಸದ ಭದ್ರತೆಯನ್ನು ಕಸಿದುಕೊಳ್ಳುವ ಈ ಯೋಜನೆಯನ್ನು ಬಯಲುಮಾಡಿದ್ದು ಬ್ಯಾಂಕ್ ನೌಕರರ ಸಂಘಟನೆಗಳು. ಈ ಯೋಜನೆಯಿಂದ ತೆರವಾದ ಸ್ಥಾನಗಳನ್ನು ಭರ್ತಿಮಾಡಬಾರದೆಂದು ಬ್ಯಾಂಕ್‌ಗಳಿಗೆ ಸರ್ಕಾರ ನೀಡಿದ ನಿರ್ದೇಶನದ ಹಿಂದಿನ ಉದ್ದೇಶವನ್ನು (ದುರುದ್ದೇಶವನ್ನು) ತಿಳಿಸಿತು. ಆದರೂ, ಉದ್ಯೋಗಿಗಳಿಂದ ಈ ಯೋಜನೆಗೆ ಅರ್ಜಿಗಳ ಮಹಾಪೂರವೇ ಹರಿಯಿತು. ಮಧ್ಯಮ ವರ್ಗದ ಉದ್ಯೋಗಿಗಳೆಂದೇ ಗುರುತಿಸಲ್ಪಡುವ ಬ್ಯಾಂಕ್ ನೌಕರರು - ಅಧಿಕಾರಿಗಳು ತಮ್ಮ ವರ್ಗದ ಮನೋಭಾವವನ್ನು ಢಾಳಾಗಿ ಪ್ರದರ್ಶಿಸಿದರು. ಸುಮಾರು ಇದೊಂದು ಗಾಳಿ ಬೀಸಿದಾಗ ತೂರಿಕೊಳ್ಳುವ ಮನೋಧರ್ಮ. ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ೧.೨೫ ಲಕ್ಷ ಉದ್ಯೋಗಿಗಳು ಹೊರನಡೆದರು. ಬ್ಯಾಂಕ್‌ಗಳು ಅನುಸರಿಸುತ್ತಿರುವ ಮಾನವ ಸಂಪನ್ಮೂಲಗಳ ಕ್ರೂರ ನೀತಿಗಳಿಗೆ ಇದು ಕೈಗನ್ನಡಿಯಾಗಿದೆ.

ಮರುಪಾವತಿಯಾಗದ ದೊಡ್ಡ ಮೊತ್ತದ ಸಾಲಗಳನ್ನು ವಸೂಲು ಮಾಡುವತ್ತ ಸರ್ಕಾರ ಪ್ರಾಮಾಣಿಕ ಪ್ರಯತ್ನ ಮಾಡಿದ್ದರೆ ರಾಷ್ಟ್ರೀಕೃತ ಬ್ಯಾಂಕ್‌ಗಳ ಪರಿಸ್ಥಿತಿ ಇನ್ನೂ ಉತ್ತಮ ಮಟ್ಟದ್ದಾಗಿರುತ್ತಿತ್ತಲ್ಲವೇ ? ಈ ಕೆಟ್ಟ ಸಾಲಗಳಿಗೆ ಬ್ಯಾಂಕ್ ಉದ್ಯೋಗಿಗಳು ಜವಾಬ್ದಾರರೇ ? ರಾಷ್ಟ್ರೀಕೃತ ಬ್ಯಾಂಕ್‌ಗಳ ಉದ್ಯೋಗಿಯೊಬ್ಬನ ಉತ್ಪಾದಕತೆ (ಬ್ಯಾಂಕ್ ಕ್ಷೇತ್ರದಲ್ಲಿ ಇದನ್ನು ಉದ್ಯೋಗಿಯೊಬ್ಬನಿಂದಾಗುವ ವ್ಯಾಪಾರದ ಮೊತ್ತವೆಂದು ಗುರುತಿಸುತ್ತಾರೆ) ಕಡಿಮೆಯಿದೆಯೆಂದು ವಿತ್ತ ಮಂತ್ರಾಲಯದ ಅಭಿಪ್ರಾಯ. ಇದನ್ನು ವಾಮಮಾರ್ಗದಿಂದ ಏರಿಸಲು, ನೌಕರರನ್ನು (ಉದ್ಯೋಗಿಗಳನ್ನು) ಕಡಿಮೆ ಮಾಡುವ ಹುನ್ನಾರದಿಂದ, ವಿ.ಸ್ವ.ನಿ.ಯೋ.ವನ್ನು ಜಾರಿ ಮಾಡಲಾಯಿತೆ ? ಎನ್.ಪಿ.ಎ.ಗಳನ್ನು ವಸೂಲು ಮಾಡಿದ್ದರೆ ಉತ್ಪಾದಕತೆ ಹೆಚ್ಚುತ್ತಿರಲಿಲ್ಲವೇ ? ಬ್ಯಾಂಕ್ ಸೇವಾ ಸೌಲಭ್ಯಗಳು ಇನ್ನೂ ಕೆಲವು ಪ್ರದೇಶಗಳಿಗೆ ತಲುಪಿಲ್ಲ. ಅಂತಹ ಸ್ಥಳಗಳಲ್ಲಿ ಶಾಖೆಗಳನ್ನು ತೆರೆದರೆ, ಬ್ಯಾಂಕ್‌ಗೆ ಒಟ್ಟಾರೆ ವ್ಯವಹಾರ ಹೆಚ್ಚುತ್ತಿರಲಿಲ್ಲವೆ ? ಈ ಪ್ರಶ್ನೆಗಳಿಗೆ ಸರ್ಕಾರದ ಬಳಿ ಉತ್ತರಗಳಿವೆಯೇ ?

ಖಾಸಗಿ ಕ್ಷೇತ್ರವನ್ನೊಳಗೊಂಡು ಇತರ ಕ್ಷೇತ್ರಗಳಲ್ಲಿ ವಿ.ಸ್ವ.ನಿ. ಯೋಜನೆಯಡಿಯಲ್ಲಿ ಕೆಲಸ ಕಳೆದುಕೊಂಡ ಹೆಚ್ಚಿನ ನೌಕರರು ಪುನರ್ನೇಮಕಗೊಂಡಿಲ್ಲ. ಬ್ಯಾಂಕ್‌ಗಳನ್ನು ತೊರೆದ ಉದ್ಯೋಗಿಗಳ ಸ್ಥಿತಿ-ಗತಿಯ ಬಗ್ಗೆ ಸಮೀಕ್ಷೆ ನಡೆಯಬೇಕಾದರೆ ಇನ್ನೂ ಒಂದು ವರ್ಷ ಕಾದು ನೋಡಬೇಕು. ಆಗ ಸ್ಪಷ್ಟ ಚಿತ್ರಣ ದೊರೆಯಬಹುದು.

ವಿ.ಸ್ವ.ನಿ. ಯೋಜನೆಯ ನಂತರದ ಅವಧಿಯಲ್ಲಿ ಉಳಿದಿರುವ ಬ್ಯಾಂಕ್ ಉದ್ಯೋಗಿಗಳ ಮೇಲೆ ಕೆಲಸದ ಒತ್ತಡ ಈಗ ಜಾಸ್ತಿಯಾಗಿದೆ. ಇದು ಸ್ವಾಭಾವಿಕವಾಗಿ ಗ್ರಾಹಕರ ಸೇವೆಯ ಮೇಲೆ ಪರಿಣಾಮ ಬೀರುತ್ತಿದೆ.

ಕ್ರಮೇಣ ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳನ್ನು ನಿಶ್ಶಕ್ತಿಗೊಳಿಸುವ ಸಂಚಿರಬಹುದಾದ ಸಂದರ್ಭದಲ್ಲಿ, ಬ್ಯಾಂಕ್ ಉದ್ಯೋಗಿಗಳು ಎಚ್ಚರದಿಂದಿರಬೇಕಾದ ಅಗತ್ಯವಿದೆ. ಇಲ್ಲದಿದ್ದರೆ ಭಾರತ್ ಅಲ್ಯುಮಿನಿಯಮ್ ಕಂಪನಿಯ ವಿಷಯದಲ್ಲಿ ಆದ ಹಾಗೆ ಲಾಭಗಳಿಸುತ್ತಿರುವ ರಾಷ್ಟ್ರೀಕೃತ ಬ್ಯಾಂಕ್‌ಗಳನ್ನು ಖಾಸಗೀಕರಣಗೊಳಿಸುವ ದಿವಸಗಳು ದೂರವಿಲ್ಲ. ಆಗ, ಸಾರ್ವಜನಿಕರ ಹಣವನ್ನು ಸಾಲಗಳ ರೂಪದಲ್ಲಿ ಸೂರೆಗೈದ ಕಾರ್ಪೊರೇಟ್ ಕ್ಷೇತ್ರದ ತಿಮಿಂಗಲಗಳೇ ನೇರವಾಗಿ ಬ್ಯಾಂಕ್‌ಗಳ ಆಡಳಿತದ ಚುಕ್ಕಾಣಿ ಹಿಡಿಯುವುದಕ್ಕೆ ಅನುಕೂಲವಾಗುತ್ತದೆ. ರಾಷ್ಟ್ರದ ಹಿತದೃಷ್ಟಿಯಿಂದ ಹಾಗಾಗದಂತೆ ನೋಡಿಕೊಳ್ಳುವುದೇ ಬ್ಯಾಂಕ್ ಉದ್ಯೋಗಿಗಳ ಹಾಗೂ ಪ್ರಜ್ಞಾವಂತ ಜನತೆಯ ಮೇಲಿರುವ ದೊಡ್ಡ ಜವಾಬ್ದಾರಿ

ಮಡಕಶಿರ ಶ್ರೀ. ಮು. [redacted]
ಬೆಂಗಳೂರು

## ಬೇಡಿ ಕಳಚಿತು ದೇಶ ಒಡೆಯಿತು (ಕಾದಂಬರಿ)




*ಕೋ. ಚೆನ್ನಬಸಪ್ಪ*

**ಪುಟ : 972** **ಬೆಲೆ : ರೂ. 600**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001

ಇದೇ ಏಪ್ರಿಲ್ ೧೫ರಂದು ನವಕರ್ನಾಟಕ ಪ್ರಕಾಶನದ ವರಿಂದ ಬಿಡುಗಡೆಗೊಂಡ ಸುಮಾರು ಒಂದು ಸಾವಿರ ಪುಟಗಳ ಈ ಮಹಾಕೃತಿಯಲ್ಲಿರುವ ವಿಷಯ ವೈಶಾಲ್ಯ, ನಾನಾ ವಿಚಾರಗಳ ವೈವಿಧ್ಯತೆ, ಪಕ್ಷ-ಪಂಗಡಗಳ, ನೀತಿ-ನಿಯಮಗಳ ಸಮರ್ಥ ವಿಶ್ಲೇಷಣೆ, ಅನೇಕ ಘಟನೆಗಳ ಜಾಗತಿಕ ವ್ಯಾಪ್ತಿ, ಇವುಗಳನ್ನೆಲ್ಲಾ ಓದಿ, ಸವಿದು ನಿಬ್ಬೆರಗಾಗಿದ್ದೇನೆ. ಎಷ್ಟೊಂದು ಮೂಲಗಳಿಂದ ಮತ್ತು ಹಲವಾರು ದೇಶಗಳ ಪುಸ್ತಕ ಭಂಡಾರಗಳಲ್ಲಿರುವ ಕ್ಲುಪ್ತ ಆಕರಗಳಿಂದ, ನಮ್ಮ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ವಾಸ್ತವಾಂಶಗಳನ್ನು ಅತೀವ ಶ್ರಮ-ಶ್ರದ್ಧೆಗಳಿಂದ ಸಂಗ್ರಹಿಸಿ, ರೋಮಾಂಚನಕಾರೀ ಹಾಗೂ ಹೃದಯ ಮಿಡಿಯುವ ರೀತಿಯಲ್ಲಿ ಬಳಸಿಕೊಂಡು ಈ ಸವಿಸ್ತಾರವಾದ ಕಾದಂಬರಿಯನ್ನು ರಚಿಸಿದ್ದಾರೆ ಶ್ರೀ ಕೋಚೆ.

ಈ ಸ್ವಾತಂತ್ರ್ಯ ಹೋರಾಟದ ಒಂದು ಅತಿ ಪ್ರಮುಖ ಘಟ್ಟವಾದ 'ಚಲೇ ಜಾವ್' ಚಳುವಳಿಯ 'ಮಾಡು ಇಲ್ಲವೇ ಮಡಿ' ಎಂಬ ದಿಗಂತವ್ಯಾಪೀ ಘೋಷಣೆಯ ದಿನಗಳಲ್ಲಿ ಶಾಲಾ-ಕಾಲೇಜುಗಳಲ್ಲಿ ವಿದ್ಯಾರ್ಥಿಗಳಾಗಿದ್ದು, ಈ ಚಳುವಳಿಗೆ ತಮ್ಮ ಅಲ್ಪ ಕಾಣಿಕೆಯನ್ನು ಸಲ್ಲಿಸುತ್ತಾ, ಸೆರೆಮನೆವಾಸ ಅನುಭವಿಸಿದ ಅನೇಕ ವಿದ್ಯಾರ್ಥಿಗಳಲ್ಲಿ ಶ್ರೀ ಕೋಚೆ ಜತೆಗೆ ನಾನೂ ಒಬ್ಬನಾಗಿದ್ದೆ. ಆದರೆ ಈ ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಿರುವ ಅನೇಕ ಘಟನೆಗಳು, ವಿಸ್ಮಯಕಾರಕ ವಿಷಯಗಳು, ಈ ಕಾದಂಬರಿ ಓದಿದ ನಂತರವೇ ನನಗೆ ಗೊತ್ತಾಗಿದ್ದು! ಓದುಗರಲ್ಲಿಯೂ ನನ್ನಂಥವರು ಅನೇಕರಿದ್ದಾರೆಂಬುದರಲ್ಲಿ ಸಂಶಯವೇ ಇಲ್ಲ.

ಭಾರತದ ದಾಸ್ಯ ಶೃಂಖಲೆಗಳನ್ನು ಕಿತ್ತೆಸೆಯಲು ನಡೆದ ಈ ಸುದೀರ್ಘ ಹೋರಾಟದ



ಸಮಯದಲ್ಲಿ ಜೀವಂತ ಇದ್ದ, ಈಗಲೂ ಜೀವಂತ ಇರುವ, ನೂರಾರು ಜನಸಾಮಾನ್ಯರ, ಮುಖಂಡರ, ನಿಜ ನಾಮಧೇಯಗಳನ್ನೇ ಬಳಸಿಕೊಂಡು, ಎಲ್ಲಿಯೂ ಚಾರಿತ್ರಿಕ ಸತ್ಯಕ್ಕೆ ಅಪಚಾರವಾಗದಂತೆ, ಹಲವರಿಗೆ ಅಪ್ರಿಯವೆಂದೆನಿಸ ಬಹುದಾದ ಅಂಶಗಳನ್ನೂ ಮುಚ್ಚಿಡದೆ, ಎಲ್ಲಾ ಘಟನೆಗಳನ್ನು ಈ ಕಾದಂಬರಿಯ ರೂಪದಲ್ಲಿ ಹೆಣೆದಿದ್ದಾರೆ ಶ್ರೀ ಕೋಚೆ.

ಹುತಾತ್ಮರಾದ ಭಗತ್ ಸಿಂಗ್, ಚಂದ್ರಶೇಖರ ಆಜಾದರಂಥ ಹೋರಾಟಗಾರರ ಧೈರ್ಯ ಸಾಹಸಗಳು, ಐ.ಎನ್.ಎ. ಸಂಘಟಿಸಿಕೊಂಡು ಆಂಗ್ಲ ಸರಕಾರದ ವಿರುದ್ಧ ದಂಡೆತ್ತಿ ಬಂದ ನೇತಾಜಿ ಸುಭಾಸ್ ಚಂದ್ರ ಬೋಸ್ ಅವರ ಕ್ಷಾತ್ರತೇಜಸ್ಸು, ನೇತಾಜಿ ಹೀಗೆ ಮಾಡಿದರಲ್ಲಾ ಎಂದು ಕುಪಿತರಾಗಿ, 'ಅವರನ್ನು ಖಡ್ಗದಿಂದ ಛೇದಿಸುವೆ' ಎಂದು ಹಾರಾಡಿದ ನೆಹರೂ ಅವರ ರೌದ್ರಾವತಾರ, ಬಸಕ್ಕನಂಥ ಸಾಮಾನ್ಯ ಬಸವಿಯು (ವೇಶ್ಯೆಯು) 'ವಂದೇಮಾತರಂ ಬಸಕ್ಕ'ನಾಗಿ ಪರಿವರ್ತನೆಗೊಂಡ ಅದ್ಭುತ ಪವಾಡ, ಮನೆ-ಮಠ, ಬಂಧು-ಬಾಂಧವರನ್ನು ಕಳೆದುಕೊಂಡು, ನಾನಾಬಗೆಯ ಕಷ್ಟ-ಸಂಕಟಗಳನ್ನು ಅನುಭವಿಸಿದ ಸಾಮಾನ್ಯ ಜನರ ಕರುಣಾಜನಕ ಸ್ಥಿತಿ, ರಮಣಯ್ಯನ ವ್ಯಂಗ್ಯೋಕ್ತಿಗಳ ಹಾಸ್ಯರಸ, ನೌಖಾಲಿ ಹತ್ಯಾಕಾಂಡದ ಬೀಭತ್ಸ ದೃಶ್ಯಗಳು, ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ, ಈ ಹೋರಾಟದಲ್ಲಿ ಪಾಲ್ಗೊಂಡ ಹಲವಾರು ದೇಶಗಳ (ಅಮೆರಿಕಾ, ರಷ್ಯಾ, ಜಪಾನ್) ಸರಕಾರಗಳ ಧೀರೋದಾತ್ತತೆ, ಹೀಗೆ ಹಲವಾರು 'ನವ'ರಸಗಳನ್ನೊಳಗೊಂಡ ಅದ್ಭುತ ಗದ್ಯಕಾವ್ಯವಾಗಿದೆ ಈ ಹೆಬ್ಬೊತ್ತಿಗೆ.

ಆಳವಾದ ಅಭ್ಯಾಸ, ಅನುಭವ ಹಾಗೂ ಶ್ರಮಗಳಿಂದ ರಚಿತವಾಗಿರುವ ಈ ಮೇರು ಕೃತಿಯು ಎಲ್ಲ ಕನ್ನಡಿಗರಿಂದಲೂ ಅವಶ್ಯ ಪಠನಯೋಗ್ಯ ಹಾಗೂ ಸಂಗ್ರಹ ಯೋಗ್ಯ ವಾಗಿದೆ. ಭಾರತದ ಮತ್ತಾವುದೇ ಭಾಷೆಯಲ್ಲೂ ಇಂಥ ಉದ್ಗ್ರಂಥ ಸ್ವಾತಂತ್ರ್ಯ ಹೋರಾಟದ ಬಗ್ಗೆ ಈವರೆಗೂ ಪ್ರಕಟವಾಗಿರಲಿಕ್ಕಿಲ್ಲ ಎನ್ನಬಹುದು. ಆದ್ದರಿಂದ ಇದೊಂದು ಅಪೂರ್ವ ಏಕಮೇವಾದ್ವಿತೀಯ ಗ್ರಂಥ ಎಂದರೆ ತಪ್ಪಾಗಲಾರದು. ಇಂಥ ಅಮೂಲ್ಯ, ಅದ್ಭುತ ಕೃತಿಯನ್ನು ನೀಡಿರುವ ಲೇಖಕರೂ ಮತ್ತು ಅದರ ಪ್ರಕಾಶಕರೂ ಕನ್ನಡಿಗರ ಅಪಾರ ಕೃತಜ್ಞತೆಗೆ ಪಾತ್ರರಾಗಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು.

ಆದರೆ ಪುಸ್ತಕದ ಕೊನೆಯಲ್ಲಿ ಇರುವ ನೆಹರೂ ಅವರ ಭಾಷಣ ಹಾಗೂ ಶ್ರೀ ಅರವಿಂದರ ಸಂದೇಶದಲ್ಲಿ ಹಾರೈಸಲಾಗಿರುವ ಅಜ್ಞಾನ, ದಾರಿದ್ರ್ಯ, ಅನಕ್ಷರತೆ, ಮೂಢನಂಬಿಕೆ ಇತ್ಯಾದಿಗಳ ನಿವಾರಣೆಯಾಗಲಿ, ಭವ್ಯ ಭಾರತದ ಉದಯವಾಗಲಿರುವ ಸಂಭವದ ಲಕ್ಷಣಗಳಾಗಲಿ, ಸದ್ಯಕ್ಕೆ ಎಳ್ಳಷ್ಟೂ ಇಲ್ಲವೇ ಇಲ್ಲ ಎಂಬುದು ಅತ್ಯಂತ ದಾರುಣ ಸತ್ಯವಾಗಿದೆ. ಭ್ರಷ್ಟಾತಿಭ್ರಷ್ಟರಾದ ಅನೇಕ ರಾಜಕಾರಣಿಗಳು, ನಾಯಕ ವ್ಯಕ್ತಿಗಳು ತಮ್ಮ ತಮ್ಮ ರಾಜ್ಯಗಳಲ್ಲಿ ಮೆರೆಯುತ್ತಿದ್ದಾರೆ. ಎಲ್ಲ ರಂಗಗಳಲ್ಲೂ ಭ್ರಷ್ಟಾಚಾರ, ಲಂಚಗುಳಿತನ, ಸ್ವಜನ ಪಕ್ಷಪಾತ ಇತ್ಯಾದಿ ಅನಿಷ್ಟಗಳು ತಾಂಡವವಾಡುತ್ತಲಿವೆ.

ದೇಶದ ಮೂಲೆ ಮೂಲೆಗಳಲ್ಲಿ ಸಹಸ್ರಾರು ಜನರು ತಮ್ಮ ತನು, ಮನ, ಧನಗಳನ್ನು ಅರ್ಪಿಸಿ ಸ್ವಾತಂತ್ರ್ಯ ಸಂಪಾದಿಸಿದ್ದು ಇದಕ್ಕಾಗಿಯೇ ಏನು ಎಂದು ಪರಿತಪಿಸುವಂತಾಗಿದೆ.

ಸ್ವಾತಂತ್ರ್ಯಾನಂತರದ ಭಾರತದ ಆಗು-ಹೋಗುಗಳ ಬಗ್ಗೆಯೂ ಇಂಥದೇ ಮತ್ತೊಂದು ಪರಿಪಕ್ವವಾದ ಮೇರುಕೃತಿ ಶ್ರೀ ಕೋಚೆ ಲೇಖನಿಯಿಂದ ಹೊರಹೊಮ್ಮಲಿ ಎಂದು ಹಾರೈಸುತ್ತೇನೆ.

**ಡಾ|| ಅ. ನಂಜಪ್ಪ**
೩೮/೧, ೫ನೆಯ ದೇವಾಲಯ ರಸ್ತೆ
೧೫ನೆಯ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩



## ಅಪೂರ್ವ (ಪ್ರವಾಸ ಕಥನ)

*ಕೆ. ಎಂ. ಸೀತಾರಾಮಯ್ಯ*

**ಪುಟ : 188** **ಬೆಲೆ : ರೂ. 70**

**ಸುಜಾತ ಸಾಹಿತ್ಯ,** ನಂ.11, 'ವಸಿಷ್ಠ', ಸಿದ್ಧಿವಿನಾಯಕ ಲೇ ಔಟ್, ಬನಶಂಕರಿ 3ನೇ ಘಟ್ಟ, ಬೆಂಗಳೂರು - 560 085

ಅತ್ಯಂತ ಗೌರವಾನ್ವಿತ ಅತಿಥಿಯಂತೆ ಅಮೆರಿಕಕ್ಕೆ ಭೇಟಿ ನೀಡಿದ ಲೇಖಕರು ತಮ್ಮ ಅಲ್ಲಿನ ಅಪೂರ್ವ ಅನುಭವ ಸಂಗ್ರಹಿಸಿದ ಮಾಹಿತಿಗಳನ್ನು ಉತ್ಸಾಹ ದಿಂದ ನಮಗೆ ತಿಳಿಸುತ್ತಾರೆ. ಉತ್ತಮವಾದ ಅಲ್ಲಿನ ವ್ಯವಸ್ಥೆಯನ್ನೆಲ್ಲ ಮುಕ್ತಕಂಠದಿಂದ ಶ್ಲಾಘಿಸಿ ಸ್ವದೇಶವನ್ನು ಎಲ್ಲೂ ತೆಗಳದೆ ನಾವೆಷ್ಟು ಹಿಂದಿದ್ದೇವೆಂದೂ ವಿಷಾದದಿಂದ ಲೆಕ್ಕ ಹಾಕುತ್ತಾರೆ. ವಿದೇಶವೆಷ್ಟು ಹಿತವೋ ಅದಕ್ಕಿಂತ ಹಿತವಾದ ನುಡಿ : "ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಎಂಬ ಅರ್ಥಪೂರ್ಣ ಮುಕ್ತಾಯ ಹಾಡಿದ್ದಾರೆ.

## ಮಹಾಮೌನ (ಕವಿತೆಗಳು)



*ಸಂ|| ಲಿಂಗಣ್ಣ ಗೋನಾಲ*

**ಪುಟ : 223** **ಬೆಲೆ : ರೂ. 100**

**ಶರಣು ಪ್ರಕಾಶನ,** ಮು|| ಪೋ|| ದೇವರಗೋನಾಲ ತಾ|| ಸುರಪುರ ಜಿಲ್ಲಾ|| ಗುಲಬರ್ಗಾ - 585 220

ಚಾರಿತ್ರಿಕ ವ್ಯಕ್ತಿ ಗೌತಮ ಬುದ್ಧನನ್ನು ಈಗಿರುವ ಪ್ರಚಲಿತ ಕಥೆ ಗಳ ಆಧಾರದಲ್ಲಿ ಈ ಶತಮಾನದ ಕವಿಗಳು ವಿವಿಧ ರೀತಿಯಲ್ಲಿ ಅರ್ಥೈಸಿದ್ದಾರೆ. ಚರಿತ್ರೆಯ ಸುದೀರ್ಘ ಕಾಲದಲ್ಲಿ ಧಾರ್ಮಿಕ ಚಳುವಳಿ ನಡೆದು ಬೌದ್ಧ ಧರ್ಮವನ್ನು ಹಿಮ್ಮೆಟ್ಟಿಸಲಾಗಿದೆ. ಪ್ರಬಲರಾಗುತ್ತಿದ್ದ ವೈದಿಕರಿಂದ ಬೌದ್ಧ ಧರ್ಮ ಹೆಚ್ಚು ಕಡಿಮೆ ಭಾರತದಿಂದಲೇ ಗಡೀಪಾರಾಗಿದೆ. ಬುದ್ಧನ ಬೆಳಕು ಅವನು ಹುಟ್ಟಿದ ನಾಡಿಗೆ ದಕ್ಕಿಲ್ಲ. ಇವೆಲ್ಲವನ್ನು ವಸ್ತುವನ್ನಾಗಿಸಿಕೊಂಡು ಇಲ್ಲಿನ ಕವನಗಳು ವಿಚಾರಪೂರ್ಣ ಧ್ವನಿಯೆತ್ತಿವೆ.



## ಸಿಸಿಫಸ್‌ರ ಸುತ್ತು (ಕವನಗಳು)

*ಬಸವರಾಜ ಸಾದರ*

**ಪುಟ : 65** **ಬೆಲೆ : ರೂ. 50**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103

ಎಲ್ಲ ಅರ್ಥಪೂರ್ಣ ಚಟುವಟಿಕೆಗಳು ಇಂದಿನ ಸನ್ನಿವೇಶದಲ್ಲಿ ಅರ್ಥಹೀನ ಎಂದೆನ್ನಿಸಿಕೊಳ್ಳುವ ಸಮಾಜಕ್ಕೆ ಮುಖಾಮುಖಿಯಾದ ಕವಿತೆಗಳು. ಇಲ್ಲಿ ಕವಿಯ ಭಾವನೆಗಳೇ ಬೇರೆ – ಸಮಾಜ ಜೀವನವೇ ಬೇರೆ. ಇವೆರಡರ ಸಾಮರಸ್ಯವೆಂದರೆ ಬೆಟ್ಟಕ್ಕೆ ಕಲ್ಲು ಹೊತ್ತಂತೆ ನಿರರ್ಥಕ ಅಥವಾ ಅತಿಯಾದ ಪ್ರಯಾಸದ ಕೆಲಸ. ಗ್ರೀಕ್ ಪುರಾಣದ ಸಿಸಿಫಸ್‌ನ ಕಥೆ ಇಂದಿನ ಎಲ್ಲರ ಬದುಕಿನ ಹಾಡಾಗಿದೆ. ಶ್ರಮದ ಎಲ್ಲ ಕೆಲಸಗಳಿಗೂ ಅರ್ಥವನ್ನು ಹುಡುಕುವತ್ತ ಕವಿತೆಗಳು ಸಾಗಿವೆ.

**- ಇಂದಿರಾ ಕುಮಾರಿ**

# ದಾರಿ ಯಾವುದಯ್ಯ ಮಕ್ಕಳ ಸಾಹಿತ್ಯಕೆ?

**ಡಾ|| ಎಂ. ಜಿ. ಹೆಗಡೆ**

**ಪೂ**ರ್ವ-ಪಶ್ಚಿಮ ಮುಖಾಮುಖಿಯ ಫಲಿತವಾಗಿ ಹುಟ್ಟಿದ ಮಕ್ಕಳ ಸಾಹಿತ್ಯಕ್ಕೀಗ ನೂರು ವರ್ಷ. ಇದಕ್ಕೂ ಮೊದಲು ನಮ್ಮಲ್ಲಿ ಮಕ್ಕಳ ಸಾಹಿತ್ಯ ಇರಲಿಲ್ಲವೆಂದಲ್ಲ. ಆದರೆ ಅವುಗಳ ಸ್ವರೂಪ, ಉದ್ದೇಶಗಳಿಗೂ ಇವತ್ತು ನಾವು ಯಾವುದನ್ನು ಮಕ್ಕಳ ಸಾಹಿತ್ಯವೆಂದು ಗುರುತಿಸುತ್ತೇವೆಯೋ ಅದರ ಸ್ವರೂಪ, ಉದ್ದೇಶಗಳಿಗೂ ತುಂಬ ವ್ಯತ್ಯಾಸವಿದೆ. ಮೌಖಿಕ ಪರಂಪರೆಯ ಅಸಂಖ್ಯ ಕತೆಗಳು, ಹಾಡುಗಳು ಮಕ್ಕಳನ್ನು ರಂಜಿಸಿದರೂ ಅವನ್ನು ಮಕ್ಕಳ ಸಾಹಿತ್ಯ ಎಂಬ ವಿಭಾಗದಲ್ಲಿ ಸೇರಿಸುವ ಕ್ರಮ ಇಲ್ಲ. *ಪಂಚತಂತ್ರ*ದಂತಹ ಕಥಾಗುಚ್ಛಗಳನ್ನು ಅವುಗಳ ಮೂಲರೂಪದಲ್ಲಿ 'ಮಕ್ಕಳ ಸಾಹಿತ್ಯ' ಎಂದು ಗುರುತಿಸುವ ವಾಡಿಕೆ ಇಲ್ಲ. ಮೇಲಾಗಿ *ಪಂಚತಂತ್ರ*ದಂತಹ ಕೃತಿ ಗೃಹೀತವಾಗಿಟ್ಟುಕೊಂಡಿರುವ ಮಕ್ಕಳ ಕಲ್ಪನೆ ಎಷ್ಟು ವ್ಯಾವಹಾರಿಕ ಹಾಗೂ ಅ-ಭಾವುಕವಾದದ್ದು ಎಂದರೆ ಮಕ್ಕಳೆಂದರೆ ನಾವು ಬಯಸಿದ ರೂಪ ಕೊಡಬಹುದಾದ ಮುಗ್ಧ, ವಿಧೇಯ ಹಾಗೂ ಭಾವುಕವಾದ ಸಮರೂಪದ ವರ್ಗ ಎಂತಲೋ, ತಿಳುವಳಿಕೆ ಹಾಗೂ ಕಲ್ಪನಾಸಾಮರ್ಥ್ಯ ಪರಿಮಿತವಾಗಿರುವ ಒಂದು ಅವಸ್ಥೆ ಎಂತಲೋ ಕಲ್ಪನೆ ಇಟ್ಟುಕೊಂಡಿರುವ ಆಧುನಿಕ ಮಕ್ಕಳ ಸಾಹಿತಿಗೆ ಗಾಬರಿ ಹುಟ್ಟಿಸುವಂತಹುದಾಗಿದೆ. ಅಂದರೆ, ಶ್ರೀಮಂತವಾದ ಮೌಖಿಕ ಪರಂಪರೆಯ ಕತೆ ಹಾಗೂ ಹಾಡುಗಳಿಂದಾಗಿ, *ಪಂಚತಂತ್ರ*ದಂತಹ ಮಾರ್ಗೀಯ ಕೃತಿಗಳಿಂದಾಗಿ ಹಾಗೂ ನಮ್ಮ ಗುಹೆ ದೇಗುಲಗಳ ಚಿತ್ರಕಥಾ ಮಾಲಿಕೆಗಳಿಂದಾಗಿ ಮಕ್ಕಳ ಸಾಹಿತ್ಯದ ತೊಟ್ಟಿಲು ಎನ್ನಬಹುದಾದ ದೇಶದಲ್ಲಿ ಪೂರ್ವ-ಪಶ್ಚಿಮ ಮುಖಾಮುಖಿಯ ಫಲಿತವಾಗಿ ಒಳಬಂದ ಹೊಸ ಶಿಕ್ಷಣ ನೀತಿ ಹಾಗೂ ಮಕ್ಕಳ ಪರಿಕಲ್ಪನೆಯಿಂದಾಗಿ ಹಾಗೂ ಮಕ್ಕಳಿಗೆ ಶಿಕ್ಷಣ ನೀಡುವ ಹೊಣೆಗಾರಿಕೆಯನ್ನು ನಾವು ಸಂಪೂರ್ಣವಾಗಿ ಹೊಸ ಶಿಕ್ಷಣ ಸಂಸ್ಥೆಗೆ ವಹಿಸಿಕೊಟ್ಟ ಕಾರಣದಿಂದಾಗಿ 'ಮಕ್ಕಳ ಸಾಹಿತ್ಯ' ಹೊಸದಾಗಿ ಹುಟ್ಟಬೇಕಾಯಿತು. ನಮ್ಮ ಹೊಸಕಾಲದ ಮಕ್ಕಳ ಸಾಹಿತ್ಯದ ಉಗಮ ಪಠ್ಯಾವಳಿಗಳು, ವಾಚಿಕೆಗಳು ಹಾಗೂ ಬಾಲ ಬೋಧೆಗಳಲ್ಲಿ ಕಂಡುಬರುವುದು ಮಿಶನರಿಗಳು ಶಿಕ್ಷಣದ ಕೆಲಸವನ್ನು ದೊಡ್ಡ ಪ್ರಮಾಣದಲ್ಲಿ ಕೈಗೆತ್ತಿಕೊಂಡ ದಕ್ಷಿಣ ಕನ್ನಡದಲ್ಲೇ. ಮಕ್ಕಳ ಸಾಹಿತ್ಯದ ಮೊದಲಿಗರು ಕಂಡುಬರುವುದು ಹಾಗೂ ಈ ಸಾಹಿತ್ಯದ ನಿರ್ಮಾತೃಗಳಲ್ಲಿ ಶಿಕ್ಷಕರು ಹಾಗೂ ಶಿಕ್ಷಣಾಧಿಕಾರಿಗಳೇ ಹೆಚ್ಚಾಗಿರುವುದು ಹೊಸ ಶಿಕ್ಷಣ ಕ್ರಮಕ್ಕೂ ಹೊಸ ಕಾಲದ ಮಕ್ಕಳ ಸಾಹಿತ್ಯಕ್ಕೂ ಇರುವ ನಂಟಿನ ಸೂಚಕವಾಗಿದೆ. ಈ ಸಾಹಿತ್ಯವು ಗೃಹೀತವಾಗಿಟ್ಟುಕೊಂಡಿರುವ ಮಕ್ಕಳ ಕಲ್ಪನೆ ಹಾಗೂ ಕಲಿಕಾ ಪ್ರಕ್ರಿಯೆಯ ಕಲ್ಪನೆ ಕೂಡ ವಸಾಹತುಶಾಹಿ ಪ್ರಣೀತ ಶಿಕ್ಷಣ ನೀತಿಗೆ ಋಣಿಯಾಗಿದೆ.

ಮಕ್ಕಳಿಗೆ ಭವಿಷ್ಯದಲ್ಲಿ ಉಪಯುಕ್ತವಾಗಬಹುದಾದದ್ದನ್ನಷ್ಟೇ ಕಲಿಸಬೇಕೆಂಬುದು ಈ ಶಿಕ್ಷಣ ನೀತಿಯ ಒಂದು ಮುಖ್ಯ ತತ್ವವಾಗಿದೆ. ಹೀಗಾಗಿ, ಮಕ್ಕಳಿಗೆ ಯಾವುದೆಲ್ಲ 'ಉಪಯುಕ್ತ' ಎಂದು ಮೊದಲು ನಿರ್ಧರಿಸಬೇಕಾಗುತ್ತದೆ ಹಾಗೂ ಇದನ್ನು ನಿರ್ಧರಿಸುವ ಅಧಿಕಾರವನ್ನು ಶಿಕ್ಷಣ ನೀಡುವ ಸಂಸ್ಥೆ ಅಥವಾ ಸರಕಾರವೇ ಕಾದಿರಿಸಿಕೊಂಡಿರುತ್ತದೆ. ಇಂತಹ 'ಉಪಯೋಗವಾದಿ ದೃಷ್ಟಿಕೋನ'ದ ಹಿಂದೆ ಮಕ್ಕಳು ಹಾಗೂ ಕಲಿಕಾ ಪ್ರಕ್ರಿಯೆಯ ಕುರಿತು ಕೆಲವು ಗೃಹೀತಗಳಿವೆ: ಇಂದಿನ ಮಕ್ಕಳೇ ನಾಳಿನ ನಾಗರಿಕರು; ಅವರು ಹೀಗೆಯೇ ಬೆಳೆಯಬೇಕು, ಬದುಕಬೇಕು; ಅದಕ್ಕಾಗಿ ನಿರ್ದಿಷ್ಟ ಕೌಶಲಗಳನ್ನು ನಿರ್ದಿಷ್ಟ ಕ್ರಮದಲ್ಲಿ ಕಲಿಯಬೇಕು, ಇತ್ಯಾದಿ. ಈ ದೃಷ್ಟಿಕೋನದ ಪ್ರಕಾರ ಮಕ್ಕಳೆಂದರೆ ನಾವು ಮೆತ್ತಿ, ಒತ್ತಿ, ಕೆತ್ತಿ, ತಿದ್ದಿ, ತೀಡಿ ಆಕಾರ ಕೊಡಬಹುದಾದ, ಸ್ವಂತವಾದದ್ದು – ಸ್ವಾರ್ಜಿತವಾದದ್ದು ಏನೂ ಇಲ್ಲದ, ಚರಿತ್ರೆ ಇಲ್ಲದ ಮಣ್ಣಿನ ಮುದ್ದೆ. ಮಕ್ಕಳು ಏನನ್ನು ಕಲಿಯಲು ಸಾಧ್ಯವಿದೆಯೋ ಅದನ್ನಷ್ಟೇ ಕಲಿಸಬೇಕು ಎಂಬುದು ಹೊಸ ಶಿಕ್ಷಣ ನೀತಿಯ ಇನ್ನೊಂದು ತತ್ವವಾಗಿದೆ. ಈ 'ವ್ಯಾವಹಾರಿಕ ದೃಷ್ಟಿಕೋನ'ದ ಹಿಂದೆ ಮಕ್ಕಳೆಂದರೆ ಜ್ಞಾನ, ತಿಳಿವಳಿಕೆ, ಭಾಷಾ ಸಾಮರ್ಥ್ಯ, ಕಲ್ಪನಾ ಸಾಮರ್ಥ್ಯ ಹಾಗೂ ಆಸಕ್ತಿಯ ವ್ಯಾಪ್ತಿ ಪರಿಮಿತವಾಗಿರುವ ಹಾಗೂ ಈ ಪರಿಮಿತಿಗನುಗುಣವಾಗಿ ಹಂತಹಂತವಾಗಿ ಹನಿಹನಿಯಾಗಿ ಕೊಟ್ಟದ್ದನ್ನಷ್ಟೇ ದಕ್ಕಿಸಿಕೊಳ್ಳಬಲ್ಲ ಒಂದು ಅವಸ್ಥೆ. ಹೀಗೆ ಉಪಯುಕ್ತವಾದದ್ದನ್ನು ಹಿತಮಿತವಾಗಿ ಕೊಡಬೇಕು ಎಂಬ ವಸಾಹತುಶಾಹಿ ಪ್ರಣೀತ ಹೊಸ ಶಿಕ್ಷಣ ನೀತಿ ಮಕ್ಕಳಿಂದ ಶಿಸ್ತು, ವಿಧೇಯತೆ, ವಿನಮ್ರತೆಯನ್ನು ಬಯಸಿದರೆ, ಶಿಕ್ಷಕರು ಹಾಗೂ ಪಾಲಕರಿಂದ ನಿರಂತರ ಕಣ್ಗಾವಲನ್ನು ನಿರೀಕ್ಷಿಸುತ್ತದೆ. ಮಕ್ಕಳ ಶಿಕ್ಷಣವೆಂಬ ಬೃಹತ್ ಯೋಜನೆಯ ಅಂಗಸಂಸ್ಥೆಯಾಗಿ ಹುಟ್ಟಿದ ಮಕ್ಕಳ ಸಾಹಿತ್ಯ ಒಂದೆಡೆಯಲ್ಲಿ ಮಕ್ಕಳಲ್ಲಿ ವಿನಮ್ರತೆಯನ್ನು ರೂಢಿಸುವ ಹಾಗೂ ಇನ್ನೊಂದೆಡೆಯಲ್ಲಿ 'ಸೂಕ್ತ', ಅತ್ಯುತ್ತಮ ಎಂದು ಸ್ವೀಕೃತವಾದ ಮೌಲ್ಯಗಳನ್ನು ಒಳತುಂಬುವ ಮಾಧ್ಯಮವಾಗಿ ಕೆಲಸ ಮಾಡುತ್ತದೆ. ಮಕ್ಕಳೆಂದರೆ ಚರಿತ್ರಾತೀತವಾದ, ಮುಗ್ಧ, ಸರಳ, ಭಾವುಕ ಸ್ಥಿತಿ ಎಂಬ ನೆಲೆಯಿಂದ ಹೊರಡುವ ಮಕ್ಕಳ ಸಾಹಿತ್ಯದಲ್ಲಿ ಯಾವುದೆಲ್ಲ 'ಸೂಕ್ತ' ಮೌಲ್ಯಗಳು ಎಂಬುದು ರಾಜಕೀಯ ನಿಸ್ಸಂಗಿಯಾದ ತ್ರಿಕಾಲ ಸತ್ಯವೆಂಬ ಭ್ರಮೆಯೂ, ಮಕ್ಕಳು ಸದಾ ವಿಧೇಯರಾಗಿರಬೇಕೆಂಬ, ಪ್ರಶ್ನೆಗಳನ್ನು ಕೇಳಿದರೂ 'ಸರಿಯಾದ' ಪ್ರಶ್ನೆಗಳನ್ನೇ ಕೇಳಬೇಕೆಂಬ ಮಧ್ಯಮ ವರ್ಗದ ಆತಂಕವೂ ಸೇರಿಕೊಂಡು ರಮ್ಯ ಜಗತ್ತೊಂದು ಸೃಷ್ಟಿಯಾಗುತ್ತದೆ.

**ಜೀವ**

ಈ ದೇಹ<br>
ಇಲ್ಲೇ ಅಳಿವುದು,<br>
ಜೀವ<br>
ಎಲ್ಲಿ ಉಳಿವುದು ?

ಬಂದಗದ್ದೆ ರಾಧಾಕೃಷ್ಣ<br>
ಕೆಳದಿ-೫೭೭೪೦೧

ಇಲ್ಲಿಯೇ 'ಮಕ್ಕಳ ಸಾಹಿತ್ಯ' ಎಂಬ ವರ್ಗೀಕರಣದ ಒಂದು ವೈಶಿಷ್ಟ್ಯವನ್ನು ಗಮನಿಸಬೇಕು. ಸಾಹಿತ್ಯವನ್ನು ಅದರ ತಾತ್ವಿಕ ನಿಲುವನ್ನೋ (ನವ್ಯ, ನವೋದಯ, ಬಂಡಾಯ ಇತ್ಯಾದಿ), ಕೃತಿಯ ಪ್ರಕಾರವನ್ನೋ (ಗದ್ಯ, ಪದ್ಯ, ನಾಟಕ), ಕೃತಿ ರಚನೆಯ ಕಾಲವನ್ನೋ (ಪ್ರಾಚೀನ, ಆಧುನಿಕ, ೨೦ನೇ ಶತಮಾನದ ಸಾಹಿತ್ಯ), ಕೃತಿಕಾರನನ್ನೋ (ಮಹಿಳಾ ಸಾಹಿತ್ಯ, ದಲಿತ ಸಾಹಿತ್ಯ ಇತ್ಯಾದಿ) ಲಕ್ಷ್ಯದಲ್ಲಿಟ್ಟುಕೊಂಡು ವಿಭಜಿಸಿ ಅಭ್ಯಾಸ ಮಾಡುವ ಕ್ರಮವಿದೆಯಾದರೂ, ವಾಚಕ ವರ್ಗವನ್ನು ಲಕ್ಷ್ಯದಲ್ಲಿಟ್ಟುಕೊಂಡು ಮಾಡಿದ ವರ್ಗೀಕರಣ 'ಮಕ್ಕಳ ಸಾಹಿತ್ಯ'ವನ್ನು ಬಿಟ್ಟರೆ ಸಾಹಿತ್ಯ ವಿಮರ್ಶೆಯಲ್ಲಿ ಇನ್ನೊಂದಿಲ್ಲ. ಯಾವುದೇ ಸಾಹಿತ್ಯ ಕೃತಿಯಾದರೂ ತನ್ನ ವಾಚಕರು ಯಾರು ಎಂಬ ಕುರಿತು ಕೆಲವು ಗೃಹೀತಗಳನ್ನು ಇಟ್ಟುಕೊಂಡೇ ಹೊರಟಿರುತ್ತದೆ. ಆದರೆ ಈ ಗೃಹೀತಗಳೇ ಆ ಸಾಹಿತ್ಯದ ಭಾಷೆ, ವಸ್ತು ಹಾಗೂ ನಿಲುವಿನ ಆಯ್ಕೆಯನ್ನು, ಅದರ ಒಟ್ಟೂ ಚಹರೆಯನ್ನು ನಿಯಂತ್ರಿಸುವ ಶಕ್ತಿಯಾಗಿರುವುದು ಮಕ್ಕಳ ಸಾಹಿತ್ಯದಲ್ಲಿ ಮಾತ್ರ. ಹೀಗಾಗಿ ಮಕ್ಕಳ ಸಾಹಿತ್ಯದಲ್ಲಿ ಆ ಸಾಹಿತ್ಯವು ಗೃಹೀತವಾಗಿ ಇಟ್ಟುಕೊಂಡಿರುವ ಮಕ್ಕಳ ಪರಿಕಲ್ಪನೆಯಲ್ಲಿ ಮೂಲಭೂತ ಅಥವಾ ಕ್ರಾಂತಿಕಾರಿ ಬದಲಾವಣೆ ಆಗದೆ ಹೊಸ ಪ್ರವೃತ್ತಿಗಳು ಕಾಣಿಸಿಕೊಳ್ಳುವುದು ಅಸಾಧ್ಯ. ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಪಶ್ಚಿಮದ ಸಂಪರ್ಕದಿಂದಾಗಿ ಒಳಬಂದ ಹೊಸ ಶಿಕ್ಷಣ ನೀತಿಯಿಂದ ನಮ್ಮಲ್ಲಿ ಅಂತಹುದೊಂದು ಕ್ರಾಂತಿಕಾರಿ ಬದಲಾವಣೆ ತಂಡುಬಂದಿತು; ಮಕ್ಕಳ ಪರಿಕಲ್ಪನೆ ಬದಲಾಯಿತು. ಹೀಗಾಗಿ ಮಕ್ಕಳ ಸಾಹಿತ್ಯವೂ ಹೊಸ ಸ್ವರೂಪವನ್ನು ಪಡೆಯಿತು. ಆ ನಂತರದಲ್ಲಿ (ಸ್ವಾತಂತ್ರ್ಯ ಬಂದರೂ ಸಹಾ) ನಮ್ಮ ಶಿಕ್ಷಣ ನೀತಿಯಲ್ಲಾಗಲಿ, ಮಕ್ಕಳು ಹಾಗೂ ಕಲಿಕಾ ಪ್ರಕ್ರಿಯೆಯ ಪರಿಕಲ್ಪನೆಯಲ್ಲಾಗಲಿ ಮೂಲಭೂತ ಬದಲಾವಣೆ ಆಗಿಯೇ ಇಲ್ಲ. ಹೀಗಾಗಿ ಮಕ್ಕಳ ಸಾಹಿತ್ಯದ ಮೂಲ ಸ್ವರೂಪವೂ ಬದಲಾಗಿಲ್ಲ. ಇವತ್ತಿಗೂ 'ಶೈಕ್ಷಣಿಕ' ಎನ್ನಬಹುದಾದ ಉದ್ದೇಶವೇ ಅದನ್ನು ನಿಯಂತ್ರಿಸುತ್ತದೆ. ಅದು ಈ ತಳಿಯ 'ಸ್ವ-ಭಾವ'ವೇ ಆಗಿದೆ. ಪಂಜೆ, ಪುಟ್ಟಣ್ಣ, ಕುವೆಂಪು, ರಾಜರತ್ನಂ, ಹೊಯಿಸಳ ಮೊದಲಾದ ಹಿರಿಯರ ಗ್ರಹಿಕೆಯೇ ಇಂದಿನ ಮಕ್ಕಳ ಸಾಹಿತಿಗಳದ್ದೂ ಆಗಿದೆ. ಪ್ರಾದೇಶಿಕ ನುಡಿಗಟ್ಟಿನ ಬಳಕೆಯಲ್ಲೋ, ನೀತಿಯ ತಲೆಭಾರದಲ್ಲೋ ಚಿಕ್ಕಪುಟ್ಟ ಬದಲಾವಣೆ ಆಗಾಗ್ಗೆ ಕಂಡುಬಂದಿರಬಹುದು. ಆದರೆ ಈ

(ಮುಂದಿನ ಪುಟಕ್ಕೆ)

# ಮಾತಾಡೆ ಮಾವಿನ ಮರವೆ

ಮಾತಾಡೆ ಮಾವಿನ ಮರವೆ
ಮಾತನಾಡೆ ॥
ನಿನ್ನ ಚಿಗುರು ಎಷ್ಟು ಅಂದ
ನಿನ್ನ ಹೂವು ಎಷ್ಟು ಚೆಂದ
ತಂಪನೀವ ಚಲುವೆ ಬಾರೆ
ಮಾತನಾಡೆ ॥

ಪಕ್ಷಿ ತಂಪು ತಾಣ ಸರಸ
ನೀನು ಹುಟ್ಟಿ ಎಷ್ಟು ವರುಷ
ನೀನು ಬೆಳೆದರೆಷ್ಟು ಹರುಷ
ಮಾತನಾಡೆ ॥

ಗಾಳಿ ಮಳೆಗೆ ಮೈಯನೊಡ್ಡಿ
ಹಗಲು ರಾತ್ರಿ ಎನದೆ ನೀನು
ನಿಂತೆ ಏಕೆ ಕುಳಿತುಕೊಳ್ಳೆ
ಮಾತನಾಡೆ ॥

ಕಾಯಿ ಏಕೆ ಹುಳಿಯು ನಿಂದು
ಹಣ್ಣು ಏಕೆ ಸಿಹಿಯು ನಿಂದು
ಹಣ್ಣುಗಳ ರಾಣಿ ನೀನೇ ಮುಂದು
ಮಾತನಾಡೆ ॥



ನಿನ್ನ ಹಣ್ಣು ಎಷ್ಟು ರುಚಿಯು
ಜೇನಿನಂತೆ ಸಿಹಿಯು ಸವಿಯು
ವರುಷ ಪೂರ್ಣ ಏಕೆ ಸಿಗವು
ಮಾತನಾಡೆ ॥

ಸ್ವಾರ್ಥಿ ಖಳನು ಬಳಿಗೆ ಬಂದು
ಕೊಡಲಿಯಿಂದ ಬುಡವ ಕಡಿಯೆ
ಮೌನದಿಂದ ಏಕೆ ಅಳುವೆ
ಮಾತನಾಡೆ ॥

ಸಿಟ್ಟು ಸಿಡುಕು ಇಲ್ಲವೇಕೆ ?
ಶಾಪ ಕೊಡು ಮೌನವೇಕೆ ?
ಸಿಡಿಲಿನಂತೆ ಗುಡುಗಿ ಬಾರೆ
ಮಾತನಾಡೆ ॥

**ಜಿ. ಕಲೀಂ ಬಾಷ**
ಸೋಫಿಯಾ ಸದನ
೩ನೇ ಮೇನ್, ೩ನೇ ಕ್ರಾಸ್
ವಿದ್ಯಾನಗರ, 'ಬಿ' ಬ್ಲಾಕ್
ಹರಿಹರ - ೫೭೭ ೬೦೧

*(ಹಿಂದಿನ ಪುಟದಿಂದ)*

ಬರಹಗಳ ಹಿಂದಿನ ದೃಷ್ಟಿಕೋನದಲ್ಲಿ ಮಕ್ಕಳ ಪರಿಕಲ್ಪನೆಯಲ್ಲಿ ಕಳೆದ ನೂರೈವತ್ತು ವರ್ಷಗಳಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಅಂದರೆ ಮಕ್ಕಳ ಸಾಹಿತ್ಯ ನಿಂತ ನೀರಾಗಿದೆ.

ಕನ್ನಡದ ಯಾವುದೇ ಪ್ರಾತಿನಿಧಿಕ ಮಕ್ಕಳ ಸಾಹಿತ್ಯ ಸಂಕಲನವನ್ನು ನೋಡಿದರೂ ಅದರಲ್ಲಿ ಸೇರಿರುವ ಬಹುತೇಕ ರಚನೆಗಳು ನವೋದಯ ಕಾಲದವು. 'ಪಾತರಗಿತ್ತಿ ಪಕ್ಕ'ದಂತಹ ಮಕ್ಕಳಿಗಾಗಿ ಎಂತಲೇ ಬರೆದಿರದ ರಚನೆಗಳನ್ನು ಕೈಬಿಟ್ಟರೂ ನಾವು 'ಅತ್ಯುತ್ತಮ' ಎಂದು ಹೇಳಬಹುದಾದ ಬಹುತೇಕ ಕೃತಿಗಳು ನವೋದಯದ ಹಿರಿಯರು ರಚಿಸಿದ್ದು. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ಅವರಿಗೆ 'ಮಕ್ಕಳ ಸಾಹಿತ್ಯ' ಎನ್ನುವ ಪ್ರಕಾರ, ಅದರ ಪರಿಕಲ್ಪನೆಗಳು ಹೊಸದಾಗಿ ದೊರಕಿದ್ದವು. ಅವರು ಒಳ್ಳೆಯ ಸಾಹಿತಿಗಳೂ ಆಗಿದ್ದುದರಿಂದ ಆ ಪ್ರಕಾರದ ಸಾಧ್ಯತೆಗಳನ್ನೆಲ್ಲಾ ಶೋಧಿಸಿ ಅತ್ಯುತ್ತಮ ಬರಹಗಳನ್ನು ನೀಡಿದರು. ಅವರ ನಂತರದಲ್ಲಿ ಬಂದವೆಲ್ಲ ಅವರಿಂದ ಪ್ರಭಾವಿತವಾದ, ಅವರನ್ನು ಅನುಕರಿಸಿದ ರಚನೆಗಳೇ. ನಮ್ಮ ದೈನಿಕ, ಸಾಪ್ತಾಹಿಕ, ಮಾಸಿಕ ಪತ್ರಿಕೆಗಳ ಮಕ್ಕಳ ಪುಟಗಳಲ್ಲಿ, ಮಕ್ಕಳಿಗಾಗಿಯೇ ಇರುವ ಪತ್ರಿಕೆಗಳಲ್ಲಿ, ಕಣ್ಣಾಡಿಸಿದರೆ ಈ ಕ್ಷೇತ್ರದಲ್ಲಿ ಬೆಳೆಗಿಂತ ಗೊಬ್ಬರವೇ ಹೆಚ್ಚಾಗಿರುವುದು ಗಮನಕ್ಕೆ ಬರುತ್ತದೆ. ಅಜ್ಜನ ಕೋಲಿನ ಜಾಗೆಯಲ್ಲಿ ಅಜ್ಜಿಯ ಗೆಜ್ಜೆಯನ್ನೂ ಕಾಗೆಯೊಂದು ಹಾರಿಬಂದು ಕುಳಿತಿರುವಲ್ಲಿ ಬೆಕ್ಕು ಒಂದು ಓಡಿಬಂದು ಕುಳಿತಿರುವುದನ್ನೂ ನೋಡುವಾಗ ಖೇದವೆನಿಸುತ್ತದೆ. ಸ್ವೋಪಜ್ಞವಲ್ಲದ ಇಂತಹ ರಚನೆಗಳು ಮಕ್ಕಳ ಸಾಹಿತ್ಯ ಹಾಗೂ ಹೀಗೂ ಬದುಕಿರುವಂತೆ ನೋಡಿಕೊಳ್ಳುತ್ತವೆ ಯಷ್ಟೇ. ಇವು ಉಳಿಸುವ, ಬೆಳೆಸುವ ರಚನೆಗಳಲ್ಲ.

ಹಾಗಾದರೆ ಕನ್ನಡ ಮಕ್ಕಳ ಸಾಹಿತ್ಯಕ್ಕೆ ದಾರಿ ಯಾವುದು ? ಮೊದಲಿಗೆ ಮಕ್ಕಳ ಸಾಹಿತ್ಯ ವಿಮರ್ಶೆ ಬೆಳೆಯಬೇಕು. ಈ ಸಾಹಿತ್ಯ ವಿಮರ್ಶೆಗೆ ಸಂಪ್ರದಾಯ ವಿಲ್ಲ. ಅದರ ಪರಿಭಾಷೆಯಾಗಲಿ, ಮಾನದಂಡಗಳಾಗಲಿ, ಇನ್ನೂ ದೊರಕಿಲ್ಲ. ಬೆನ್ನು ತಟ್ಟುವ ಧಾಟಿ-ಧೋರಣೆಯನ್ನು ಬಿಟ್ಟು ಅದು ಮುಂದೆ ಹೋಗಿಲ್ಲ. ಇನ್ನೊಂದು ಕೆಲಸವೆಂದರೆ, ನೂರು ವರ್ಷಗಳ ಈ ಸಾಹಿತ್ಯದಲ್ಲಿ ಮುಖ್ಯ ಪ್ರವಾಹಕ್ಕೆ ಹೊರತಾದ ಮಾದರಿಗಳನ್ನು, ಮಾರ್ಗಾಂತರಗಳನ್ನು ಗುರುತಿಸುವುದು. ಇಂತಹ ಒಂದು ಪ್ರಮುಖ ಮಾರ್ಗಾಂತರವೆಂದರೆ ವಿ.ಜಿ.ಭಟ್ಟರದು. ಭಟ್ಟರು ಕಟ್ಟಿಕೊಂಡ ಮಕ್ಕಳ ಪರಿಕಲ್ಪನೆ ಕನ್ನಡ ಮಕ್ಕಳ ಸಾಹಿತ್ಯದ ಪ್ರಧಾನ ವಾಹಿನಿಗಿಂತ ತೀರ ಭಿನ್ನವಾದದ್ದು. ಅದಕ್ಕೆ ಹೋಲಿಕೆ ಇದ್ದರೆ *ಪಂಚತಂತ್ರ*ದ ವಿಷ್ಣುಶರ್ಮನ ಶ್ರೋತೃಗಳಲ್ಲಿ ಮಾತ್ರ. ಆದರೆ ಪ್ರಭುತ್ವ ವಿರೋಧಿ ನಿಲುವಿನಿಂದಾಗಿ ಭಟ್ಟರು ವಿಷ್ಣುಶರ್ಮನಿಗಿಂತ ಭಿನ್ನರಾಗಿದ್ದಾರೆ. ಇದೇ ರೀತಿ ವೆಂಕಟೇಶಮೂರ್ತಿ ಯವರೂ ಸಹ ವಿಭಿನ್ನ ಮಾದರಿಯೊಂದನ್ನು ರೂಪಿಸುತ್ತಿದ್ದಾರೆ. ಕನ್ನಡ ಮಕ್ಕಳ ಸಾಹಿತ್ಯ ಹೊಸ ದಾರಿಯನ್ನು ತುಳಿಯುವವರೆಗೂ ವಿ.ಜಿ. ಭಟ್ಟರ ತುಂಟನ ಪ್ರಶ್ನೆ ಉಳಿದೇ ಇರುತ್ತದೆ :

ಕತ್ತಲೆ ಕೋಣೆಗೆ ಬೆಳಕನು ತಂದರೆ
ಕತ್ತಲೆಯೆಲ್ಲೋ ಓಡುವದು
ಬೆಳಕಿನ ಬಯಲಿಗೆ ಕತ್ತಲೆ ಬಂದರೆ
ಬೆಳಕಾದರು ಏನ್ ಮಾಡುವುದು ?

[redacted] ಎಂ. ಜಿ. [redacted]
ಕುಮಟಾ

# ವಿನೋದ ಗಣಿತ

**ಜುಲೈ ತಿಂಗಳ ಪ್ರಶ್ನೆಗೆ ಉತ್ತರ**

೧, ೨, ೪, ೮, ೧೬, ೩೨ ಮತ್ತು ೬೪ಗಳಿರುವ ಸಂಖ್ಯಾ ಸಮೂಹದಿಂದ, ಸಂದರ್ಭಾನುಸಾರ ಹೆಕ್ಕಿದ ಕೆಲವು ವಿಭಿನ್ನ ಸಂಖ್ಯೆಗಳನ್ನು ಪರಸ್ಪರ ಕೂಡುವುದರಿಂದ (ಒಂದು ಸಂಖ್ಯೆಯನ್ನು ಒಮ್ಮೆ ಮಾತ್ರ ಉಪಯೋಗಿಸಿ) ಸಂಖ್ಯೆ ೧ರಿಂದ ೧೦೦ರವರೆಗಿನ ಯಾವುದೇ ಸಂಖ್ಯೆಯನ್ನು ಪಡೆಯಬಹುದು.

ಉದಾ : ೧೦೦ = ೬೪ + ೩೨ + ೪
೫೦ = ೩೨ + ೧೬ + ೨

ಮೇಲಿನ ಸಂಖ್ಯಾ ಸಮೂಹದಲ್ಲಿ ಒಟ್ಟು ೭ ಸಂಖ್ಯೆಗಳಿವೆ. ೭ಕ್ಕಿಂತ ಕಡಿಮೆ ಸದಸ್ಯತ್ವವನ್ನು ಹೊಂದಿರುವ ಬೇರಾವುದೇ ಧನಪೂರ್ಣಾಂಕಗಳ ಸಮೂಹದಿಂದ ಸಮಸ್ಯೆಯ ನಿಬಂಧನೆಯ ಪಾಲನೆಯಾಗುವುದಿಲ್ಲ. ಉದಾ : ೬ ವಿವಿಧ ಸಂಖ್ಯೆಗಳಿರುವ ಸಮೂಹದಿಂದ ಕೆಲವನ್ನು ಹೆಕ್ಕಿ ಅವುಗಳನ್ನು ಕೂಡಿಸಿ ಪಡೆದುಕೊಳ್ಳ ಬಹುದಾದ ವಿಭಿನ್ನ ಸಂಖ್ಯೆಗಳೆಷ್ಟಿವೆ ? ಹೆಚ್ಚೆಂದರೆ ೬೩. ಹೀಗಾಗಿ ೧ರಿಂದ ೧೦೦ರವರೆಗಿರುವ ನೂರು ವಿಭಿನ್ನ ಸಂಖ್ಯೆಗಳೆಲ್ಲವನ್ನೂ ಈ ಸಮೂಹದಿಂದ ಪಡೆಯಲು ಸಾಧ್ಯವಿಲ್ಲ! ಹೀಗಾಗಿ ಮೊದಲು ನಾವು ನಮೂದಿಸಿದ ಸಂಖ್ಯಾ ಸಮೂಹ ಸಮಸ್ಯೆಗೆ ಉತ್ತರವಾಗಿದೆ.

**ಈ ತಿಂಗಳ ಪ್ರಶ್ನೆ**

ಕೆಳಗೆ ವಿಧಿಸಿದ ನಿಯಮಗಳನ್ನು ಪಾಲಿಸುವ ಧನಪೂರ್ಣಾಂಕಗಳ ಸಮೂಹವನ್ನು ಕಂಡುಹಿಡಿಯಿರಿ :

೧. ಸಮೂಹದಲ್ಲಿರುವ ಸಂಖ್ಯೆಗಳು ವಿಭಿನ್ನವಾಗಿರ ಬೇಕು.

೨. ಆ ಸಮೂಹದಿಂದ ಸಂದರ್ಭಾನುಸಾರ ಹೆಕ್ಕಿದ ಕೆಲವು ಸಂಖ್ಯೆಗಳನ್ನು ಉಪಯೋಗಿಸಿ ಪರಸ್ಪರ ಕೂಡುವ, ಕಳೆಯುವ ಅಥವಾ ಇವೆರಡೂ ಪ್ರಕ್ರಿಯೆಗಳ ಮಿಶ್ರ ಪ್ರಯೋಗದಿಂದ (ಹೆಕ್ಕಿದ ಪ್ರತಿ ಸಂಖ್ಯೆಯನ್ನೂ ಒಮ್ಮೆ ಮಾತ್ರ ಉಪಯೋಗಿಸಬೇಕು) ೧ರಿಂದ ೪೦ರವರೆಗಿನ ಯಾವುದೇ ಸಂಖ್ಯೆಯನ್ನು ಪಡೆಯಲು ಸಾಧ್ಯವಾಗಬೇಕು.

೩. ಆ ಸಮೂಹದ ಗಾತ್ರ (ಜುಲೈ ತಿಂಗಳ ಸಮಸ್ಯೆಯಲ್ಲಿ ಸ್ಪಷ್ಟಪಡಿಸಿದಂತೆ) ಕನಿಷ್ಠತಮವಾಗಿರಬೇಕು.

## ಕಳೆದ ತಿಂಗಳ ಪದಬಂಧಕ್ಕೆ ಸರಿಯುತ್ತರ

| | | | | | | | | |
|---|---|---|---|---|---|---|---|---|
| ವೈ | ಚಾ | ರಿ | ಕ | | ಸಂ | ದ | ರ್ಶ | ನ |
| ಮಾ | | | ರಿ | ಕಾ | ಪು | | | ವ |
| ನಿ | ಗ | ಮ | | ನ | | ಸಾ | ಗ | ರ |
| ಕ | | ನ | ವ | ನ | ಗ | ರ | | ಸ |
| | | ಮೋ | | | | ಜ | | |
| ಜ್ಯೋ | | ಹ | ನಿ | ಗ | ವ | ನ | | ಮ |
| ತಿ | ಲ | ಕ | | ರು | | ಕ | ರ್ದಿ | ಹಾ |
| ಬ | | | ಬ | ಡ | ವ | | | ಸ |
| ಸು | ಮ | ಧು | ರ | | ಶ | ರಾ | ವ | ತಿ |

# ಅಮೆರಿಕಾದಿಂದ ಒಂದು ಪತ್ರ

ಸೀಯಾರ್ಕೆ

ಉದ್ಯೋಗದಲ್ಲಿರುವವರಿಗೆ ಅನಿಶ್ಚಿತತೆ, ನಿರುದ್ಯೋಗಿಗಳಿಗೆ ಭವಿಷ್ಯದ ಚಿಂತೆ. ಇಲ್ಲಿನ ಅರ್ಥ ವ್ಯವಸ್ಥೆಯಲ್ಲಿ ಈಗ ತಲೆದೋರಿರುವ ಇಳಿತ ಜನಸಾಮಾನ್ಯರಲ್ಲಿ ತೀವ್ರವಾದ ಆತಂಕ ತಂದಿದೆ. ಇದು ಕಳೆದ ಶತಮಾನದ ಆದಿಯಲ್ಲಿ ಸಂಭವಿಸಿದ ಆರ್ಥಿಕ ಕುಸಿತದಂತೆ ಕಳವಳಕಾರಿ ಪ್ರಮಾಣದ್ದೇನಾಗಿಲ್ಲ. ಆದರೂ ಜನಜೀವನದ ಮೇಲೆ ಸಾಕಷ್ಟು ಪರಿಣಾಮ ಉಂಟುಮಾಡಿದೆ. ಎಲ್ಲ ಉದ್ಯಮಗಳೂ ಒಂದು ರೀತಿಯ ಹಿನ್ನಡೆ ಅನುಭವಿಸುತ್ತಿವೆ. ಪರಿಣಾಮವಾಗಿ ನಷ್ಟವನ್ನು ಸರಿದೂಗಿಸಲು ವೇತನಗಳಲ್ಲಿ ಕಡಿತ, ಸಾಮೂಹಿಕವಾಗಿ ಕೆಲಸಗಾರರನ್ನು ಹೊರಹಾಕುವುದು ನಡೆದಿದೆ. ಉದಾಹರಣೆಗೆ, ಅಮೆರಿಕದ ಅತಿ ದೊಡ್ಡ ಕಾರು ತಯಾರಿಕಾ ಸಂಸ್ಥೆಗಳಾದ ಜನರಲ್ ಮೋಟಾರ್ಸ್, ಫೋರ್ಡ್, ಕ್ರಿಸ್ಲರ್ ಮೊದಲಾದವು ಹೊಸ ಮಾದರಿ ಕಾರುಗಳ ತಯಾರಿಕಾ ಯೋಜನೆಯನ್ನು ಮುಂದೂಡಿವೆ. ಮೂರರಿಂದ ಐದು ವರ್ಷಗಳವರೆಗೆ ಹೊಸ ಮಾದರಿ ಕಾರುಗಳ ತಯಾರಿಕೆ ಮುಂದೆ ಹೋಗಿರುವುದರಿಂದ, ಕೆಲಸದಲ್ಲಿರುವ ಅನೇಕ ಮಂದಿ ತಮ್ಮ ಉದ್ಯೋಗಗಳನ್ನು ಕಳೆದು ಕೊಳ್ಳುವುದರ ಜೊತೆಗೆ ಹೊಸ ನೇಮಕಗಳೂ ಸ್ಥಗಿತಗೊಳ್ಳಲಿವೆ. ಇತ್ತೀಚೆಗೆ, ಅಂದರೆ ಜೂನ್ ತಿಂಗಳ ಮೊದಲ ವಾರದಲ್ಲಿ ಜನರಲ್ ಮೋಟಾರ್ಸ್ ಕಂಪೆನಿ ಒಂದೇ ದಿನದಲ್ಲಿ ಏಕಾಏಕಿ ೬೦೦ ಮಂದಿ ಕಂಟ್ರಾಕ್ಟ್ ಕೆಲಸಗಾರರನ್ನು ಕೆಲಸದಿಂದ ತೆಗೆದು ಹಾಕಿತು. ಈ ಮೊದಲು ಕೆಲ ತಿಂಗಳ ಹಿಂದೆ ಸುಮಾರು ಎರಡು ಸಾವಿರ ಮಂದಿ ಕಂಟ್ರಾಕ್ಟ್ ಕೆಲಸಗಾರರನ್ನು ಕೆಲಸದಿಂದ ಹೊರಹಾಕಿತ್ತು. ಈ ವರ್ಷಾಂತ್ಯದಲ್ಲಿ ಇನ್ನೂ ೨೦೦೦ ಮಂದಿಯನ್ನು ಈ ಸಂಸ್ಥೆಯೊಂದೇ ಕೆಲಸದಿಂದ ಹೊರಗೆ ಹಾಕಲಿದೆ. ಇದೇ ಬಗೆಯ ಪರಿಸ್ಥಿತಿ ಇತರ ಉದ್ಯಮಗಳಲ್ಲೂ ಇದೆ. ಕಂಟ್ರಾಕ್ಟ್ ಕೆಲಸಗಾರರಿಗೆ ಉದ್ಯೋಗ ಹೋದರೆ ಯಾವುದೇ ಸೌಲಭ್ಯ ಇಲ್ಲದಿರುವುದರಿಂದ ಅವರ ಸ್ಥಿತಿ ಕಷ್ಟ. ಖಾಯಂ ಉದ್ಯೋಗಿಗಳಿಗಾದರೆ ತಕ್ಕಮಟ್ಟಿಗೆ ಸೌಲಭ್ಯಗಳು ಲಭ್ಯ.

ಅನೇಕ ಉದ್ದಿಮೆಗಳಲ್ಲಿ ತೀವ್ರವಾಗಿ ವೇತನ ಕಡಿತ ಜಾರಿಗೆ ತರಲಾಗಿದೆ. ಕಂಪ್ಯೂಟರ್ ಉದ್ಯಮದಲ್ಲಿ ಇದು ಹೆಚ್ಚಾಗಿದೆ. ಏನಾದರಾಗಲಿ ಉದ್ಯೋಗ ಇದ್ದರೆ ಸಾಕು ಎಂದು ಯಾವುದೇ ಷರತ್ತುಗಳಿಗೂ ಒಪ್ಪಿಕೊಳ್ಳುವಂಥ ಸ್ಥಿತಿ ಬಂದಿದೆ. ಅನಿಶ್ಚಿತತೆಯಿಂದಾಗಿ ಅನೇಕ ಮಂದಿ ಈ ಬೇಸಿಗೆಯಲ್ಲಿ ದೂರದ ಪ್ರವಾಸಗಳಿಗೆ ಹೋಗುವ ಯೋಜನೆಯನ್ನು ಕೈಬಿಟ್ಟಿದ್ದಾರೆ. ತಮ್ಮ ಉಳಿತಾಯವನ್ನು ಒಳ್ಳೆಯ ದಿನದ ಬರುವಿಕೆಗಾಗಿ ಕಾದಿರಿಸತೊಡಗಿದ್ದಾರೆ. ಉದ್ಯಮಗಳಲ್ಲಿ ಉತ್ಪಾದನೆಯ ಇಳಿತದ ಪರಿಣಾಮ ಏನೇ ಆಗಿದ್ದರೂ ಆಂತರಿಕ ಮಾರುಕಟ್ಟೆಯ ಮೇಲೆ ಇನ್ನೂ ಹೆಚ್ಚು ಪ್ರಭಾವ ಬಿದ್ದಂತೆ ತೋರುವುದಿಲ್ಲ. ಇಲ್ಲಿನ ಜನ ಕೊಳ್ಳುಬಾಕ ಸಂಸ್ಕೃತಿಗೀಡಾಗಿದ್ದರೂ ಮಳಿಗೆಗಳಲ್ಲಿ ಸರಕು ಎಂದಿನಂತೆ ತುಂಬಿರುವುದನ್ನು ನೋಡಬಹುದು. ಅಮೆರಿಕನ್ನರಿಗೆ ಈ ಆರ್ಥಿಕ ಪರಿಸ್ಥಿತಿಯಲ್ಲಿ ನಿಭಾಯಿಸಿಕೊಂಡು ಹೋಗುವುದು ಹೆಚ್ಚು ಕಷ್ಟವಾಗದು. ಅನ್ಯದೇಶೀಯರಿಗೆ ಸಮಸ್ಯೆಗಳು ಹೆಚ್ಚು ವ್ಯಾಪಕವಾದ್ದು. ಉದ್ಯೋಗ ಉಳಿಸಿಕೊಳ್ಳುವುದು ಅವರಿಗೆ ತುಂಬಾ ಮುಖ್ಯ. ಉದ್ಯೋಗ ಹೋದರೆ ಅತಂತ್ರ. ನಿರುದ್ಯೋಗದ ಸಮಸ್ಯೆ ಒಂದು ಕಡೆಯಾದರೆ, ಅಮೆರಿಕದಲ್ಲಿದ್ದುಕೊಂಡು ಹೇಗೋ ಮುಂದುವರಿಯಲು ನೋಡುವಾಗ ಕಾಡುವುದು ರಹದಾರಿಯ ಪ್ರಶ್ನೆ. ಅನ್ಯದೇಶೀಯರಿಗೆ ಇಲ್ಲಿ ನೌಕರಿ ಮಾಡಲು ನೀಡುವ ರಹದಾರಿಗೆ ಆಧಾರ ಅವರು ಕೆಲಸ ಮಾಡುವ ಸಂಸ್ಥೆ. ನೌಕರಿ ಕಳೆದುಕೊಂಡರೆ ೬೦ ದಿನಗಳ ಒಳಗೆ ಬೇರೊಂದು ನೌಕರಿ ಪಡೆದು ಕೊಂಡು ಆ ಹೊಸ ಸಂಸ್ಥೆಯ ಆಶ್ರಯದಲ್ಲಿ ಮುಂದುವರಿಸಿಕೊಳ್ಳಬೇಕು. ಹಾಗೆ ನೌಕರಿ ದೊರೆಯದೇ ಹೋದಲ್ಲಿ ಸ್ವದೇಶಕ್ಕೆ ಮರಳಬೇಕು. ಈಗ ಉಂಟಾಗಿರುವ ಪರಿಸ್ಥಿತಿಯಿಂದಾಗಿ ರಹದಾರಿ ಮುಂದುವರಿಕೆಯ ನಿಯಮಗಳನ್ನು ಸಡಿಲಿಸಿದ್ದಾಗ್ಯೂ ಹೆಚ್ಚು ಪ್ರಯೋಜನವಾಗಿಲ್ಲ. ಭಾರತೀಯರನ್ನೂ ಒಳಗೊಂಡು ಸಹಸ್ರಾರು ಮಂದಿ ಅನ್ಯದೇಶೀಯರು ಉದ್ಯೋಗ ಕಳೆದುಕೊಂಡು ಸ್ವದೇಶಕ್ಕೆ ಮರಳಿದ್ದಾರೆ. ಅಮೆರಿಕಾಗೆ ಬರಲು ರಹದಾರಿ ಪಡೆದುಕೊಂಡು ಉದ್ಯೋಗಕ್ಕೆ ಬರುವವರ ಸಂಖ್ಯೆಯು ಸುಮಾರು ಅರ್ಧದಷ್ಟು ಕಮ್ಮಿಯಾಗಿದೆ ಎಂದು ಕಳೆದ ವರ್ಷದ ಪರಿಸ್ಥಿತಿಗೆ ಹೋಲಿಸಿ ಅಂದಾಜು ಮಾಡಲಾಗಿದೆ. ೨೦೦೧ರಲ್ಲಿ ಅಮೆರಿಕದ ಸರಕಾರ ನೌಕರಿಗಾಗಿ ಬರುವ ವಿದೇಶೀಯರಿಗೆ ನೀಡುವ ರಹದಾರಿ ಸಂಖ್ಯೆಯನ್ನು ಹೆಚ್ಚು ಕಡಿಮೆ ದ್ವಿಗುಣಗೊಳಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಸಿಲಿಕಾನ್ ವ್ಯಾಲಿ ಎಂದು ಖ್ಯಾತವಾಗಿರುವ ಕ್ಯಾಲಿಫೋರ್ನಿಯಾದಲ್ಲಿ ನಿರುದ್ಯೋಗದ ಸಮಸ್ಯೆ ಹೆಚ್ಚು ಗಂಭೀರವಾಗಿದೆ ಎನ್ನಬಹುದು. ಮಾಹಿತಿ ತಂತ್ರಜ್ಞಾನ ಕ್ಷೇತ್ರದ ನೂರಾರು ಸಣ್ಣ ಪ್ರಮಾಣದ ಕಂಪೆನಿಗಳು ಮುಚ್ಚಿದ್ದು ಅಧಿಕ ಸಂಖ್ಯೆಯಲ್ಲಿ ಜನ ಕೆಲಸ ಕಳೆದುಕೊಂಡಿದ್ದಾರೆ. ಈ ವರ್ಷದ ಪ್ರಾರಂಭದಲ್ಲೇ ಅನೇಕ ಮಂದಿ ಭಾರತೀಯ ಸಂಜಾತರು ಸ್ವದೇಶಕ್ಕೆ ಹಿಂದಿರುಗಿದ್ದಾರೆ. ಅನಿಶ್ಚಿತ ಸ್ಥಿತಿ ಇದ್ದರೂ ಆರ್ಥಿಕ ಪರಿಸ್ಥಿತಿ ಚೇತರಿಸಿಕೊಳ್ಳುವುದೆಂಬ ಭರವಸೆಯಿಂದ ಅಮೆರಿಕನ್ನರಂತೆ ಅನೇಕ ವಿದೇಶೀಯರೂ ಕಾಲ ದೂಡುತ್ತಿದ್ದಾರೆ.

ಇಲ್ಲಿನ ಬೇಸಿಗೆ ನಮ್ಮಲ್ಲಿನಂತಲ್ಲ. ಡೆಟ್ರಾಯಿಟ್‌ನಂಥ ಛಳಿ ಹೆಚ್ಚು ಕಾಲ ಇರುವ ಪ್ರದೇಶದಲ್ಲೂ ಕೂಡ ಬೇಸಿಗೆಯಲ್ಲಿ ತಾಪ ೩೨-೩೪ ಡಿಗ್ರಿ ಸೆಲ್ಸಿಯಸ್ಸಷ್ಟು ಏರುತ್ತದೆ. ಗುಡುಗು ಸಿಡಿಲಿನ ಮಳೆ ರಭಸವಾಗಿ ಸುಮಾರು ಒಂದು ಘಂಟೆ ಸುರಿದರೂ ಅಷ್ಟೇನೂ ತಂಪಾಗುವುದಿಲ್ಲ. ಮತ್ತೆ ಬಿಸಿಲೇರುತ್ತದೆ. ಇದರ ಮೇಲೆ ಸೂರ್ಯಾಸ್ತಮ ರಾತ್ರಿ ಸುಮಾರು ೯ರ ಹೊತ್ತಿಗೆ ಆಗುವುದರಿಂದ ಬಿಸಿಲಿನ ಝಳ ಇದ್ದೇ ಇರುತ್ತದೆ. ಮೂರು ನಾಲ್ಕು ತಿಂಗಳಕಾಲ ಇಲ್ಲಿ ಎಲ್ಲೆಲ್ಲೂ ಹಸಿರನ್ನು ಕಾಣಬಹುದು. ಅನಂತರ ಗಿಡದ ಎಲೆಗಳೆಲ್ಲ ಬಣ್ಣ ತಿರುಗಿ ಛಳಿಗಾಲದ ಹೊತ್ತಿಗೆ ಬರಡಾಗಿ ಹಿಮದ ಹೊದಿಕೆ ಹೊದೆಯಲು ಸಿದ್ಧವಾಗುತ್ತವೆ.

**ಆಕರ್ಷಣೆ ಕಳೆದುಕೊಂಡಿರುವ ಅಧ್ಯಾಪಕ ವೃತ್ತಿ**

ಬೇಸಿಗೆ ಪ್ರಾರಂಭವಾದರೆ ಇಲ್ಲಿ ಶಾಲಾ ವರ್ಷ ಮುಕ್ತಾಯ. ಜೂನ್ ತಿಂಗಳ ಎರಡನೇ ವಾರದ ಹೊತ್ತಿಗೆ ಶಾಲೆಗಳು ಮುಚ್ಚಿದರೆ ಸೆಪ್ಟೆಂಬರ್‌ನಲ್ಲಿ ಪುನರಾರಂಭ. ರಜೆ ಬಂತು ಎಂದರೆ ಮಕ್ಕಳಿಗೆ ಸಂತೋಷ. ಆದರೆ ದುಡಿಯುವ ತಂದೆ ತಾಯಂದಿರಿಗೆ ಇವರನ್ನು ನೋಡಿಕೊಳ್ಳುವುದು ದೊಡ್ಡ ಪ್ರಶ್ನೆ. ಸಣ್ಣ ಮಕ್ಕಳನ್ನು ನೋಡಿಕೊಳ್ಳಲು ಡೇ ಕೇರಿನಂಥ ಬಾಲವಾಡಿಗಳು ಇವೆ, ಅಲ್ಲದೆ ರಜೆಯಲ್ಲಿ ಮಕ್ಕಳಿಗಾಗಿಯೇ ರೂಪಿಸಿರುವ ಯೋಜನೆಗಳಿವೆ. ಇವೆಲ್ಲ ಅನುಕೂಲವಿರುವವರಿಗೆ ಲಭ್ಯ. ಯಾವುದೇ ಸೌಲಭ್ಯಕ್ಕೂ ಇಲ್ಲಿ ಹಣವೇ ಪ್ರಾಧಾನ್ಯ. ನಿಮ್ಮಲ್ಲಿ ಡಾಲರ್ ಇದ್ದರೆ ಎಲ್ಲಾ ಸುಗಮ.

ಶಾಲಾ ವರ್ಷ ಮುಗಿಯುತ್ತಿದ್ದಂತೆಯೇ ಅಮೆರಿಕಾದ ಶಿಕ್ಷಣವೇತ್ತರಿಗೆ ಮುಂದಿನ ವ್ಯವಸ್ಥೆಯ ಚಿಂತೆ. ಇಲ್ಲಿನ ಸರಕಾರಿ ಶಾಲೆಗಳಲ್ಲಿ ಅಧ್ಯಾಪಕರ ಕೊರತೆ ದೊಡ್ಡ ಸಮಸ್ಯೆ. ಅಧ್ಯಾಪಕ ವೃತ್ತಿ ಆಕರ್ಷಣೆ ಕಳೆದುಕೊಳ್ಳುತ್ತಿದೆ. ಭಾರತ ಮತ್ತು ಇತರ ದೇಶಗಳಿಂದ ವೈದ್ಯರು, ಇಂಜಿನಿಯರುಗಳನ್ನು ಭಾರಿ ಸಂಖ್ಯೆಯಲ್ಲಿ ಬರಮಾಡಿಕೊಂಡಿರುವ ಈ ದೇಶ ಈಗ ಅಧ್ಯಾಪಕ ವೃತ್ತಿಗೆ ಅನ್ಯದೇಶೀಯರನ್ನು ಆಕರ್ಷಿಸಲು ಹೊರಟಿದೆ. ಭಾರತದಿಂದಲೂ ಅಧ್ಯಾಪಕರನ್ನು ಆಕರ್ಷಿಸುವ ಜಾಹಿರಾತುಗಳು ಪತ್ರಿಕೆಗಳಲ್ಲಿ ಈ ವರ್ಷದ ಆರಂಭದಲ್ಲೇ ಪ್ರಕಟವಾಗಿದ್ದವು. ಇತರ ಉದ್ಯಮ ಕ್ಷೇತ್ರಗಳಲ್ಲಿ ಹೊಂದಿಕೊಳ್ಳುವಷ್ಟು ಸುಲಭವಾಗಿ ಅಧ್ಯಾಪಕ ವೃತ್ತಿಗೆ ಹೊಂದಿಕೊಳ್ಳುವುದು ಸಾಧ್ಯವಾಗದು. ಉನ್ನತ ಶಿಕ್ಷಣ ಶಾಲೆಗಳಲ್ಲಿ ತೊಂದರೆಯಾಗುವುದಿಲ್ಲ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಹೊಂದಿಕೊಳ್ಳುವುದು ನಿಜಕ್ಕೂ ಕಷ್ಟವೆ.

ಅಮೆರಿಕಾದಲ್ಲಿರುವವರಿಗೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಅಧ್ಯಾಪಕ ವೃತ್ತಿಯಲ್ಲಿ ಮುಂದುವರಿಯುವುದು ಸುಲಭವಾಗಿಲ್ಲ. ಹೊಸದಾಗಿ ನೇಮಕಗೊಳ್ಳುತ್ತಿರುವವರಲ್ಲಿ ಶೇ. ೨೦ ಕ್ಕೂ ಹೆಚ್ಚು ಮಂದಿ ಮೂರು ವರ್ಷಗಳಲ್ಲೇ ಬಿಟ್ಟು ಬೇರೆ ಕಡೆ ಕೆಲಸಕ್ಕೆ ಹೋಗುತ್ತಿದ್ದಾರೆ. ೫ ವರ್ಷ ಕಳೆದರೆ ಹೆಚ್ಚು. ಸುಮಾರು ಮೂರನೆ ಒಂದರಷ್ಟು ಅಧ್ಯಾಪಕರು ಬೇರೆ ಉದ್ಯೋಗಕ್ಕೆ ಹೋಗುತ್ತಾರೆ. ಶಿಕ್ಷಣ ತಜ್ಞರ ಪ್ರಕಾರ ಇದಕ್ಕೆ ಮುಖ್ಯ ಕಾರಣ ಕಡಿಮೆ ವೇತನ. ಇತರ ಉದ್ಯಮಗಳಿಗೆ ಹೋಲಿಸಿದಲ್ಲಿ ಅಧ್ಯಾಪಕರಿಗೆ ನೀಡುವ ವೇತನಗಳು ಆಕರ್ಷಣೀಯವಲ್ಲ. ಇನ್ನು ಇದರ ಮೇಲೆ ವಿದ್ಯಾರ್ಥಿಗಳಲ್ಲಿ ಹೆಚ್ಚುತ್ತಿರುವ ಅಶಿಸ್ತು. ಶಾಲಾ ಆವರಣದಲ್ಲಿ ಆಗಾಗ್ಗೆ ಸಂಭವಿಸುವ ಹಿಂಸಾಚಾರ, ಪೋಷಕರ ಅನಾದರಣೆ - ಇವೆಲ್ಲ ಕಾರಣಗಳಿಂದ ಈ ವೃತ್ತಿಗೆ ಬರುವವರ ಸಂಖ್ಯೆ ಕಡಿಮೆಯಾಗುತ್ತಿದೆ. ಈಗಾಗಲೇ ಸರಕಾರಿ ಶಾಲೆಗಳಲ್ಲಿ ಅಧ್ಯಾಪಕರ ಕೊರತೆ ಇದ್ದು ಮುಂದಿನ ಹತ್ತು ವರುಷಗಳಲ್ಲಿ ಈ ಕೊರತೆ ಅಗಾಧ ಪ್ರಮಾಣದಲ್ಲಿ ಹೆಚ್ಚಲಿದೆ. ಒಂದು ಅಂದಾಜಿನ ಪ್ರಕಾರ ಮುಂದಿನ ದಶಕದ ಹೊತ್ತಿಗೆ ಶಾಲೆಗಳಲ್ಲಿ ಇಪ್ಪತ್ತು ಲಕ್ಷ ಅಧ್ಯಾಪಕರ ಕೊರತೆ ಬೀಳುತ್ತದೆ.



# ಸಂವಿಧಾನದಲ್ಲಿಯೇ ಉಳಿದ ಪ್ರಾಥಮಿಕ ಶಿಕ್ಷಣ

**ಕೋ. ಚೆನ್ನಬಸಪ್ಪ**

"ನಾವು, ಭಾರತದ ಪ್ರಜೆಗಳು, ಭಾರತವನ್ನು ಸಾರ್ವಭೌಮ ಪ್ರಜಾಸತ್ತಾತ್ಮಕ ಗಣರಾಜ್ಯವನ್ನಾಗಿ ನಿರ್ಮಾಣ ಮಾಡಲು ಮತ್ತು ಸಮಸ್ತ ನಾಗರಿಕರಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ... ದೊರಕಿಸಿಕೊಡಲು ೧೯೪೯ನೆ ನವೆಂಬರ್ ೨೬ನೆಯ ದಿನ ಸಂವಿಧಾನ ರಚನಾಸಭೆಯಲ್ಲಿ ನಿರ್ಧರಿಸಿ ಈ ಸಂವಿಧಾನವನ್ನು ನಮಗಾಗಿ ನಾವೇ ಅಂಗೀಕರಿಸಿ, ಶಾಸನಮಾಡಿ, ಅರ್ಪಿಸಿಕೊಂಡಿದ್ದೇವೆ."

ಇದು ನಮ್ಮ ಸಂವಿಧಾನದ ಆದಿಮೂಲೋದ್ದೇಶದ ಪೀಠಿಕಾವಾಕ್ಯ. ಈ ಸಂವಿಧಾನವನ್ನು ಪ್ರಕಾಂಡ ಶಾಸನ ತಜ್ಞರೂ, ಜಗತ್ತಿನ ಇತಿಹಾಸವನ್ನು ಎಳೆ ಎಳೆಯಾಗಿ ಬಲ್ಲವರೂ ಆಗಿದ್ದ ಮಹಾ ಮಾನವ ಕಲ್ಯಾಣಾಸಕ್ತರು ಈ ದೇಶದ ಉದ್ಧಾರಕ್ಕಾಗಿ ರಚಿಸಿದರು. ಇದರಲ್ಲಿ ಮೂಲ ಭೂತ ಹಕ್ಕುಗಳನ್ನು ಅಳವಡಿಸಿರುವುದು ಜಗದ್ವಿಖ್ಯಾತ. ಇವು ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯನ್ನು ಅಂಗೀಕರಿಸಿದ ಎಲ್ಲ ರಾಷ್ಟ್ರಗಳೂ ತಂತಮ್ಮ ಸಂವಿಧಾನದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಅಂಗೀಕರಿಸಿವೆ. ಇದಿಷ್ಟೇ ನಮ್ಮ ಸಂವಿಧಾನದ ಹಿರಿಮೆ, ಗರಿಮೆಯಲ್ಲ; ಈ ಸಂವಿಧಾನದ ವೈಶಿಷ್ಟ್ಯ ಇರುವುದು ರಾಜ್ಯಾಡಳಿತೆಯ ನಿರ್ದೇಶಕ ತತ್ತ್ವಗಳನ್ನು ಒಳಗೊಂಡ ನಾಲ್ಕನೆ ಭಾಗದಲ್ಲಿ. ತತ್ರಾಪಿ ಆರ್ಟಿಕಲ್ ೪೫ ಈ ದೇಶದ ಪರಿಸ್ಥಿತಿಗೆ ಅತ್ಯಂತ ಮುಖ್ಯವಾದ, ಮಹತ್ವವಾದ, ಅನಿವಾರ್ಯವಾದ ಸಂವಿಧಾನವಿಧಿ. ಅದರಲ್ಲಿ ಸಂವಿಧಾನ – ಕರ್ತೃಗಳು ಸಂಸ್ಥಾಪಕ ಪಿತೃಗಳು – ಈ ರೀತಿ ರಾಜ್ಯಕ್ಕೆ ನಿರ್ದೇಶನ ಕೊಟ್ಟಿದ್ದಾರೆ.

"ಈ ಸಂವಿಧಾನವು ಜಾರಿಯಲ್ಲಿ ಬಂದ ಹತ್ತು ವರ್ಷಗಳ ಅವಧಿಯಲ್ಲಿ, ಹದಿನಾಲ್ಕು ವರ್ಷಗಳು ತುಂಬುವವರೆಗೆ ಸಮಸ್ತ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯವಾಗಿ ಶಿಕ್ಷಣ ಕೊಡತಕ್ಕದ್ದು."

ಈ ನಿರ್ದೇಶಕ ಆದೇಶದ ಪ್ರಕಾರ ೧೯೬೦ನೆ ಜನವರಿ ೨೬ರ ಒಳಗಾಗಿ ಈ ದೇಶದಲ್ಲಿ ಹದಿನಾಲ್ಕು ವರ್ಷ ತುಂಬುವವರೆಗೆ ಸಮಸ್ತ ಮಕ್ಕಳಿಗೂ ಉಚಿತ ಶಿಕ್ಷಣ ಕೊಡಬೇಕಾಗಿತ್ತು. ಅಂದರೆ ೧೯೬೧ರ ಜನಗಣತಿಯ ಹೊತ್ತಿಗೆ ಈ ದೇಶದಲ್ಲಿ ಅನಕ್ಷರಸ್ಥ ಮಕ್ಕಳೇ ಇರಬಾರದು ಎಂಬುದು ಸಂವಿಧಾನ ಸಂಸ್ಥಾಪಕ ಪಿತೃಗಳ ಆಕಾಂಕ್ಷೆಯಾಗಿತ್ತು. ಆ ಆಕಾಂಕ್ಷೆಗೆ ಸಂವಿಧಾನ ಶಾಸನದ ಮಹೋನ್ನತ ಸ್ಥಾನವನ್ನು ಕೊಟ್ಟು ರಾಜ್ಯಾಡಳಿತ ನಡೆಸುವವರಿಗೆ ಆಜ್ಞೆಯನ್ನು ವಿಧಿಸಲಾಯಿತು !

ರಾಜ್ಯಾಡಳಿತೆಯ ನಿರ್ದೇಶಕ ತತ್ತ್ವಗಳನ್ನು ಇಪ್ಪತ್ತು ಆರ್ಟಿಕಲ್‌ಗಳಲ್ಲಿ (ಆರ್ಟಿಕಲ್ ೩೬ ರಿಂದ ೫೧ರವರೆಗೆ ೩೯ಎ, ೪೩ಎ, ೪೮ಎಗಳನ್ನೊಳಗೊಂಡು) ಅಳವಡಿಸಲಾಗಿದೆ. ಆ ಇಪ್ಪತ್ತು ನಿರ್ದೇಶಕ ತತ್ತ್ವಗಳಲ್ಲಿ, ಇಂತಿಷ್ಟೇ ಕಾಲದಲ್ಲಿ ಆ ಆಜ್ಞೆಯನ್ನು ಕಾರ್ಯಗತಗೊಳಿಸಬೇಕೆಂಬ ಕಾಲಮಿತಿಯನ್ನು ೪೫ನೆಯ ಆರ್ಟಿಕಲ್ ವಿನಹ ಮತ್ತೆಲ್ಲಿಯೂ ಹಾಕಿಲ್ಲ. ಉದಾಹರಣೆಗೆ, ಆರ್ಟಿಕಲ್ ೩೯ರಲ್ಲಿ ಸ್ತ್ರೀ ಮತ್ತು ಪುರುಷರೆಲ್ಲರಿಗೂ ಸಮಾನವಾದ ಸಮರ್ಪಕ ಜೀವನೋಪಾಯ ಸಾಧನಗಳನ್ನು ಕಲ್ಪಿಸತಕ್ಕದ್ದು ಎಂಬ ನಿರ್ದೇಶಕ ತತ್ತ್ವವನ್ನೂ ಇಂತಿಷ್ಟೇ ವರ್ಷಗಳಲ್ಲಿ ರಾಜ್ಯ ಜಾರಿಯಲ್ಲಿ ತರಲೇಬೇಕೆಂದು ಸಂವಿಧಾನದಲ್ಲಿ ಕಾಲಮಿತಿಯನ್ನು ಹಾಕಿಲ್ಲ. ಆದರೆ ಸಾರ್ವತ್ರಿಕ ಉಚಿತ ಕಡ್ಡಾಯ ಶಿಕ್ಷಣ ಕೊಡುವ ವಿಚಾರದಲ್ಲಿ ಮಾತ್ರ ಹತ್ತು ವರ್ಷದ ಕಾಲಮಿತಿಯನ್ನು ಸಂವಿಧಾನದಲ್ಲಿಯೇ ವಿಧಿಸಲಾಗಿದೆ. ಅಂದರೆ ಶಿಕ್ಷಣದ ವಿಚಾರದಲ್ಲಿ ಸಂವಿಧಾನ ಪಿತೃಗಳು ಮಾನವನ ಜೀವನೋಪಾಯಕ್ಕೆ ಬೇಕಾದ ಸಾಧನಗಳನ್ನು ಒದಗಿಸುವುದಕ್ಕಿಂತಲೂ ಹೆಚ್ಚಿನ ಮಹತ್ವ ಕೊಟ್ಟರು. ಇದರ ಅರ್ಥ ಮನುಷ್ಯನಿಗೆ ಅನ್ನ ಬಟ್ಟೆ ಆರೋಗ್ಯ ಆಸರೆ ಒದಗಿಸುವುದರಲ್ಲಿ ವಿಳಂಬವಾದರೂ ಪರವಾಗಿಲ್ಲ, ಅಕ್ಷರ ವಿದ್ಯೆ ಕೊಡುವ ವಿಚಾರದಲ್ಲಿ ವಿಳಂಬ ಆಗಲೇಕೂಡದು. ಅನ್ನಕ್ಕಿಂತಲೂ ಅತ್ಯವಸರ, ಅನಿವಾರ್ಯ ಅಕ್ಷರವಿದ್ಯೆ ಎಂದಂತಾಯ್ತು. ಅಕ್ಷರವಿದ್ಯೆ ಕಲಿತರೆ ಅವನು ಹೊಟ್ಟೆಯ ದಾರಿ ನೋಡಿಕೊಳ್ಳುತ್ತಾನೆ ! ಆರೋಗ್ಯವನ್ನು ಕಾಪಾಡಿಕೊಳ್ಳುತ್ತಾನೆ. ಮನೆ ಕಟ್ಟಿಕೊಳ್ಳುತ್ತಾನೆ. ವಿದ್ಯೆ ಎಲ್ಲವನ್ನೂ ಕೊಡುತ್ತದೆ. ಅದನ್ನು ಕೊಟ್ಟರೆ ಮನುಷ್ಯರಿಗೆ ಸರ್ವಸಂಪತ್ತನ್ನು ಕೊಟ್ಟಂತೆ !

ನಮ್ಮ ಸಂವಿಧಾನದ ೪೫ನೆ ಆರ್ಟಿಕಲ್‌ನ ಅರ್ಥ ವ್ಯಾಪ್ತಿಯನ್ನು ವ್ಯಾಖ್ಯಾನಿಸುವ ಪ್ರಸಂಗ ನಮ್ಮ ಸರ್ವೋಚ್ಚ ನ್ಯಾಯಾಲಯದ ಮುಂದೆ ಉನ್ನಿಕೃಷ್ಣನ್ ಕೇಸಿನಲ್ಲಿ (AIR ೧೯೯೩ S.C. ೨೧೭೮) ಬಂದಿದ್ದಾಗ ಪ್ರಕಾಂಡ ಪಂಡಿತರೂ, ಸ್ವತಃ ಕವಿಗಳೂ ಆಗಿದ್ದ ನ್ಯಾಯಮೂರ್ತಿ ಎಸ್. ಮೋಹನ್ ಹೀಗೆ ಅಭಿಪ್ರಾಯಪಟ್ಟಿದ್ದಾರೆ:

'ವಿಜಯಗಳನ್ನು ಪಡೆಯುವುದು, ಶಾಂತಿಯನ್ನು ನೆಲೆಸುವುದು, ಅಭಿವೃದ್ಧಿಯನ್ನು ಸಾಧಿಸುವುದು, ನಾಗರಿಕತೆ ನಿರ್ಮಾಣವಾಗುವುದು, ಚರಿತ್ರೆ ರಚನೆಯಾಗುವುದು ಯುದ್ಧಭೂಮಿಗಳಲ್ಲಿ ಅಲ್ಲ - ಅಲ್ಲಿ ದೇಶ ಪ್ರೇಮದ ನೆವದಲ್ಲಿ ಭೀಕರ ಕಗ್ಗೊಲೆಗಳಾಗುತ್ತವೆ. ವಿಧಾನ ಮಂಡಲಗಳಲ್ಲೂ ಅಲ್ಲ - ಅಲ್ಲಿ ವಿದ್ವತ್ಪೂರ್ಣ ಚರ್ಚೆಗಳ ಹೆಸರಿನಲ್ಲಿ ಸ್ಫೂರ್ತಿದಾಯಕ ಭಾಷಣದ ಬಲೆ ನೇಯುತ್ತಾರೆ. ಕಾರ್ಖಾನೆಗಳಲ್ಲೂ ಅಲ್ಲ - ಅಲ್ಲಿ ಬಾಳಿಗೆ ಉರುಳಿಕ್ಕುವ ನವ ಆಯುಧಗಳನ್ನು ತಯಾರಿಸುತ್ತಾರೆ. ಆದರೆ ಸಂಸ್ಕೃತಿಯನ್ನು ಬೆಳೆಸುವ ವಿದ್ಯಾಸಂಸ್ಥೆಗಳೆಂಬ ಮಡಿಗಳಲ್ಲಿ - ಭವಿಷ್ಯವನ್ನು ರೂಪಿಸುವ ಮಕ್ಕಳ ಕೈಯಲ್ಲಿದೆ' (ಶಾಂತಿ, ನಾಗರಿಕತೆ, ಚರಿತ್ರೆಯ ರಚನೆ, ಪು. ೨೧೮).

ಶಿಕ್ಷಣದ ಈ ಅದ್ವಿತೀಯ ಮಹತ್ವ, ಆವಶ್ಯಕತೆಯನ್ನು ಸಂವಿಧಾನ ಅಂಗೀಕರಿಸಿದೆ. ಅದನ್ನು ಆಜ್ಞಾರೂಪದಲ್ಲಿ ಆಳುವವರಿಗೆ ನಿರ್ದೇಶನ ವಿಧಿಸಿದೆ. ಹತ್ತು ವರ್ಷಗಳಲ್ಲಿಯೆ ಮಾಡಲೇಬೇಕೆಂದ ಈ ನಿರ್ದೇಶನದ ಗತಿ ಏನಾಗಿದೆ ? ಐದು ಹತ್ತುಗಳು – ಐವತ್ತು ವರ್ಷಗಳು ಉರುಳಿದರೂ ಇಂದಿಗೂ – ಈ ದೇಶದಲ್ಲಿ ಸೇಕಡಾ ೪೮ ರಷ್ಟು ಜನ ಅನಕ್ಷರಸ್ಥರು !! ಅಕ್ಷರಸ್ಥರೆಂದು ಪರಿಗಣಿಸಲ್ಪಟ್ಟ ಸೇ. ೫೨ ಜನರಲ್ಲಿ, ವಯಸ್ಕರ ಶಿಕ್ಷಣ ಶಾಲೆಗಳಲ್ಲಿ, ರಾತ್ರಿ ಶಾಲೆಗಳಲ್ಲಿ ತಮ್ಮ ಹೆಸರು - ಬಸವ, ರಾಮ, ಕಮಲ ಎಂದು ತಿದ್ದಿ ತಿದ್ದಿ ಬರೆಯುವ ಎರಡಕ್ಷರ ಕಲಿತವರೂ ಸೇರಿದ್ದಾರೆ ! ಈ ದೇಶದ ಒಟ್ಟು ಶಾಲಾ ವಯಸ್ಸಿನ (ಹದಿನಾಲ್ಕು ವರ್ಷ ಒಳಗಿನ) ಮಕ್ಕಳಲ್ಲಿ ಅರ್ಧಕ್ಕರ್ಧ ಇಂದಿಗೂ (ಡಿಶೆಂಬರ್ ೨೦೦೦) ಶಾಲೆಯ ಮುಖವನ್ನೇ ಕಾಣರು ! ಹತ್ತು ಕೋಟಿ ಮಕ್ಕಳು ಬಾಲ ಕಾರ್ಮಿಕರು !! ಇತ್ತೀಚೆಗೆ - ಡಿಶೆಂಬರ್ ಮೊದಲನೆ ವಾರದಲ್ಲಿ - ಕರ್ನಾಟಕದ ಒಂದೇ ಜಿಲ್ಲೆಯಲ್ಲಿ ಒಂದೇ ದಿನ ಪತ್ತೆ ಹಚ್ಚಿದ ೨೩ ಮಕ್ಕಳನ್ನು ಜೀತವಿಮುಕ್ತ ಮಾಡಿದ್ದಾರೆಂದು ಸಚಿತ್ರ ಸುದ್ದಿ ಪ್ರಕಟಿಸಿದ್ದರು.

ಅನಕ್ಷರತೆಯ ಈ ಮಹಾಮಾರಿ, ಮಹಾಪಿಡುಗು, ಸ್ವತಂತ್ರ ಭಾರತದಲ್ಲಿ ಯಾವ ರಾಕ್ಷಸ ಪ್ರಮಾಣದಲ್ಲಿ ಬೆಳೆದಿದೆ ಎಂಬುದನ್ನು ಅಮೆರಿಕೆಯ ಶಿಕ್ಷಣ ತಜ್ಞ, ಸಂಖ್ಯಾವಿಜ್ಞಾನಿ ಮೈರಾನ್ ವೈನೆರ್ The Child and the State in India (ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್ ೧೯೯೧) ಎಂಬ ಪುಸ್ತಕದಲ್ಲಿ ಬಹುವಿವರವಾಗಿ ವರ್ಣಿಸಿದ್ದಾನೆ. ೧೯೯೫ರಲ್ಲಿ ಅದೇ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನೊಬೆಲ್ ಬಹುಮಾನ ವಿಜೇತ, ಭಾರತ ಸರ್ಕಾರ 'ಭಾರತರತ್ನ' ಎಂಬ ಬಿರುದನ್ನು ಕೊಟ್ಟು ಗೌರವಿಸಿದ ಅಮರ್ತ್ಯ ಸೇನ್ ಮತ್ತು ಜೀನ್ ಡ್ರೇಜಿ ಬರೆದ 'India, Economic Development and Social Opportunity,' 'Poverty and Famine', 'Hunger and Public Action' ಎಂಬ ಮೂರು ಗ್ರಂಥಗಳನ್ನು ಪ್ರಕಟಿಸಿದೆ. ಆ ಗ್ರಂಥಗಳ ಮುಖ್ಯ ಸಾರಾಂಶ - ಭಾರತದ ಬಡತನ, ಕ್ಷಾಮ, ನಿರುದ್ಯೋಗ, ಅನಾರೋಗ್ಯ... ಇತ್ಯಾದಿ ಸಕಲ ವ್ಯಾಧಿಗಳಿಗೂ ಅನಕ್ಷರತೆಯೆ ಮೂಲ ಎಂಬುದನ್ನು ಭಾರತ ಸರ್ಕಾರ, ವಿಶ್ವಸಂಸ್ಥೆ, ಪ್ರಪಂಚದ ನಾನಾ ದೇಶಗಳ ಸರ್ಕಾರಗಳು ಪ್ರಕಟಿಸಿದ ಅಧಿಕೃತ - ಅಂಕೆಸಂಖ್ಯೆಗಳಿಂದ ರುಜುವಾತುಪಡಿಸಿದ್ದಾರೆ. ಅನಕ್ಷರತೆಯ ಈ ಭೀಕರ ಪರಿಸ್ಥಿತಿಯನ್ನು ಪ್ರತ್ಯಕ್ಷವಾಗಿ ಭಾರತದ ಹಳ್ಳಿ ಹಳ್ಳಿಯಲ್ಲಿ, ಭಿಕ್ಷೆ ಬೇಡುವ ಮಕ್ಕಳ ಮೆರವಣಿಗೆ, ಬಾಲಕಾರ್ಮಿಕರ ಸೈನ್ಯವನ್ನು ಕಣ್ಣಾರೆ ಕಾಣಬಹುದು. ಕಣ್ಣಿಗೆ ಕಾಣುವ ಈ ಅಕ್ಷರ ದಾರಿದ್ರ್ಯವನ್ನು, ಅದರ ಬೀಜಾಸುರ ಸಂತಾನವಾದ ಅನ್ನ ದಾರಿದ್ರ್ಯ, ಅನಾರೋಗ್ಯ, ಜನಸಂಖ್ಯಾ ಸ್ಫೋಟ, ಕೊಲೆ, ಸುಲಿಗೆ, ಮದ್ಯಪಾನ, ಜೂಜು ಮುಂತಾದ ವಿಪತ್ ಪರಂಪರೆಗಳನ್ನು ತಿಳಿಯಲು ವಿದ್ವಾಂಸರು ಬರೆದ ಬೃಹದ್ಗ್ರಂಥಗಳನ್ನೇ ಓದಬೇಕಾಗಿಲ್ಲ! ಆದರೂ ಓದಿ ತಿಳಿಯಬೇಕೆಂಬ ಜನ ಅವುಗಳನ್ನು ಓದಬಹುದು.

ಏಕೆ ಹೀಗಾಯಿತು ? ನಮ್ಮ ದೇಶ ಸ್ವತಂತ್ರವಾದ ಮೇಲೆ, ಪ್ರಪಂಚದ ನಾನಾ ದೇಶಗಳು ವಸಾಹತುಶಾಹಿಯಿಂದ ಬಿಡುಗಡೆ ಹೊಂದಿದ ಮೇಲೆ, ಚೈನಾದಲ್ಲಿ ಆದಂತೆ ತಮ್ಮದೇ ಹೊಸ ರಾಜ್ಯ ಪದ್ಧತಿಯನ್ನು ಸ್ಥಾಪಿಸಿದ ದೇಶಗಳಲ್ಲಿ ಇದೇ ಕಾಲಾವಧಿಯಲ್ಲಿ ಶಿಕ್ಷಣ, ಸಾಕ್ಷರತೆ - ನಾಗಾಲೋಟದಿಂದ ಬೆಳೆಯಿತು. ಈ ಸಾಕ್ಷರತಾ ಅಭಿವೃದ್ಧಿಯನ್ನು ಮೈರಾನ್ ವೈನೆರ್, ಅಮರ್ತ್ಯ ಸೇನ್ ಎತ್ತಿ ತೋರಿಸಿದ್ದಾರೆ. ೧೯೮೦ರಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಓದುತ್ತಿದ್ದ ಏಷ್ಯಾ ಮತ್ತು ಆಫ್ರಿಕಾ ಖಂಡದ ಶಾಲಾ ಮಕ್ಕಳ ಸಂಖ್ಯೆಯನ್ನು ಹೋಲಿಸಿ ನೋಡಿದರೆ, ಭಾರತ ಎಷ್ಟು ಹೀನಾಯ ಸ್ಥಿತಿಯಲ್ಲಿದೆ ಎಂಬುದು ಕಾಣುತ್ತದೆ. ಇಂಡಿಯಾದಲ್ಲಿ ಸೇ. ೩೮, ಅದೇ ಕಾಲಾವಧಿಯಲ್ಲಿ ಶ್ರೀಲಂಕಾದಲ್ಲಿ, ಬಾಂಗ್ಲಾದೇಶದಲ್ಲಿ ಸೇ. ೬೦ !! ಚೈನಾದಲ್ಲಿ ಸೇ. ೭೦. ಮಲೇಷಿಯಾ ೯೭.೨% ಅತ್ತ ಆಫ್ರಿಕಾ ಖಂಡದ ಆಲ್ಜೀರಿಯಾದಲ್ಲಿ ಸೇ. ೭೬.೫, ಈಜಿಪ್ಟ್ ೬೪.೩%, ಕೀನ್ಯಾ ೬೮.೫%, ಮೊರೊಕ್ಕೊ ೭೯.೯%, ಜಾಂಬಿಯಾ ೮೪.೮% (ಮೈರಾನ್ ಗ್ರಂಥ ಪು. ೧೫೫ ನೋಡಿ). ಅಷ್ಟೇ ಅ

ಖಂಡದ ದೇಶಗಳು ೧೯೬೩ರಿಂದ ಈಚೆಗೆ ವಸಾಹಾತುಶಾಹಿಯಿಂದ ಮುಕ್ತವಾಗಿ ಸ್ವತಂತ್ರವಾದವು. ಈ ದೇಶಗಳು ಕೇವಲ ೩೫-೪೦ ವರ್ಷಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಾಧಿಸಿದ ಪ್ರಗತಿಯನ್ನು ವೇದೋಪನಿಷತ್ತು, ಭಗವದ್ಗೀತೆ, ರಾಮಾಯಣ, ಮಹಾಭಾರತ, ದಶಾವತಾರದ ಈ ಪುಣ್ಯಭೂಮಿಯಲ್ಲಿ, ಅವಿಮುಕ್ತ ಕ್ಷೇತ್ರವಾದ ಭಾರತದಲ್ಲಿ, ಸಾಧಿಸಿಲ್ಲದಿರುವ ಈ ಕರ್ತವ್ಯ ಲೋಪಕ್ಕೆ, ಮಹಾ ಪಾತಕ ಕೃತ್ಯಕ್ಕೆ ಯಾರು ಹೊಣೆ ? ಅವರಿಗೇನು ಶಿಕ್ಷೆ ? ೧೯೮೩ರಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಕೇಂದ್ರ ಸರ್ಕಾರದ ಶಿಕ್ಷಣ ಇಲಾಖೆಯೇ ಯಾವ ನಾಚಿಕೆ, ಹೇಸಿಕೆ, ಅಳುಕು ಇಲ್ಲದೆ ಕೊಟ್ಟ ಅಂಕೆ ಸಂಖ್ಯೆಗಳನ್ನು ಉನ್ನಿಕೃಷ್ಣನ್ ಕೇಸಿನ ತೀರ್ಪಿನಲ್ಲಿ ನ್ಯಾಯಾಲಯ ಇದ್ದಕ್ಕಿದ್ದಂತೆ ಅಳವಡಿಸಿದೆ. ಬೇಕಾದವರು ಆ ವಿವರಗಳನ್ನು ಓದಿ ಹೊಟ್ಟೆ ಉರಿಸಿಕೊಳ್ಳಬಹುದು.

ಶಿಕ್ಷಣ ಕ್ಷೇತ್ರದ ಈ ದುಃಸ್ಥಿತಿಗೆ ಏನು ಕಾರಣ ? ಈ ಪ್ರಶ್ನೆ ಎದುರಾದಾಗ ಆಳುವವರು ಕೊಡುವ ಒಂದು ಕುಂಟು ನೆವ - ಜನಸಂಖ್ಯಾ ಸ್ಫೋಟ. ಆದರೆ ಈ ಜನಸಂಖ್ಯಾ ಸ್ಫೋಟ ಚೀನಾದಲ್ಲೂ ಆಯಿತು. ೧೧೬ ಕೋಟಿ ಜನರಿರುವ ಆ ದೇಶದಲ್ಲಿ ೧೯೯೫ರಲ್ಲಿ ಸೇಕಡಾ ೭೦ ರಷ್ಟು ಸಾಕ್ಷರಸ್ಥರಾಗಿದ್ದಾರೆ. ೧೯೪೮ರಲ್ಲಿ ಸಾಕ್ಷರಸ್ಥರ ಸಂಖ್ಯೆ ಸೇ. ೩೮ ಇತ್ತು ! ಈಗ ಅದರ ಎರಡರಷ್ಟಾಗಿದೆ. ಕ್ಯೂಬಾದಲ್ಲಿ ೧೯೬೦ರಲ್ಲಿ ಕ್ರಾಂತಿಗಿಂತ ಮೊದಲು ಸಾಕ್ಷರಸ್ಥರ ಸಂಖ್ಯೆ ಸೇಕಡಾ ೨೩.೬. ಈಗ ಸಾಕ್ಷರಸ್ಥರ ಸರಾಸರಿ ಸಂಖ್ಯೆ ಸೇ. ೯೮೨. ಇದೇನಿದು ಈ ಪವಾಡ ? ಈ ಸಮಸ್ಯೆಯನ್ನು ಕುರಿತು ನಾನು ಇತ್ತೀಚೆಗೆ ಫ್ಲಾರಿಡಾ ರಾಜ್ಯದಲ್ಲಿ ಒಬ್ಬ ಆತ್ಮೀಯರ ಮನೆಯಲ್ಲಿ ಸೇರಿದ್ದ ಭಾರತೀಯ ಮತ್ತು ಅಮೆರಿಕನ್ ಶಿಕ್ಷಣವೇತ್ತರೊಡನೆ ಮಾತನಾಡುತ್ತಿದ್ದೆ. ಆಗ ನನ್ನ ಸ್ನೇಹಿತರು 'ಚೀನಾ ಮತ್ತು ಕ್ಯೂಬಾ ಸರ್ವಾಧಿಕಾರೀ ರಾಷ್ಟ್ರಗಳು. ಅಲ್ಲಿ ಅದೆಲ್ಲ ಸಾಧ್ಯ. ಭಾರತ ಪ್ರಜಾಸತ್ತೆ,' ಎಂದರು. 'ಹಾಗಾದರೆ ಪ್ರಜಾಸತ್ತೆಯಂತೆಯೆ ಇರುವ ಶ್ರೀಲಂಕಾದಲ್ಲಿ, ಮಲೇಷಿಯಾ,... ಮುಂತಾದ ಏಷ್ಯಾ ಖಂಡದ ದೇಶಗಳಲ್ಲಿ, ಕೇರಳದಲ್ಲಿ, ಸಾಕ್ಷರತೆ ಅಧಿಕವಾಗಿದೆಯಲ್ಲ ?' ಎಂದೆ. 'ಅವು ಸಣ್ಣ ದೇಶಗಳು. ಸಾಧ್ಯವಾಗಬಹುದು,' ಎಂದರು. ನಾನು ತಲೆಕೆಟ್ಟು ಕೇಳಿದೆ : 'ಸಾಕ್ಷರತೆಯುಳ್ಳ ಸರ್ವಾಧಿಕಾರ ಇರಲೋ ? ಅನಕ್ಷರತೆಯ ಪ್ರಜಾಸತ್ತೆ ಇರಲೋ ?' ಅದಕ್ಕೆ ನನ್ನ ಸ್ನೇಹಿತರು ಉತ್ತರ ಕೊಡಲಾರದೆ ಹೋದರು.

ಇಲ್ಲಿ ಗಮನಿಸಬೇಕಾದದ್ದು - ಪ್ರಜಾಸತ್ತೆಯಿಂದಲೇ - ಇಂಗ್ಲೆಂಡ್, ಅಮೆರಿಕಾ, ಫ್ರಾನ್ಸ್, ಜರ್ಮನಿ ಮತ್ತು ಭಾರತದಲ್ಲಿನ ಕೇರಳದಲ್ಲಿರುವಂತೆ ಸಾಕ್ಷರತೆಯನ್ನು ಸಾಧಿಸಬಹುದು. ಅದಕ್ಕೆ ಆಳುವವರಲ್ಲಿ ಕಡುನಿಷ್ಠೆ ಇರಬೇಕು. ಅಧಿಕಾರ ವಹಿಸಿಕೊಂಡ ದಿನ ಯಾವ ಸಂವಿಧಾನದ ಹೆಸರಿನಲ್ಲಿ ಪ್ರಮಾಣ ಮಾಡುತ್ತಾರೋ, ಆ ಸಂವಿಧಾನದ ನಿರ್ದೇಶನವನ್ನು ಕಾರ್ಯಗತಗೊಳಿಸುವ ಛಲ ಆಳುವವರಲ್ಲಿ ಬೇಕು. ಅಂಥ ಕಡುನಿಷ್ಠೆ, ಛಲ ನಮ್ಮ ಆಳುವವರಿಗೆ, ಆಳಿಸಿಕೊಳ್ಳುವ ಜನರಿಗೆ ಇದೆಯೆ ? ಉನ್ನಿ ಕೃಷ್ಣನ್ ಕೇಸಿನಲ್ಲಿ ಸಲ್ಲಿಸಿದ ಪ್ರಮಾಣ ಪತ್ರದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶಿಕ್ಷಣಕ್ಕಾಗಿ ತೆಗೆದಿಟ್ಟು, ಖರ್ಚು ಮಾಡಿದ ಹಣದ ಅಂಕೆ ಸಂಖ್ಯೆಗಳನ್ನು ಗಮನಿಸಲಾಗಿದೆ. ಶಿಕ್ಷಣಕ್ಕಾಗಿ ತೆಗೆದಿರಿಸಿದ ಸೇಕಡಾ ಮೊತ್ತ, ಇತರ ಬಾಬ್ತುಗಳಿಗಿಂತ ಬಹಳ ಕಡಿಮೆ. ಆದರೆ ಮೈರಾನ್ ವೈನೆರ್ ಕೊಟ್ಟಿರುವ ಅಂಖೆ ಸಂಖ್ಯೆಗಳ ಪ್ರಕಾರ ಆಫ್ರಿಕಾದ ರಾಜ್ಯಗಳಲ್ಲಿ ಶಿಕ್ಷಣಕ್ಕಾಗಿ ಒಟ್ಟು ಆಯವ್ಯಯದ ಸೇ. ೬೦ಕ್ಕಿಂತ ಹೆಚ್ಚು ಮೊತ್ತವನ್ನು ವೆಚ್ಚ ಮಾಡಲಾಗುತ್ತಿದೆ !! ನೈಜೀರಿಯಾದಲ್ಲಿ ಸೇ. ೭೦ಕ್ಕೂ ಹೆಚ್ಚು ಖರ್ಚಾಗಿದೆಯಂತೆ.

ಅಲ್ಲದೆ, ಈ ಆರ್ಥಿಕ ಸಂಪನ್ಮೂಲದ ಕೊರತೆಯೆ ಪ್ರಾಥಮಿಕ ಶಿಕ್ಷಣದ ದುಃಸ್ಥಿತಿಗೆ ಕಾರಣವಲ್ಲ ಎಂಬುದಕ್ಕೆ ನಮ್ಮ ರಾಜ್ಯದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ನಡೆದಿರುವ ಭ್ರಷ್ಟಾಚಾರವೇ ಪ್ರತ್ಯಕ್ಷ ಪ್ರಮಾಣ. ಪ್ರಾಥಮಿಕ ಶಿಕ್ಷಣದ ಅಭಿವೃದ್ಧಿಗಾಗಿ ಕರ್ನಾಟಕ ರಾಜ್ಯ ಸರ್ಕಾರ ಹೆಚ್ಚು ಜನ ಉಪಾಧ್ಯಾಯರನ್ನು ನೇಮಿಸುವ ನಿರ್ಣಯ ಕೈಕೊಂಡಿತು. ಹೆಚ್ಚು ಶಾಲೆಗಳಿಗೆ ಮಾನ್ಯತೆ ಕೊಡಲು ನಿರ್ಧರಿಸಿತು. ಸರ್ಕಾರದ ಈ ನಿರ್ಧಾರದ ಸದುಪಯೋಗ ಪಡೆಯಲು ನೂರಾರು ಶಾಲೆಗಳು ನಾಯಿಕೊಡೆಗಳಂತೆ, ಅಣಬೆಗಳಂತೆ ರಾತ್ರೋ ರಾತ್ರಿ ತಲೆಯೆತ್ತಿದವು. ಹಿಂದಿನಿಂದ ತನಿಖೆ ನಡೆಸಿದಾಗ ಬಿಜಾಪುರ ಜಿಲ್ಲೆ ಒಂದರಲ್ಲೇ ಅಸ್ತಿತ್ವದಲ್ಲೇ ಇಲ್ಲದ ನೂರಾರು ಶಾಲೆಗಳಲ್ಲಿ ಒಬ್ಬ ವಿದ್ಯಾರ್ಥಿಗೂ ಒಂದಕ್ಷರವನ್ನೂ ಕಲಿಸದ ಸಾವಿರಾರು 'ಗುರು'ಗಳು ಕೋಟ್ಯಾಂತರ ರೂಪಾಯಿಗಳ ಸಂಬಳ 'ಗುಳುಂ' ಮಾಡಿದರು ! ಇಲ್ಲದಿರುವ ಶಾಲೆಗಳ ಮುಖ್ಯ ಗುರುಗಳು ಉಪಾಧ್ಯಾಯರ ಸಂಬಳದ ಬಿಲ್ ತಯಾರು ಮಾಡಿಯೇ ಮಾಡಿ ಕಳಿಸಿದರು ! ಡಿಡಿಪಿಐ ಬಿಲ್ ಮಂಜೂರು ಮಾಡಿಯೇ ಮಾಡಿದರು ! ಖಜಾನೆಯಿಂದ ಕೋಟಿ ಕೋಟಿ ಗುರುಗಳ ಗಟಾರದ ಗಂಟಲಿಗೆ ಹರಿದೇ ಹರಿಯಿತು !! ಈ ಭ್ರಷ್ಟಾಚಾರ ಬಯಲಿಗೆ ಬಿದ್ದಾಗ ಯಾವ ಕ್ರಮ



*ನಾಳಿನ ನಾಗರಿಕರನ್ನು ರೂಪಿಸುವ ಶಾಲೆಗಳು !!*

ಕೈಕೊಳ್ಳಲಾಗಿಲ್ಲ !! ಶಿಕ್ಷಣದ ಹೆಸರಿನಲ್ಲಿ ಸರ್ಕಾರಿ ಖಜಾನೆಯನ್ನು ಲೂಟಿ ಮಾಡುವ ಒಂದು ನಿದರ್ಶನ ಇದು ! ಖಜಾನೆಯಿಂದ ಲೂಟಿಯಾದ ಹಣದಲ್ಲಿ ಗ್ರಾಮ ಪಂಚಾಯ್ತಿ ಅಧ್ಯಕ್ಷರಿಂದ ಹಿಡಿದು ಮೇಲೆ ಎಲ್ಲಿಯವರೆಗಿನ ಅಧಿಕಾರಿಗಳಿಗೂ ಪಾಲು ! ಅಂದಮೇಲೆ ಪ್ರಾಥಮಿಕ ಶಿಕ್ಷಣದ ಬಗ್ಗೆ ಸಂವಿಧಾನದ ನಿರ್ದೇಶನ ಸತ್ತ ಶಾಸನ ಆಗಿ ಹೋಗಿದೆ. ಹೀಗಾದರೆ ಈ ದೇಶದಲ್ಲಿ ಪ್ರಾಥಮಿಕ ಶಿಕ್ಷಣ ಸಾರ್ವತ್ರಿಕವಾಗಲು ಐವತ್ತು ಅಲ್ಲ ಐನೂರು ವರ್ಷದಲ್ಲೂ ಸಾಧ್ಯವಿಲ್ಲ.

'ಕುಣಿಯಕ್ಕೆ ಬಾರದವಳು ನೆಲ ಸೊಟ್ಟಗಿದೆ' ಎಂದಂತೆ ಭ್ರಷ್ಟ ಅಸಮರ್ಥ ಮೂರ್ಖ ರಾಜಕಾರಣಿಗಳು ಪ್ರಾಥಮಿಕ ಶಿಕ್ಷಣವನ್ನು ಸಂವಿಧಾನದಲ್ಲಿ ಮೂಲಭೂತ ಹಕ್ಕೆಂಬುದಾಗಿ ಸಂವಿಧಾನ ತಿದ್ದುಪಡಿ ಮಾಡಬೇಕೆಂಬ ಅವಿವೇಕದ ಕ್ರಮ ಕೈಗೆತ್ತಿಕೊಂಡಿದ್ದಾರೆ !! ಅಂಥ ಒಂದು ತಿದ್ದುಪಡಿ ಮಸೂದೆ ಸಂಸತ್ತಿನ ಮುಂದಿದೆ. ಆ ತಿದ್ದುಪಡಿ ಮಾಡದೆಯೆ ಉನ್ನಿಕೃಷ್ಣನ್ ಕೇಸಿನಲ್ಲಿ ಸರ್ವೋಚ್ಚ ನ್ಯಾಯಾಲಯ ಆರ್ಟಿಕಲ್ ೨೧ರ ಅಡಿಯಲ್ಲಿ ಪ್ರಾಥಮಿಕ ಶಿಕ್ಷಣ ಮಾನವ ಜೀವನದ ಮೂಲಭೂತ ಹಕ್ಕೆಂದು ಶಾಸನ ಮಾಡಿದೆ ! ಆರ್ಟಿಕಲ್ ೧೪೧ರ ಪ್ರಕಾರ ಸರ್ವೋಚ್ಚ ನ್ಯಾಯಾಲಯ ಘೋಷಿಸಿದ ತೀರ್ಪು ದೇಶಕ್ಕೆಲ್ಲ ಶಾಸನವಾಗುತ್ತದೆ. ಆ ಶಾಸನದಂತೆ ನಡೆದುಕೊಳ್ಳ ಬೇಕಾದುದು ಕಾರ್ಯಾಂಗದ ಕರ್ತವ್ಯ. ಆದರೆ ಯಾವ ಸರ್ಕಾರವೂ ಅದನ್ನು ಗಣನೆ ಮಾಡಿಲ್ಲ.

ಇತ್ತೀಚೆಗೆ ನಮ್ಮ ಘನವೆತ್ತ ಶಿಕ್ಷಣ ಮಂತ್ರಿಗಳು ಪ್ರಾಥಮಿಕ ಶಿಕ್ಷಣದ ಬಗ್ಗೆ ಸಾರ್ವತ್ರಿಕ ಚರ್ಚೆ ಆಗಬೇಕೆಂಬ ಘನ ಸೂಚನೆ ಮಾಡಿದ್ದಾರೆ. ಈ ಸರ್ಕಾರ ಅಧಿಕಾರಕ್ಕೆ ಬಂದಮೇಲೆ ಯಾವ ಪ್ರಶ್ನೆ ಬಂದಾಗಲೂ ವಿಚಾರಣಾ ಆಯೋಗ ನೇಮಿಸುತ್ತ ಬಂದಿದೆ ! ಉತ್ತರ ಕರ್ನಾಟಕದ ಅಭಿವೃದ್ಧಿ ಆಗಬೇಕೆಂದು ಹಠ ಹಿಡಿದಾಗ ಎಲ್ಲಿ ತಾರತಮ್ಯವಾಗಿದೆ ಎಂದು ಕಂಡುಹಿಡಿಯಲು ಬಂದು ಆಯೋಗ ರಚಿಸಲಾಯಿತು ! ಈಗ ಅಧಿಕಾರದಲ್ಲಿರುವ ಮಂತ್ರಿಗಳೊಬ್ಬರು ಹಿಂದೆ ವಿರೋಧಿ ಪಕ್ಷದಲ್ಲಿ ಇದ್ದಾಗ 'ನನಸಾಗದ ಕನಸು - ಕರ್ನಾಟಕ' ಎಂಬ ಪುಸ್ತಕವನ್ನೇ ಪ್ರಕಟಿಸಿದ್ದರು ! ಈಗ ಆ ಕೆಲಸವನ್ನು ಒಂದು ಆಯೋಗ ವಹಿಸಬೇಕಂತೆ. ಇದಕ್ಕಿಂತ ಅಪ್ರಾಮಾಣಿಕ ಆಡಳಿತೆ ಜಗತ್ತಿನ ಯಾವ ದೇಶದಲ್ಲಿ ನಡೆದೀತು ? ಇಂಥವರ ಕೈಯಲ್ಲಿ ಸಂವಿಧಾನದ ನಿರ್ದೇಶನ ಕಸವಾಗಿದ್ದರೆ ಆಶ್ಚರ್ಯವೇನಿದೆ ?

ಹಾಗಾದರೆ ಇದಕ್ಕೆ ಪರಿಹಾರವೇನು ? ಅಪ್ರಾಮಾಣಿಕತೆ, ಭ್ರಷ್ಟಾಚಾರ ತೊಲಗದ ವಿನಃ, ತೊಡೆದುಹಾಕದ ತನಕ, ಈ ಅನಕ್ಷರತೆಯ ಅರ್ಬುದ ರೋಗಕ್ಕೆ ಮದ್ದಿಲ್ಲ. ಅರ್ಬುದರೋಗದ ನಿಶ್ಚಿತ ಪರಿಣಾಮ ಮರಣ ! ಮೃತ್ಯು ಮುಖವಾದ ಈ ದೇಶವನ್ನು ಮೇಲೆತ್ತುವ ಶಕ್ತಿ ಯಾವ ಸಂವಿಧಾನಕ್ಕೂ ಇಲ್ಲ ! ಈ ದೇಶಕ್ಕೆ ಅನಕ್ಷರತೆಯ ಶಾಪ ವಿಮೋಚನೆ ಆಗುವ ಲಕ್ಷಣವಿಲ್ಲ. ಜನಸಮುದಾಯ ಕಾರ್ಯಪ್ರವೃತ್ತವಾಗಿ ಮಧ್ಯಪ್ರವೇಶ ಮಾಡಿದಾಗ ಮಾತ್ರವೇ ಆ ಲಕ್ಷಣವನ್ನು ಬದಲಾಯಿಸಬಹುದು. ಆ ದಿಕ್ಕಿನಲ್ಲಿ ಸಾಮೂಹಿಕವಾಗಿ ಹೆಜ್ಜೆ ಹಾಕೋಣ.

**ಕೋ. ಚೆನ್ನಬಸಪ್ಪ**

೧೨೭, ವೆಸ್ಟ್ ಆಫ್ ಕಾರ್ಡ್‌ರೋಡ್, ರಾಜಾಜಿನಗರ, ಬೆಂಗಳೂರು-೮೬

# ತಲೆಕೆಳಗಾಗಿ ನಿಂತ ಹರ್‌ಕ್ಯುಲಿಸ್

ಕತ್ತಲಾಗುತ್ತಿದ್ದಂತೆ ನಮ್ಮನ್ನು ಆಕರ್ಷಿಸುವ ಕಾಯ ಮಂಗಳ. ತನ್ನ ಪ್ರಕಾಶವನ್ನು ಇನ್ನೂ ಉಳಿಸಿಕೊಂಡಿದೆ. ಚಂದ್ರನಿಲ್ಲದಾಗ ''ರಜನಿಗಾ ಭೂಷಣಂ'' ಎಂಬ ಪಟ್ಟವನ್ನು ಈ ತಿಂಗಳೂ ಅದು ಬಿಟ್ಟುಕೊಡುವುದಿಲ್ಲ. ಕಳೆದ ತಿಂಗಳು ನೇರ ನಡೆ ಆರಂಭಿಸಿದ ಅದು ಧನುರಾಶಿಯತ್ತ ಪಯಣಿಸುತ್ತಿದೆ. ಸಂಜೆ ಸೂರ್ಯಾಸ್ತವಾದ ಕೂಡಲೇ ನೆತ್ತಿಯಿಂದ ಸ್ವಲ್ಪ ದಕ್ಷಿಣಕ್ಕೆ ಕಾಣುವ ಈ ಚುಕ್ಕೆ ಪುನಃ ಆಕಾಶಗಂಗೆಯ ನೆಬ್ಯುಲ, ಗುಚ್ಛಗಳ ಹಿನ್ನೆಲೆಯಲ್ಲಿ ಹಾದುಹೋಗುತ್ತದೆ. ಮಧ್ಯರಾತ್ರಿಯ ಹೊತ್ತಿಗೆ ಪಶ್ಚಿಮದಲ್ಲಿ ಕಂತುತ್ತದೆ.




ಮಂಗಳದಿಂದ ನೆತ್ತಿಯತ್ತ ದೃಷ್ಟಿ ಹರಿಸಿ. ಒಫಿಯೂಕಸ್ (ಉರಗಧರ) ಕಾಣುತ್ತದೆ. ಹಾಗೆಯೇ ಮುಂದುವರೆದರೆ ನೆತ್ತಿಯಿಂದ ತುಸು ಉತ್ತರಕ್ಕೆ ಕಾಣುವ ನಕ್ಷತ್ರಪುಂಜ ಹರ್‌ಕ್ಯುಲಿಸ್ (ಭೀಮಸೇನ). ಗ್ರೀಕ್ ಪುರಾಣದಲ್ಲಿ (ಭೀಮಸೇನನನ್ನು ಹೋಲುವ) ಮಹಾಬಲಶಾಲಿ. ಅವನ ಹುಟ್ಟೂ ಅಂತಹುದೇ. ಜ್ಯೂಪಿಟರ್ ಈತನ ತಂದೆ. ತಾಯಿ (ಹುಲುಮಾನವಿ) ಅಲ್ಕ್‌ಮೆನ್. ಈ ಗುಟ್ಟನ್ನು ಅರಿತ ಜ್ಯೂನೋ (ಜ್ಯೂಪಿಟರ್‌ನ ಹೆಂಡತಿ) ಎಳೆಯ ಮಗು ಹರ್‌ಕ್ಯುಲಿಸ್‌ನನ್ನು ಮುಗಿಸಿಬರಲು ಎರಡು ಹಾವುಗಳನ್ನು ಕಳಿಸಿದ್ದಳಂತೆ. ಆದರೆ ಶಿಶುವೇ ಆ ಎರಡೂ ಹಾವುಗಳನ್ನು ತಿರುಚಿ ಹಾಕಿಬಿಟ್ಟಿತಂತೆ. ಕಥೆಗೆ ಕಾಲಿಲ್ಲ, ಹೇಗೆ ಹೇಗೋ ಮುಂದುವರೆದು ಹರ್‌ಕ್ಯುಲಿಸ್‌ನ ಹನ್ನೆರಡು ಮಹಾಸಾಹಸಗಳನ್ನು ವರ್ಣಿಸುತ್ತದೆ. ಒಂದೊಂದೂ ಮಾನವರಿಗೆ ಅಸಾಧ್ಯವಾದುದೇ. ಕೊನೆಯದು ಜೂನೋಳ ಉದ್ಯಾನದಿಂದ ಸೇಬಿನ ಹಣ್ಣನ್ನು ತರುವ ಕೆಲಸ. ಉದ್ಯಾನಕ್ಕೆ ಪ್ರವೇಶಿಸಬಲ್ಲ ಏಕಮಾತ್ರ ವ್ಯಕ್ತಿ ಅಟ್ಲಾಸ್. ಆದರೆ ಭುಜದ ಮೇಲೆ ವಿಶ್ವ ಎಂಬ ಭಾರಿಗೋಳವನ್ನೇ ಹೊತ್ತಿರುವ ಆತನಿಗೆ ಪುರುಸೊತ್ತೆಲ್ಲಿ? ಹರ್‌ಕ್ಯುಲಿಸ್ ಹಣ್ಣು ತರಲು ಕೇಳಿಕೊಂಡ. ತರುವವರೆಗೂ ಭಾರವನ್ನು ತಾನೇ ಹೊರುವುದಾಗಿ ಒಪ್ಪಿಕೊಂಡ. ಹಣ್ಣುಗಳು ಬಂದವು. ಅಟ್ಲಾಸ್‌ಗೆ ಭುಜದ ಮೇಲಿನ ಭಾರ ಕಳೆದುಕೊಳ್ಳುವ ಆಲೋಚನೆ ಬಂತು. ಬಲಶಾಲಿ ಹರ್‌ಕ್ಯುಲಿಸ್‌ನೇ ಏಕೆ ಹೊರಬಾರದು ? ಹರ್‌ಕ್ಯುಲಿಸ್ ಹಿಂದೆಗೆಯಲಿಲ್ಲ. ಆದರೆ ಹೊರೆಯನ್ನು ಎಡಭುಜದಿಂದ ಬಲಭುಜಕ್ಕೆ ವರ್ಗಾಯಿಸಿಕೊಳ್ಳಲು ಸಹಾಯ ಕೇಳಿದ. ಅಟ್ಲಾಸ್ ಹೊರೆಯನ್ನು ಎತ್ತಿಹಿಡಿದ ಕೂಡಲೇ ಹಣ್ಣುಗಳೊಡನೆ ಪರಾರಿಯಾದ. ಪಾಪ ! ಅಟ್ಲಾಸ್ ಈಗಲೂ ಹೊತ್ತುಕೊಂಡೇ ಕುಳಿತಿದ್ದಾನಂತೆ – ಇದು ಕಥೆ.



ಆಕಾಶದಲ್ಲಿಯ ನಕ್ಷತ್ರವಿನ್ಯಾಸವನ್ನು ನೆನಪಿನಲ್ಲಿಟ್ಟುಕೊಳ್ಳಲು ಮಾತ್ರ ಈ ಹೆಸರು ಉಪಯುಕ್ತ. ಹಿಂದೊಮ್ಮೆ ನಭಾವಲೋಕನದಲ್ಲಿ ಹರ್‌ಕ್ಯುಲಿಸ್ ವಿನ್ಯಾಸದಿಂದ ಹನುಮಂತನನ್ನು ಚಿತ್ರಿಸಿದ್ದೆ. ನಿಮಗೆ ಅನುಕೂಲವಾದ ಯಾವುದೇ ಚಿತ್ರ ಕಲ್ಪಿಸಿಕೊಳ್ಳಲು ಅಡ್ಡಿಯಿಲ್ಲ. ಆದರೆ ಹರ್‌ಕ್ಯುಲಿಸ್‌ನನ್ನೇ ಕಲ್ಪಿಸಿಕೊಳ್ಳಲು ಚಿತ್ರದ ಸಹಾಯ ಬೇಕೇ ಬೇಕು. ಈಗ ಮುಂದಿನ ಪ್ರಶ್ನೆ - ಆಕಾಶದಲ್ಲಿ ತಲೆಕೆಳಗಾಗಿ ನಿಂತಿರುವ ಚಿತ್ರವನ್ನು ಏಕೆ ಕಲ್ಪಿಸಿಕೊಂಡರು ?

ಇದು ಅನೇಕ ಇತಿಹಾಸ ಸಂಶೋಧಕರ ತಲೆ ತಿಂದಿದೆ. ಪರಿಹಾರ ಹುಡುಕಲು ಹೊರಟವರು ಹರ್‌ಕ್ಯುಲಿಸ್ ಎಂಬ ಹೆಸರು ಯಾವಾಗ ಅಂಟಿರಬಹುದು ಎಂದೂ ಪತ್ತೆ ಮಾಡಿದ್ದಾರೆ. ಸುಮಾರು ೫೫೦೦ ವರ್ಷಗಳಷ್ಟು ಹಿಂದೆಯೇ ಈ ಹೆಸರು ಬಳಕೆಯಲ್ಲಿದ್ದಿರಬಹುದು ಎಂದು ಲೆಕ್ಕಹಾಕಿದ್ದಾರೆ. ಅಂದಿನ ಧ್ರುವ ನಕ್ಷತ್ರ ಬೇರೆಯಾಗಿತ್ತು. ಹರ್‌ಕ್ಯುಲಿಸ್ ಈಗ ಕಾಣುವುದಕ್ಕಿಂತ ಇನ್ನೂ ಉತ್ತರಕ್ಕೆ ಬಹುಶಃ ರಾತ್ರಿ ಇಡೀ ಕಾಣುತ್ತಿತ್ತು. ಹಾಗಾಗಿ ಅದು ದಿಗಂತದ ಸಮೀಪದಲ್ಲಿದ್ದಾಗ ನೇರವಾಗಿ ನಿಂತ ಹರ್‌ಕ್ಯುಲಿಸ್‌ನ ಆಕೃತಿಯನ್ನು ಕಲ್ಪಿಸಿಕೊಂಡಿದ್ದಿರಬಹುದು. ಈಗದು ತಲೆಕೆಳಕಾಗಿದೆ. ಈ ಉತ್ತರ ಸಮಂಜಸ ಎನ್ನಿಸಿದರೂ, ಈ ಚಿತ್ರ ಪರಂಪರೆ ಎಷ್ಟು ಹಳೆಯದು ಎಂಬ ಅಂಶ ಅಚ್ಚರಿಯನ್ನುಂಟುಮಾಡುತ್ತದೆ.

ನಕ್ಷತ್ರ ಪುಂಜದ ಮಧ್ಯದ ಚೌಕಾಕಾರದ ಭಾಗವನ್ನು ದುರ್ಬೀನಿನಿಂದ ಗಮನಿಸಿ. ಅದರ ಒಂದು ಅಂಚಿನಲ್ಲಿ ಅಂದರೆ ಹರ್‌ಕ್ಯುಲಿಸ್ ಆಕೃತಿಯ ಸೊಂಟದ ಭಾಗದಲ್ಲಿ ಒಂದು ಸುಂದರ ಗೋಳ ಗುಚ್ಛ ಇದೆ.

ಈಗ ಇತರ ಗ್ರಹಗಳು ಎಲ್ಲಿವೆ ಎಂದು ತಿಳಿಯೋಣ. ಗುರು, ಶನಿ ಮತ್ತು ಶುಕ್ರ ಬೆಳಗಿನ ಝಾವ ಕಾಣುತ್ತವೆ. ಬುಧ ತಿಂಗಳ ಕೊನೆಯಲ್ಲಿ ಸಂಜೆ ಕಾಣುತ್ತದೆ. ೬ರಂದು ಗುರು ಮತ್ತು ಶುಕ್ರ ಎರಡೂ ಮಿಥುನರಾಶಿಯಲ್ಲಿ ೧ ಡಿಗ್ರಿ ಅಂತರದಲ್ಲಿ ಕಾಣುತ್ತವೆ. ಪ್ರತಿ ಬೆಳಿಗ್ಗೆಯೂ ಗಮನಿಸುತ್ತಾ ಬಂದರೆ ಶುಕ್ರ ಗುರುವನ್ನು ಹಿಂದೆ ಹಾಕಿ ಓಡುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಚಂದ್ರ ಈ ತಿಂಗಳಲ್ಲಿ ಗ್ರಹಗಳನ್ನು ಮರೆ ಮಾಡಿ ವಿಶೇಷ ಗ್ರಹಣಗಳನ್ನು ಉಂಟುಮಾಡುತ್ತದೆ. ಇವುಗಳಲ್ಲಿ ಒಂದು ಮಾತ್ರ ನಮಗೆ ಕಾಣುತ್ತದೆ. ೧೪ರಂದು ಬೆಳಗಿನ ಝಾವ ಪೂರ್ವದಂಚನ್ನು ಗಮನಿಸಿ. ಬಾಲಚಂದ್ರದ ಪಕ್ಕದಲ್ಲಿ ಚುಕ್ಕೆಯಂತೆ ಕಾಣುವ ಶನಿಗ್ರಹವನ್ನು ಗುರುತಿಸಿ. ೬ ಗಂಟೆ ೧೮ ನಿಮಿಷಕ್ಕೆ ಶನಿಯನ್ನು ಚಂದ್ರ ಪೂರ್ಣವಾಗಿ ಮುಚ್ಚಿಬಿಡುತ್ತದೆ. ಸುಮಾರು ೫ ಗಂಟೆಗಳ ನಂತರ ಶನಿ ಚಂದ್ರನ ಇನ್ನೊಂದು ಪಕ್ಕದಿಂದ ಹೊರಬರುವ ದೃಶ್ಯ ನಮಗೆ ಕಾಣುವುದಿಲ್ಲ. ಮರುದಿನ ಬೆಳಿಗ್ಗೆ (೧೫ರಂದು) ಚಂದ್ರನನ್ನು ಗುರುತಿಸಿ, ಶನಿಗ್ರಹದಿಂದ ೧೨ ಡಿಗ್ರಿ ದೂರ ಸರಿದ ಅದು ಗುರುಗ್ರಹವನ್ನು ಮರೆಮಾಡುತ್ತದೆ. ಆದರೆ ನಮಗೆ ಅವು ತೀರಾ ಸನಿಹದಲ್ಲಿರುವಂತೆ ಕಾಣುತ್ತದೆಯೇ ಹೊರತಾಗಿ ಮರೆಯಾಗುವುದು ಕಾಣುವುದಿಲ್ಲ. ಜಪಾನ್ ಕೆನಡಾ ದೇಶದವರಿಗೆ ಈ 'ಗ್ರಹಣ'ದ ನೋಟ ಲಭ್ಯ. ಕ್ಯಾಮರಾದಿಂದ ಈ ಸುಂದರ ನೋಟವನ್ನು ಸೆರೆಹಿಡಿಯಬಹುದು. ೧೯ರಂದು ಶುಕ್ರಗ್ರಹದ ಸನಿಹ ಕಾಣುವ ಚಂದ್ರ, ೨೬ರಂದು ಸಂಜೆ ಮಂಗಳ ಗ್ರಹದ ಪಕ್ಕದಲ್ಲಿ ಕಾಣುತ್ತದೆ.

ಪರ್‌ಸಿಯ್ಡೈಡ್ ಉಲ್ಕಾವೃಷ್ಟಿ ಆಗಸ್ಟ್ ೧೨ರಂದು ಗರಿಷ್ಠವಾಗಲಿದೆ. ಸ್ವಿಫ್ಟ್ ಟಟಲ್ ಎಂಬ ಹೆಸರಿನ ಧೂಮಕೇತು ಬಿಟ್ಟುಹೋದ ಕಣಗಳು ಹೀಗೆ ಉಲ್ಕೆಯಾಗಿ ಕಾಣುತ್ತವೆ. ೧೯೯೨ರಲ್ಲಿ ಬಂದು ಹೋದ ಈ ಧೂಮಕೇತು ಕಣಗಳ ಹೊಸ ಸರಕನ್ನು ಒದಗಿಸಿದೆ. ಗಂಟೆಗೆ ಸುಮಾರು ೧೦೦ರಿಂದ ೨೫೦ ಉಲ್ಕೆಗಳನ್ನು ೧೯೯೪ರಿಂದ ದಾಖಲು ಮಾಡುತ್ತಾ ಬಂದಿದ್ದಾರೆ. ಮಳೆಗಾಲದ ತೊಂದರೆ ಒಂದು; ಪ್ರಕಾಶಮಾನವಾದ (ಅರ್ಧ) ಚಂದ್ರ ಪರ್‌ಸಿಯಸ್‌ನ ಪಕ್ಕದಲ್ಲೇ ಇರುವುದು ಇನ್ನೊಂದು ಅನಾನುಕೂಲವಾಗಿದೆ. ಆದರೂ ೧೦,೧೧,೧೨,೧೩ – ಈ ದಿನಗಳಲ್ಲಿ ಬೆಳಗಿನ ಝಾವ ಈಶಾನ್ಯ ದಿಕ್ಕಿನಿಂದ ಬೀಳುವ ಉಲ್ಕೆಗಳ ಸಂಖ್ಯೆ ಹೆಚ್ಚಾದಂತೆ ಕಾಣುವುದು. ದಿನವೂ 'ಜಾಗಿಂಗ್' ಮುಂತಾದವುಕ್ಕಾಗಿ ಬೆಳಿಗ್ಗೆ ಬೇಗ ಏಳುವವರಿಗೆ ಮಾತ್ರ ಅರಿವಾಗಬಹುದು.

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಬೆಂಗಳೂರು - ೫೬೦ ೦

# ಕರ್ನಾಟಕ ಬಾಡಿಗೆ ಮಸೂದೆ ೧೯೯೯

ಈಗ ಕರ್ನಾಟಕದಲ್ಲಿ ಜಾರಿ ಇರುವ "ಕರ್ನಾಟಕ ಬಾಡಿಗೆ ಹತೋಟಿ ಕಾಯಿದೆ ೧೯೬೧" ಮೂಲಭೂತವಾಗಿ ಎಲ್ಲ ರಾಜ್ಯಗಳಲ್ಲೂ ಒಂದೇ ಸ್ವರೂಪ ಉಳ್ಳದ್ದಾಗಿದ್ದು, ಬಾಡಿಗೆದಾರನಿಗೆ ರಕ್ಷಣೆ ಕೊಡಲೆಂದೇ ಅಧಿನಿಯಮಿಸಲಾಗಿದೆ. ಈ ರಕ್ಷಣೆ ಕೊಡುವುದರ ಹಿಂದಿನ ಉದ್ದೇಶ ವಸತಿಯ ತೀವ್ರ ಕೊರತೆ ಇರುವ ಪರಿಸ್ಥಿತಿಯಲ್ಲಿ ಮನೆ ಮಾಲೀಕ ಬಾಡಿಗೆಯನ್ನು ಮನಸ್ವೀ ಪದೇ ಪದೇ ಹೆಚ್ಚಿಸುತ್ತಾ ಹಾಗೆ ಹೆಚ್ಚಿಸಿದಾಗಲೆಲ್ಲಾ ಬಾಡಿಗೆದಾರ ಕೊಡಲು ಒಪ್ಪದೇ ಇದ್ದರೆ, ಆಗದೇ ಇದ್ದರೆ, ಅವನಿಗೆ ಕಿರುಕುಳ ಕೊಟ್ಟು ಅವನು ವಾಸವಿರುವ ಮನೆಯನ್ನೋ ವ್ಯಾಪಾರ ಮಾಡುತ್ತಿರುವ ಅಂಗಡಿಯನ್ನೋ ಬಿಡಿಸಿಕೊಳ್ಳಲು ಕ್ರಮ ತೆಗೆದುಕೊಂಡರೆ, ಬಾಡಿಗೆದಾರನಿಗೆ ಉಂಟಾಗುತ್ತಿದ್ದ ತೊಂದರೆ, ಮನೋವೇದನೆ, ಅನಿಶ್ಚಯತೆ, ಅಭದ್ರತೆ, ನಷ್ಟ ಇವುಗಳಿಂದ ರಕ್ಷಣೆ ಕೊಡಲೆಂದು ಕರ್ನಾಟಕ ಬಾಡಿಗೆ ನಿಯಂತ್ರಣ ಕಾಯಿದೆ, ೧೯೬೧ ಎಂಬುದನ್ನು ಅಧಿನಿಯಮಗೊಳಿಸಲಾಯಿತು. ಈ ಕಾಯಿದೆ ಬಾಡಿಗೆದಾರನಿಗೆ ಅನುಕೂಲವಾಗಿತ್ತು, ಅದರಲ್ಲೂ ಮುಖ್ಯವಾಗಿ ಈ ಕಾಯಿದೆಯ ೨೧(೧)ನೇ ಕಲಮು. ಈ ಕಲಮಿನ ಪ್ರಕಾರ ಯಾವುದೇ ಮನೆ ಮಾಲೀಕ ತಾನು ಬಾಡಿಗೆಗೆ ಕೊಟ್ಟಿರುವ ಮನೆ ಯಾ ಅಂಗಡಿಯನ್ನು ಬಾಡಿಗೆದಾರನಿಂದ ಬಿಡಿಸಿಕೊಳ್ಳಲು ಕೆಲವು ಕಾನೂನು ಸಮ್ಮತ ಕಾರಣಗಳನ್ನು ಕೊಟ್ಟು ನ್ಯಾಯಾಲಯಕ್ಕೆ ಅರ್ಜಿಯನ್ನು ಕೊಡಬೇಕಾಗಿತ್ತು. ಕಾರಣ ಕೊಡುವುದು ಒಂದೇ ಅಲ್ಲ, ಅದನ್ನು ಸಾಬೀತು ಮಾಡುವುದೂ ಅವನ ಹೊಣೆಯಾಗಿತ್ತು. ಮನೆ ತೆರವು ಮಾಡಿಸಲು ಸಲ್ಲಿಸಿದ ಅರ್ಜಿಗಳನ್ನು ವಿಚಾರಣೆ ಮಾಡಲು ಅನುಸರಿಸುವ ಪ್ರಕ್ರಿಯೆಯು ಸಂಕ್ಷಿಪ್ತ ಪ್ರಕ್ರಿಯೆ ಎಂದು ತಾತ್ವಿಕವಾಗಿ ಒಪ್ಪಲಾಗಿದ್ದರೂ ಪ್ರಯೋಗದಲ್ಲಿ ಅದು ಲಂಬವಾದ, ತೊಡಕಿನ ಪ್ರಕ್ರಿಯೆಯೇ ಆಗಿತ್ತು. ಇದಲ್ಲದೆ ಬೆಂಗಳೂರು ಮಹಾನಗರ ಪ್ರದೇಶದ ಹೊರತಾಗಿ ಕರ್ನಾಟಕದ ಮಿಕ್ಕ ಎಲ್ಲೆಡೆ ಈ ಪ್ರಕರಣಗಳನ್ನು ಸಿವಿಲ್ ನ್ಯಾಯಾಲಯಗಳು (ಕಿರಿಯ ವಿಭಾಗ) ವಿಚಾರಣೆಗೆ ಸ್ವೀಕರಿಸಿ, ಅವುಗಳು ಕೊಟ್ಟ ತೀರ್ಮಾನದ ಮೇಲೆ, ಅದೇ ಜಿಲ್ಲೆಯ ಜಿಲ್ಲಾ ನ್ಯಾಯಾಸ್ಥಾನಕ್ಕೆ ಮೊದಲನೇ ಪುನರೀಕ್ಷಣಾ ಅರ್ಜಿ, ಜಿಲ್ಲಾ ನ್ಯಾಯಾಲಯ ಪುನರೀಕ್ಷಣಾ ಅರ್ಜಿಯ ಮೇಲೆ ಕೊಟ್ಟ ತೀರ್ಮಾನದ ಮೇಲೆ ಉಚ್ಚನ್ಯಾಯಾಲಯಕ್ಕೆ ಎರಡನೇ ಪುನರೀಕ್ಷಣಾ ಅರ್ಜಿಯನ್ನು ಸಲ್ಲಿಸಬೇಕು. ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಈ ಅರ್ಜಿಗಳನ್ನು ಲಘು ವ್ಯವಹಾರ ನ್ಯಾಯಾಲಯಗಳು ಸ್ವೀಕರಿಸಿ, ಅವುಗಳು ಕೊಟ್ಟ ತೀರ್ಮಾನದ ಮೇಲೆ, ಪುನರೀಕ್ಷಣಾ ಅರ್ಜಿಯನ್ನು ಉಚ್ಚನ್ಯಾಯಾಲಯಕ್ಕೆ ಸಲ್ಲಿಸಬೇಕಾಗಿದೆ. ಒಂದು ಪ್ರಕರಣ ಅಂತಿಮವಾಗಿ (ಉಚ್ಚನ್ಯಾಯಾಲಯದ) ಮಟ್ಟದಲ್ಲಿ ಇತ್ಯರ್ಥವಾಗುವುದಕ್ಕೆ ವರ್ಷಗಳೇ ಸಂದುಹೋಗುತ್ತವೆ. ಉಚ್ಚನ್ಯಾಯಾಲಯದ ತೀರ್ಪಿನಿಂದ ಪ್ರಕರಣ ಸರ್ವೋಚ್ಚ ನ್ಯಾಯಾಲಯಕ್ಕೇನಾದರೂ ಹೋದರೆ, ಅಲ್ಲಿಗೆ ಇನ್ನೂ ಹಲವಾರು ವರ್ಷಗಳು ತಳ್ಳಿಹೋಗುತ್ತವೆ. ನಿಜ, ಮನೆ ಮಾಲೀಕ ಬಾಡಿಗೆದಾರನಿಂದ ಮನೆ ಬಿಡಿಸಿಕೊಳ್ಳಲು ಭಗೀರಥ ಪ್ರಯತ್ನವನ್ನೇ ಮಾಡಬೇಕಾಗಿದೆ. ಪ್ರಕರಣ ಇತ್ಯರ್ಥವಾಗದೆ ಉಳಿದುಕೊಂಡಷ್ಟು ದಿನವೂ, ಮಾಲೀಕನಿಗೆ ಅನಿಶ್ಚಯತೆ, ಬಾಡಿಗೆದಾರನಿಗೆ ಆತಂಕ, ಅಭದ್ರತೆ, ಡೋಲಾಯಮಾನ ಪರಿಸ್ಥಿತಿ ಉಂಟಾಗುತ್ತದೆ. ಇದು ಈ ಕಾನೂನಿನಲ್ಲಿರುವ (೧೯೬೧ರ) ಒಂದು ಅಸಮರ್ಪಕತೆ ಎಂದು ಬೇಕಾದರೆ ಹೇಳಬಹುದು. ಇನ್ನು ನ್ಯಾಯ ಬಾಡಿಗೆಯನ್ನು ನಿರ್ಧರಿಸಲು ಇರುವ ತೀರ ಹಾಸ್ಯಾಸ್ಪದ ಅವಕಾಶ; (೧೪ನೇ ಕಲಮು). ಈ ಕಲಮನ್ನೇ ಉಚ್ಚನ್ಯಾಯಾಲಯ ಅಸಂವೈಧಾನಿಕವೆಂದು ಇತ್ತೀಚೆಗೆ ಹೊಡೆದುಹಾಕಿದೆ. ಇಷ್ಟಾದರೂ ಇಡೀ ಕಾನೂನನ್ನೇ ಸಾರಾಸಗಟಾಗಿ ದೋಷಪೂರ್ಣ ಎಂದು ಹೇಳುವುದಕ್ಕೆ ಆಗುವುದಿಲ್ಲ. ಮನೆ ಬಿಡಿಸಿಕೊಳ್ಳಲು ಮತ್ತು ನ್ಯಾಯ ಬಾಡಿಗೆಯನ್ನು ನಿರ್ಧರಿಸಲು ಇರುವ ವಿಧಿಗಳನ್ನು ಸೂಕ್ತ ತಿದ್ದುಪಡಿಗಳ ಮೂಲಕ ಉದಾರೀಕರಣಗೊಳಿಸಬಹುದಾಗಿತ್ತು. ಈ ಮಧ್ಯ ಮಾರ್ಗವನ್ನು ಬಿಟ್ಟು, ಸರ್ಕಾರ ಇಡೀ ಕಾನೂನನ್ನೇ ತೊಡೆದುಹಾಕಿ, ವಿಶ್ವಾಮಿತ್ರನಂತೆ ಒಂದು ಹೊಸ ಕಾನೂನನ್ನೇ ಸೃಷ್ಟಿ ಮಾಡಿದೆ. ಈ ಕಾನೂನನ್ನು ಕರ್ನಾಟಕ ಬಾಡಿಗೆ ಕಾಯಿದೆ, ೧೯೯೯ ಎಂದು ಕರೆಯಲಾಗಿದೆ. "ಹತೋಟಿ" ಎಂಬ ಅತಿ ಮುಖ್ಯವಾದ ಪದ ಇಂಥ ಕಾಯಿದೆಯ ತಿರುಳನ್ನು, ಉದ್ದೇಶವನ್ನು ಪ್ರತಿಬಿಂಬಿಸುವ ಪದ. ಈ ಪದವೇ ಹೊಸ ಕಾಯಿದೆಯ ನಾಮಧೇಯದಲ್ಲಿ ಕಾಣೆಯಾಗಿದೆ. ಅಲ್ಲಿಗೆ ಸರ್ಕಾರದ ಉದ್ದೇಶ ಸುಸ್ಪಷ್ಟ. ಈ ಕಾಯಿದೆಯನ್ನು ಮಂಡಿಸಿದ ಉದ್ದೇಶ ಮತ್ತು ಕಾರಣಗಳನ್ನು (Objects & Reasons) ಕೆಳಗಿನಂತೆ ಕೊಡಲಾಗಿದೆ:

"ಆರ್ಥಿಕ ಆಡಳಿತ ಸುಧಾರಣಾ ಆಯೋಗ ಮತ್ತು ನಗರೀಕರಣದ ರಾಷ್ಟ್ರೀಯ ಆಯೋಗಗಳು ಬಾಡಿಗೆ ಕಾನೂನನ್ನು ಸುಧಾರಣೆ ಮಾಡಬೇಕೆಂದು ಶಿಫಾರಸು ಮಾಡಿವೆ. ಮನೆ ಮಾಲೀಕ ಮತ್ತು ಬಾಡಿಗೆದಾರನ ನಡುವಿನ ಹಿತಾಸಕ್ತಿಯ ಸಮತೋಲನಗೊಳಿಸುವುದು ಅಲ್ಲದೆ ಭವಿಷ್ಯತ್ತಿನಲ್ಲಿ ಮನೆ ನಿರ್ಮಾಣಕ್ಕೆ ಒತ್ತಾಸೆ ತಂದು ಕೊಡುವುದೇ" ಈ ಸುಧಾರಣೆಯ ಉದ್ದೇಶವೆಂದು ಹೇಳಲಾಗಿದೆ. ಭಾರತ ಸರ್ಕಾರ ಒಂದು "ಮಾದರಿ" ಬಾಡಿಗೆ ನಿಯಂತ್ರಣ ಕಾನೂನನ್ನು ರಚಿಸಿ, ಎಲ್ಲ ರಾಜ್ಯ ಸರ್ಕಾರಗಳಿಗೂ ತಮ್ಮ ತಮ್ಮ ರಾಜ್ಯದಲ್ಲಿ ಈ "ಮಾದರಿ"ಯನ್ನು ಅನುಸರಿಸಿ ಈಗಿರುವ ಬಾಡಿಗೆ ನಿಯಂತ್ರಣ ಕಾಯಿದೆಗೆ ತಿದ್ದುಪಡಿಯನ್ನೋ ಅಥವಾ ಹೊಸ ಕಾನೂನನ್ನೋ ತರಬೇಕೆಂದು ಶಿಫಾರಸು ಮಾಡಿದೆ.

ಈ ಶಿಫಾರಸಿನಂತೆ ಕರ್ನಾಟಕ ರಾಜ್ಯ ಸರ್ಕಾರ ಈಗಿರುವ ಕರ್ನಾಟಕ ಬಾಡಿಗೆ ನಿಯಂತ್ರಣ ಅಧಿನಿಯಮ, ೧೯೬೧ನ್ನು ರದ್ದುಮಾಡಿ, ಅದರ ಜಾಗದಲ್ಲಿ ಹೊಸ ಕಾನೂನನ್ನು ತರಬೇಕೆಂದು ಪ್ರಸ್ತಾವನೆ ಮಾಡಿದೆ.

ಈ ಉದ್ದೇಶಿತ ಕಾಯಿದೆಯಲ್ಲಿನ ಕೆಲವು ಲಕ್ಷಣಗಳು ಹೀಗಿವೆ :-

೧. ಅದರ ವ್ಯಾಪ್ತಿಯನ್ನು ಹೀಗೆ ಸಂಕುಚಿತಗೊಳಿಸಲಾಗಿದೆ.
   i. ನಿಗದಿತ ಬಾಡಿಗೆ (ಸ್ಟಾಂಡರ್ಡ್ ರೆಂಟ್) ತಿಂಗಳಿಗೆ ರೂ ೩,೫೦೦/- ಮೀರದ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಕಾಯಿದೆ ೧೯೭೬ರ ಪರಿಧಿಯಲ್ಲಿ ಬರುವ ಪ್ರದೇಶಗಳಲ್ಲಿನ ಯಾವುದೇ ವಾಸದ ಕಟ್ಟಡ.
   ii. ಬೇರೆ ಪ್ರದೇಶಗಳಲ್ಲಿ ತಿಂಗಳಿಗೆ ರೂ ೨,೦೦೦/- ನಿಗದಿತ ಬಾಡಿಗೆಯನ್ನು ಮೀರದ ವಾಸದ ಕಟ್ಟಡ.
   iii. ೧೪ ಚದರ ಮೀಟರಿಗಿಂತ ಹೆಚ್ಚಿಲ್ಲದ ಯಾವುದೇ ವಾಣಿಜ್ಯೋದ್ದೇಶ ಕಟ್ಟಡ.
   iv. ೧೫ ವರ್ಷಗಳಿಗಿಂತ ಹೆಚ್ಚಾಗಿ ಹಳೆಯದಾದ ಯಾವುದೇ ಕಟ್ಟಡ.

೨. ಬಾಡಿಗೆ ಕರಾರು ಪತ್ರ ಲಿಖಿತವಾಗಿರಬೇಕು ಮತ್ತು ನೋಂದಣಿ ಮಾಡಿಸಬೇಕು.

೩. ಒಂದು ಗೊತ್ತಾದ ಚೌಕಟ್ಟಿನೊಳಗೆ ವಾರಸುದಾರರಿಗೆ ಬಾಡಿಗೆ ಹಕ್ಕನ್ನು ಕೊಡುವುದು.

೪. ಈ ಕೆಳಗಿನ ಅವಕಾಶಗಳನ್ನು ಕಲ್ಪಿಸಲಾಗಿದೆ:
   i. ಕಟ್ಟಡದ ಮೇಲೆ ಹಾಕಿದ ಹಣಕ್ಕನುಸಾರವಾಗಿ ನಿಗದಿತ ಬಾಡಿಗೆಯ ವಸೂಲಿ ಮತ್ತು ಬಾಡಿಗೆಯ ಹೆಚ್ಚಳ. ಬಾಡಿಗೆ ನಿಯಂತ್ರಣಾಧಿಕಾರಿಗಳಿಂದ "ನಿಗದಿತ ಬಾಡಿಗೆಯ" ನಿರ್ಧರಣೆ.
   ii. ಮಧ್ಯವರ್ತಿಗಳ ಮತ್ತು ಎಸ್ಟೇಟ್ ಏಜೆಂಟರುಗಳ ನೋಂದಣಿ.
   iii. ಬಾಡಿಗೆ ನ್ಯಾಯಾಲಯಗಳಿಂದ ಕಟ್ಟಡ ತೆರವು ಮಾಡಿಸಿಕೊಳ್ಳಲು ಕೊಟ್ಟ ಅರ್ಜಿಗಳ ವಿಚಾರಣೆ, ಪುನರೀಕ್ಷಣೆಗೆ ಮಾತ್ರ ಅವಕಾಶ. ಮೇಲ್ಮನವಿ ಇಲ್ಲ.
   iv. ರಾಜ್ಯ ಹಾಗೂ ಕೇಂದ್ರ ಸರ್ಕಾರದ ನೌಕರರ, ಸಶಸ್ತ್ರ ಪಡೆಗಳ ಸದಸ್ಯರ, ವಿಧವೆಯರ, ವಿಕಲಾಂಗರ, ಮತ್ತು ಕೆಲವು ಸಂದರ್ಭಗಳಲ್ಲಿ ೬೫ ವರ್ಷ ವಯಸ್ಸು ಮೀರಿದವರ, ಬಾಡಿಗೆದಾರರನ್ನು ತತ್‌ಕ್ಷಣ ಹೊರದಬ್ಬುವ ಅವಕಾಶ.
   v. ನಿಯಂತ್ರಣಾಧಿಕಾರಿಗಳ ಮತ್ತು ನ್ಯಾಯಾಲಯಗಳ ಮುಂದಿರುವ ಪ್ರಕರಣಗಳ ಶೀಘ್ರ ಇತ್ಯರ್ಥಕ್ಕೆ ವಿಶೇಷ ಪ್ರಕ್ರಿಯೆಗಳನ್ನು ರೂಪಿಸುವುದು.
   vi. ಮಾಲೀಕರ ಮತ್ತು ಬಾಡಿಗೆದಾರರ ಮೇಲೆ ಕೆಲವು ವಿಶೇಷ ಹೊಣೆ ಹಾಗೂ ಬಾಧ್ಯತೆಯನ್ನು ಹೇರುವುದು.

ಈ ಘನವಾದ ಉದ್ದೇಶಗಳನ್ನು ಇಟ್ಟುಕೊಂಡು ಈ ಮಸೂದೆಯನ್ನು ವಿಧಾನ ಪರಿಷತ್ತು ೨೪-೧೧-೨೦೦೦ ದಂದು, ಹಾಗೂ ವಿಧಾನಸಭೆ ೨೫-೧೧-೨೦೦೦ದಂದು ಅಂಗೀಕರಿಸಿವೆ. ಅಂಗೀಕರಿಸಿ ಈಗ್ಗೆ ಹಲವಾರು ತಿಂಗಳುಗಳು ಸಂದಿವೆ. ಇನ್ನೂ ರಾಜ್ಯಪಾಲರ ಅಂಗೀಕಾರದ ಮುದ್ರೆ ಬಿದ್ದಿಲ್ಲ. ಹೀಗಾಗಿ ೧೯೬೧ರ ಕಾಯಿದೆ ಒಂದು ಕಾಲನ್ನು ಹೊಸ್ತಿಲಿನ ಆಚೆಗೆ ಇಟ್ಟಿದೆ. ಹೊಸ ಕಾಯಿದೆ ಒಂದು ಕಾಲನ್ನು ಒಳಗೆ ಇಟ್ಟಿದೆ. ತಿಂಗಳುಗಳು ಕಳೆದೇಹೋದರೂ ರಾಜ್ಯಪಾಲರ ಅಂಗೀಕಾರ ಮುದ್ರೆ ಹೊಸ ಕಾಯಿದೆಗೆ ಬಿದ್ದೇ ಇಲ್ಲ. ಈ ಹೊಸ ಕಾಯಿದೆ ಯಾವಾಗಲಾದರೂ ಜಾರಿಗೆ ಬರಲಿ, ಅದು ಬಂದದ್ದೇ ಆದರೆ, ಈ ಕರ್ನಾಟಕ ಬಾಡಿಗೆ ಅಧಿನಿಯಮ, ೧೯೯೯, "ಬಾಡಿಗೆದಾರರ ನಿರ್ಮೂಲ ಕಾಯಿದೆ" ಎಂಬ ಅನ್ವರ್ಥ ನಾಮಕ್ಕೆ ಅರ್ಹತೆ ಪಡೆಯುತ್ತದೆ.

ಎಸ್. ಆರ್. ಗೌತಮ್

ಈ ಕಾಯಿದೆಯನ್ನು ರೂಪಿಸಿದ ಮಹಾನುಭಾವರು ಯಾರೇ ಇರಲಿ, ಅವರು ಇಂಥ ಕಾಯಿದೆಗಳ ಮೂಲ ಸ್ವರೂಪ, ಮೂಲ ಉದ್ದೇಶ ಹಾಗೂ ಮೂಲ ತತ್ವಗಳನ್ನೇ ಗಾಳಿಗೆ ತೂರಿದಂತಿದೆ. ಬಾಡಿಗೆದಾರರಿಂದ ಮಾಲೀಕರನ್ನು ರಕ್ಷಣೆ ಮಾಡಲು ಇರುವಂಥ ಈ ಕಾಯಿದೆಯನ್ನು ಇನ್ನು ಹೇಗೆ ವರ್ಣಿಸಬೇಕೋ ಅರ್ಥವಾಗುತ್ತಿಲ್ಲ. ಅಷ್ಟೇ ಅರ್ಥವಾಗದೆ ಇರುವುದೆಂದರೆ ಈಗಿನ ರೂಪದಲ್ಲಿ ಈ ಕಾಯಿದೆಯ ಅವಶ್ಯಕತೆ ಲವಲೇಶವಾದರೂ ಇದೆಯೇ ಎಂದು.

ಈ ಲೇಖನದ ವ್ಯಾಪ್ತಿಯಲ್ಲಿ, ಈ ಕಾಯಿದೆಯ ಎಲ್ಲ ಅಬದ್ಧಗಳನ್ನು ಚರ್ಚಿಸಲು ಸಾಧ್ಯವಾಗುತ್ತಿಲ್ಲ. ಒಂದೆರಡು ಮುಖ್ಯ ಭ್ರಮಣೆಗಳನ್ನು ಈ ಕೆಳಗೆ ವಿವರಿಸುತ್ತಿದ್ದೇನೆ.

**ಕಾಯಿದೆಯ ೬ ಮತ್ತು ೭ನೇ ಕಲಮುಗಳು**

ಯಾವುದೇ ಬಾಡಿಗೆ ಕಟ್ಟಡಕ್ಕೆ ಕೊಡಬೇಕಾದ ಬಾಡಿಗೆ ಈ ರೀತಿ ಇರುತ್ತದೆ.

ಅ) ಮನೆ ಮಾಲೀಕ ಮತ್ತು ಬಾಡಿಗೆದಾರ ಒಪ್ಪಂದ ಮಾಡಿಕೊಂಡ ಬಾಡಿಗೆ.

ಆ) ಕಟ್ಟಡ ಕಟ್ಟಲು ತಗುಲಿದ ಮತ್ತು ಕಟ್ಟಲು ಪ್ರಾರಂಭಿಸಿದ ತಾ॥ನಂದು ನಿವೇಶನದ ಮಾರುಕಟ್ಟೆ ಬೆಲೆ, ಇವೆರಡರ ಒಟ್ಟು ಮೊತ್ತದ ಶೇ. ೧೦ ಒಂದು ವರ್ಷದ ಬಾಡಿಗೆ.

ಇ) ಈ ಕಾಯಿದೆ ಜಾರಿಗೆ ಬರುವ ಮುಂಚೆ, ಬಾಡಿಗೆ ಕರಾರು ಮಾಡಿಕೊಂಡಿದ್ದರೆ, ಕಾಯಿದೆ ಜಾರಿಗೆ ಬಂದ ಮೂರು ತಿಂಗಳುಗಳ ಒಳಗೆ ಮನೆ ಮಾಲೀಕ ಬಾಡಿಗೆದಾರನಿಗೆ ಲಿಖಿತ ನೋಟೀಸನ್ನು ಕೊಟ್ಟು (ಆ)ನಲ್ಲಿ ಕಂಡಂತೆ ಬಾಡಿಗೆಯನ್ನು ಹೆಚ್ಚಿಸಬಹುದು.

ಈ) (ಅ) ಮತ್ತು (ಆ)ನಲ್ಲಿ ಕಾಣಿಸಿದ ಬಾಡಿಗೆಯನ್ನು ಕೆಳಕಂಡಂತೆ ವರ್ಷೇ ವರ್ಷೇ ಹೆಚ್ಚಿಸಲು ಅವಕಾಶವಿದೆ.

**ಪದಕ - ೧**

| | **ಬಾಡಿಗೆ ಕರಾರಿನ ತಾರೀಖು ಕಟ್ಟಡ ಪ್ರಾರಂಭಿಸಿದ ತಾ॥** | **ಬಾಡಿಗೆ ಹೆಚ್ಚಿಸಲು ವಾರ್ಷಿಕ ದರ** |
|---|---|---|
| ೧) | ೩೧-೧೨-೧೯೪೯ ರವರೆಗೆ | ೨% |
| ೨) | ೦೧-೦೧-೧೯೫೦ ರಿಂದ ೩೧-೧೨-೧೯೬೦ ರವರೆಗೆ | ೪% |
| ೩) | ೦೧-೦೧-೧೯೬೧ ರಿಂದ ೩೧-೧೨-೧೯೭೦ರ ವರೆಗೆ | ೬% |
| ೪) | ೦೧-೦೧-೧೯೭೧ ರಿಂದ ೩೧-೧೨-೧೯೭೪ ರವರೆಗೆ | ೮% |
| ೫) | ೦೧-೦೧-೧೯೭೫ ರಂದು ಮತ್ತು ಮುಂದಕ್ಕೆ | ಸಟ್ಟಾಬೆಲೆಯ ಸೂಚ್ಯಂಕದ ಮೇಲೆ ಆಧಾರಿತ ವಾರ್ಷಿಕ ಹಣದುಬ್ಬರದ ದರದ ೭೫% |

ಮೇಲ್ಕಂಡ ರೀತಿಯಲ್ಲಿ ಬಾಡಿಗೆಯನ್ನು ಹೆಚ್ಚು ಮಾಡುವ ಗರಿಷ್ಠ ಮಿತಿ ಕೆಳಕಂಡಂತೆ ಇರುತ್ತದೆ.

**ಪದಕ-೨**

| | **ಕಟ್ಟಡದ ವಿಸ್ತೀರ್ಣ** | **ಬಾಡಿಗೆಯನ್ನು ಹೆಚ್ಚಿಸುವ ಗರಿಷ್ಠಮಿತಿ** |
|---|---|---|
| ೧. | ೫೦ ಚದರ ಮೀಟರುಗಳು | ೨೫% |
| ೨. | ೫೦ ಚದರಕ್ಕೆ ಮೇಲ್ಪಟ್ಟು ೯೦ ಚ. ಮೀ. ವರೆಗೆ | ೫೦% |
| ೩. | ೯೦ ಚ.ಮೀ. ಗೆ ಮೇಲ್ಪಟ್ಟು ೧೬೦ ಚ.ಮೀ. ಒಳಗೆ | ೭೫% |
| ೪. | ೧೬೦ ಚ. ಮೀ. ಮೇಲೆ | ೧೦೦% |

| | ವರ್ಷ | ಬಾಡಿಗೆ | ವಾರ್ಷಿಕ ಹೆಚ್ಚಳ 10% | ಒಟ್ಟು ೨+೩ | ಚಾರ್ಜುಗಳು ಸೌಲಭ್ಯ ೫% | ನಿರ್ವಹಣಾ ವೆಚ್ಚ ೧೦% | ಕಂದಾಯ | ಒಟ್ಟು ಬಾಡಿಗೆ ತಿಂಗಳಿಗೆ ೪+೫+೬+೭ |
|---|---|---|---|---|---|---|---|---|
| | ೧ | ೨ | ೩ | ೪ | ೫ | ೬ | ೭ | ೮ |
| ೧. | ೦೧-೦೧-೨೦೦೨ | ೭೦೦೦ | ೭೦೦ | ೭೭೦೦ | ೩೮೫ | ೭೭೦ | ೨೫೦ | ೯೧೦೫ |
| ೨. | ೦೧-೦೧-೨೦೦೩ | ೭೭೦೦ | ೭೭೦ | ೮೪೭೦ | ೪೨೩ | ೮೪೭ | ೨೫೦ | ೯೯೦೦ |
| ೩. | ೦೧-೦೧-೨೦೦೪ | ೮೪೭೦ | ೮೪೭ | ೯೩.೧೭ | ೪೬೫ | ೯೩೨ | ೨೫೦ | ೧೦೯೬೪ |
| ೪. | ೦೧-೦೧-೨೦೦೫ | ೯೩೧೭ | ೯೩೨ | ೧೦೨೪೯ | ೫೧೨ | ೧೦೨೫ | ೨೫೦ | ೧೨೦೩.೬ |
| ೫. | ೦೧-೦೧-೨೦೦೬ | ೧೦೨೪೯ | ೩.೫೧ | ೧೦೬೦೦ | ೫೨೫ | ೧೦೫೦ | ೨೫೦ | ೧೨೪೨೫ |

** ಸೂಚನೆ : ೧) ಪದಕ ೨ ರಂತೆ ಮೂಲಬಾಡಿಗೆಯ ೫೦%ರಷ್ಟು ಮಾತ್ರ ಹೆಚ್ಚಿಸಬಹುದು ೨) ೦೧-೦೧-೨೦೦೭ರಿಂದ ಬಾಡಿಗೆ ಹೆಚ್ಚಳವಿಲ್ಲ*

ನಿಗದಿತ ಬಾಡಿಗೆ (ಸ್ಟಾಂಡರ್ಡ್ ರೆಂಟ್) ಏನು ಎಂದು ಈ ರೀತಿ ವಿವರಣೆ ಕೊಡಲಾಗಿದೆ.

i ಕಟ್ಟಡ ಕಟ್ಟಲು ತಗುಲಿದ ಖರ್ಚು

ii ಕಟ್ಟಡ ಕಟ್ಟಲು ಪ್ರಾರಂಭಿಸಿದ ದಿನ ಇದ್ದ ನಿವೇಶನದ ಮಾರುಕಟ್ಟೆ ಬೆಲೆ

iii (i) + (ii) ರ ಮೊತ್ತದ ಶೇ. ೧೦, ವಾರ್ಷಿಕ ಬಾಡಿಗೆಯಾಗುತ್ತದೆ. ಇದನ್ನೇ ಸ್ಟಾಂಡರ್ಡ್ ರೆಂಟ್ ಎಂದು ಹೆಸರಿಸಲಾಗಿದೆ.

ಇದಲ್ಲದೆ ಬಾಡಿಗೆಯ ಮೇಲೆ ಕೆಳಕಂಡ ಚಾರ್ಜುಗಳನ್ನು ಬಾಡಿಗೆದಾರ ಕಡ್ಡಾಯವಾಗಿ ಕೊಡಲೇಬೇಕು :

ಅ) ಸೌಲಭ್ಯಗಳ ಪೂರೈಕೆಗೆ, ಬಾಡಿಗೆಯ ಪ್ರತಿಶತ ೧೫ ರಷ್ಟು ಮೀರದಂತೆ

ಆ) ನಿರ್ವಹಣಾ ವೆಚ್ಚ, ಬಾಡಿಗೆಯ ಪ್ರತಿಶತ ೧೦

ಇ) ಮನೆ ಕಂದಾಯ

ಈ "ಮನೆ ಹಾಳು" ದರಗಳನ್ನು ಇಲ್ಲಿ ವಿವರವಾಗಿ ಚರ್ಚಿಸಲು ಸಾಧ್ಯವಿಲ್ಲ. ಆದರೆ ಒಂದೇ ಒಂದು ಉದಾಹರಣೆಯನ್ನು ಕೆಳಗೆ ಕೊಟ್ಟಿದ್ದೇನೆ.

ಬೆಂಗಳೂರಿನ ಸಾಮಾನ್ಯ ದರ್ಜೆಯ ಬಡಾವಣೆಯಲ್ಲಿ ಹೊಸದಾಗಿ ಕಟ್ಟಿರುವ ೮೦ ಚ.ಮೀ. (೮೦೦ ಚ.ಅ) ಮನೆ. ಎರಡು ಗೈಸರುಗಳು, ನಾಲ್ಕು ಫ್ಯಾನುಗಳು ಮತ್ತು ಎರಡು ವಾರ್ಡ್‌ರೋಬುಗಳು. ಸೌಲಭ್ಯಗಳಿಗಾಗಿ ಬಾಡಿಗೆಯ ೫% ತೆಗೆದುಕೊಂಡಿದೆ. ವಾರ್ಷಿಕ ಮನೆ ಕಂದಾಯ ರೂ. ೩,೦೦೦/- ಇಂಥ ಮನೆಗೆ ಕೊಡಬೇಕಾದ ಬಾಡಿಗೆ :

೦೧-೦೧-೨೦೦೧ ರಂದು ನಿಗದಿತ ಬಾಡಿಗೆ

| | | |
|---|---|---|
| ೧. | ಕಟ್ಟಡ ಕಟ್ಟಲು ತಗುಲಿದ ಖರ್ಚು : ೮೦೦ ಚ.ಅ. ಗೆ, ೧೦೦ ಚ.ಅ. ಗೆ ರೂ. ೪೦,೦೦೦ದಂತೆ | ರೂ. ೩,೨೦,೦೦೦ |
| ೨. | ೧೦೦೦ ಚ. ಅ. (ಅಂದಾಜು)ನಿವೇಶನದ ಬೆಲೆ : ಚ. ಅ. ಗೆ ರೂ ೫೦೦ ರಂತೆ | ೫,೦೦,೦೦೦ |
| | (೧)+(೨) | ೮,೨೦,೦೦೦ |
| ೩. | ಇದರ ಶೇಕಡಾ ೧೦ | ೮೨,೦೦೦ |
| ೪. | ಒಂದು ತಿಂಗಳ ಬಾಡಿಗೆ (ಸುಮಾರು) | ೭,೦೦೦ |
| ೫. | ಸೌಲಭ್ಯಗಳಿಗಾಗಿ (ಗೈಸರ್ ವಾರ್ಡ್‌ರೋಬ್ ಮತ್ತು ಫ್ಯಾನ್‌ಗಳಿಗಾಗಿ) ಬಾಡಿಗೆಯ ಶೇಕಡಾ ೫ನ್ನು ಮಾತ್ರ ಲೆಕ್ಕ ಹಾಕಿದೆ | ೩೫೦ |
| ೬. | ನಿರ್ವಹಣ ವೆಚ್ಚ : ಬಾಡಿಗೆಯ ಶೇ:೧೦ | ೭೦೦ |
| ೭. | ಮನೆ ಕಂದಾಯ (ವಾರ್ಷಿಕ : ೩೦೦೦/-) ತಿಂಗಳಿಗೆ | ೨೫೦ |
| | ೪+೫+೬+೭ (ಒಂದು ತಿಂಗಳ ಬಾಡಿಗೆ) | ೮,೩೦೦ |

ಈ ಬಾಡಿಗೆ ಮುಂದಿನ ೫ ವರ್ಷಕ್ಕೆ ಪ್ರತಿವರ್ಷ ಈ ರೀತಿ ಹೆಚ್ಚುತ್ತಾ ಹೋಗುತ್ತದೆ.

ಸೂಚನೆ : ಕಟ್ಟಡದ ವಿಸ್ತೀರ್ಣ ೮೦ ಚ.ಮೀ. ಇರುವುದರಿಂದ ಪದಕ ೨ ರಂತೆ ಬಾಡಿಗೆಯ ಗರಿಷ್ಠ ೫೦% ಮಾತ್ರ ಹೆಚ್ಚಿಸಬಹುದು.

ಅಂದರೆ, ೦೧-೦೧-೨೦೦೧ರಂದು ರೂ. ೮೩೦೦/- ಇದ್ದ ಬಾಡಿಗೆ ೦೧-೦೧-೨೦೦೬ಕ್ಕೆ ೧೨,೪೨೫/=ನ್ನು ಮುಟ್ಟುತ್ತದೆ. ಈ ಅಧಿನಿಯಮದ ಹೆಸರಿನಲ್ಲಿ "ನಿಯಂತ್ರಣ" ಎಂಬ ಪದವನ್ನು ಅಳಿಸಿಹಾಕಿರುವುದು ಏಕೆ ಎಂದು ಅರ್ಥವಾಯಿತು ತಾನೇ ?

ಈ ರೀತಿ ಬಾಡಿಗೆ ನಿಷ್ಕರ್ಷೆ ಮಾಡಿದ ಮೇಲೆ ಮನೆ ಮಾಲೀಕ ಬಾಡಿಗೆದಾರರನ್ನು ಏಕೆ ಬಿಡಿಸುತ್ತಾನೆ ?! ಆದರೂ ಬಿಡಿಸಿಕೊಳ್ಳಲು ಅವನಿಗೆ ಮಾಡಿಕೊಟ್ಟಿರುವ ಸೌಲಭ್ಯವನ್ನು ನೋಡಿ !

**ಕಲಮು ೨೭(೨) (r)**

ಮನೆಯ ಮಾಲೀಕನಿಗಾಗಲೀ, ಅಥವಾ ಅವನ ಕುಟುಂಬದ ಸದಸ್ಯನಿಗಾಗಲೀ ವಾಸಕ್ಕೆ ಮನೆ ಬೇಕಾಗಿದ್ದರೆ ಬಿಡಿಸಿಕೊಳ್ಳಲು ಅರ್ಜಿಯನ್ನು ಹಾಕಬಹುದು. ಅರ್ಜಿಯ ಜೊತೆ ಒಂದು ಪ್ರಮಾಣಪತ್ರವನ್ನು ಲಗತ್ತಿಸಬೇಕು. ಇಷ್ಟು ಮಾಡಿದರೆ ಸಾಕು. ನ್ಯಾಯಾಲಯ ಮಾಲೀಕನಿಗೆ ಮನೆ ಬೇಕಾಗಿದೆಯೆಂದೇ ಭಾವಿಸಿಕೊಳ್ಳಬೇಕು. ಇದರ ತಾತ್ಪರ್ಯ, ಮಾಲೀಕನಿಗೆ ಸ್ವಂತಕ್ಕೆ ಮನೆ ಬೇಕಾಗಿಲ್ಲವೆಂದು ಸಾಧಿಸುವುದು ಬಾಡಿಗೆದಾರನ ಹೊಣೆ. ಮನೆ ಮಾಲೀಕ ಸಾಕ್ಷಿ ಕಟ್ಟೆಯನ್ನು ಸಹ ಹತ್ತಬೇಕಾಗಿಲ್ಲ.

ಈ ಲೇಖನದ ಸೀಮಿತ ವ್ಯಾಪ್ತಿಯಲ್ಲಿ ಇಷ್ಟು ಮಾತ್ರ ಚರ್ಚಿಸಲು ಸಾಧ್ಯವಾಗಿದೆ. ಆದರೆ, ಇಷ್ಟರಿಂದಲೇ ಈ ಕಾಯಿದೆಯ ಉದ್ದೇಶ ಮತ್ತು ಯಾರಿಗಾಗಿ ಕಾಯಿದೆ ಎಂದು ಧಾರಾಳವಾಗಿ ಅರ್ಥವಾಗುತ್ತದೆ. ಆದರೆ ಅಸಲು ಪ್ರಶ್ನೆ ಇಂಥ ಕಾಯಿದೆ ಬೇಕಾಗಿತ್ತೇ ಎಂಬುದು !

ಎಸ್. ಆರ್. ಗೌತಮ್
ನಂ. ೧೫, ಎಲ್. ಎನ್. ಮಹಲ್ , ಲಿಂಕ್ ರಸ್ತೆ
ಮೂರನೇ ಕ್ರಾಸ್, ಮಲ್ಲೇಶ್ವರಂ
ಬೆಂಗಳೂರು - ೫೬೦ ೦೦೩

# ಸಾಹಿತ್ತಿಕ ಚಳುವಳಿ ಅಥವಾ ಚಳುವಳಿ ರೂಪದ ಸಾಹಿತ್ಯ

ನಾಗಭೂಷಣ ಪಾಟೀಲ

ಸಾಹಿತ್ಯ ಎಂಬುದು ಒಂದು ಕಲೆ. ಇದು ಮನುಷ್ಯನ ಬದುಕಿನ ಅಭಿವ್ಯಕ್ತಿಯನ್ನು ಕೇಂದ್ರವಾಗುಳ್ಳ ಮಾಧ್ಯಮ. ಒಂದು ಕಾಲದ ಸಾಹಿತ್ಯದ ಅಭಿವ್ಯಕ್ತಿಗೆ ಆ ಕಾಲದ ಎಲ್ಲ ಸಂಗತಿಗಳೂ ಕಾರಣವಾಗಿರುತ್ತವೆ. ಪರಿಣಾಮಕಾರಿ ಎನ್ನಿಸಿಕೊಂಡ ಸಾಹಿತ್ಯದ ಹುಟ್ಟು ಒಂದು ಆಕಸ್ಮಿಕವೇನೂ ಅಲ್ಲ. ಬದುಕಿನ ಪ್ರತಿಬಿಂಬವೇ ಆದ ಸಾಹಿತ್ಯ ಬದುಕಿನ ವಾಸ್ತವ ಮತ್ತು ಬದುಕಿನ ಚರಿತ್ರೆಯೂ ಆಗಿದೆ. ಯಾವುದೇ ಭಾಷೆಯ ಸಾಹಿತ್ಯ ಚರಿತ್ರೆಗುಂಟ ನಡೆದಿರುವ ಸಾಹಿತ್ಯಿಕ ಚರ್ಚೆ, ಸಂವಾದ, ಸಂಘರ್ಷಗಳು ಕೇವಲ ಸಾಹಿತ್ಯಕ್ಕೆ ಸಂಬಂಧಿಸಿದವುಗಳೆಂದು ತಳ್ಳಿಹಾಕುವಂತಿಲ್ಲ, ಅವು ಆಯಾಕಾಲದ ಸಾಂಸ್ಕೃತಿಕ ಅಸ್ತಿತ್ವದ ಹೋರಾಟಗಳೂ ಹೌದು. ಮನುಷ್ಯನ ಚರಿತ್ರೆಯಲ್ಲಿ ವ್ಯವಸ್ಥೆಯೊಂದರ ಅಸ್ತಿತ್ವವೆಂದರೆ ಅದು ಇನ್ನೊಂದು ವ್ಯವಸ್ಥೆಗೆ ಪ್ರತೀಕಾರವೆಂಬಂತೆ ಭಿನ್ನ ಸ್ವರೂಪವನ್ನು ಮೈಗೂಡಿಸಿಕೊಂಡಿರುತ್ತದೆ. ಒಂದರ ಹುಟ್ಟು, ಇನ್ನೊಂದಕ್ಕೆ ಪ್ರತಿಭಟನೆ ಎಂಬುದನ್ನಂತೂ ಬೇರೆ ಬೇರೆ ಸಾಹಿತ್ಯಿಕ ಸಂದರ್ಭಗಳು ಸ್ಪಷ್ಟವಾಗಿ ನಿರೂಪಿಸಿವೆ. ಇಂತಹ ವಿಭಿನ್ನ ನೆಲೆಯ ಸಾಮೂಹಿಕ ಧ್ವನಿಗಳೇ ಒಟ್ಟಾಗಿ ಒಂದು ಸಾಹಿತ್ಯಿಕ ಚಳುವಳಿ ಎಂದು ಕರೆಸಿಕೊಳ್ಳುತ್ತವೆ.

ಮನುಕುಲದ ಅತ್ಯಂತ ಪ್ರಾಚೀನ ಸಂಸ್ಕೃತಿಯೆನ್ನಲಾದ ಗ್ರೀಕ್ ಸಂಸ್ಕೃತಿಯ ತಿರುಳುಗಳಾಗಿ ಹೋಮರನ 'ಇಲಿಯಡ್' ಮತ್ತು 'ಒಡಿಸ್ಸಿ' ಕೃತಿಗಳು ಕಂಡುಬರುತ್ತವೆ. ಆ ಕಾಲದ ವೀರಕಥನ ಪರಂಪರೆಗನುಗುಣವಾಗಿ ಈ ಕೃತಿಗಳು ರಚನೆಗೊಂಡಿವೆ. ಇದು ಪರಾಕ್ರಮಣಶಾಹಿ ವ್ಯವಸ್ಥೆಯ ಉದಯಕಾಲ. ಈ ವ್ಯವಸ್ಥೆಯ ಪ್ರತಿನಿಧಿಯಾದ ದೊರೆಯನ್ನು ವೀರನನ್ನಾಗಿಸಿ ಸಾಹಿತ್ಯ ಧ್ವನಿ ಪಡೆಯಿತು. ಮುಂದೆ ಅತ್ಯಲ್ಪ ಕಾಲದಲ್ಲಿ ಭ್ರಷ್ಟಗೊಂಡ ವ್ಯವಸ್ಥೆಯನ್ನು ವಿಡಂಬಿಸುವ ನಾಟಕಗಳು ರಚನೆಗೊಂಡವು. ಯೂರಿಪಿಡೀಸ್, ಅರಿಸ್ಟೋಫೆನಿಸ್‌ರಂತಹ ನಾಟಕಕಾರರು ವಿಡಂಬನಾತ್ಮಕ ನಾಟಕಗಳ ಮೂಲಕ ಅರಸೊತ್ತಿಗೆಯನ್ನು ಎದುರಿಸುತ್ತಾರೆ.

ಭಾರತದ ಪ್ರಾಚೀನ ಸಮುದಾಯಗಳ ಸಂಘರ್ಷವನ್ನು ರಾಮಾಯಣ ಮತ್ತು ಮಹಾಭಾರತಗಳು ಪ್ರತಿನಿಧಿಸುತ್ತವೆ. ಒಂದು ರಾಮ-ರಾವಣರ ಸಮುದಾಯಗಳ ನಡುವಿನ ಇನ್ನೊಂದು ಅರ್ಜುನ-ಏಕಲವ್ಯರ ನಡುವಣ ಸಂಘರ್ಷಗಳು ಕೃತಿರೂಪ ಪಡೆದಿವೆ. ಕ್ರಿ..ಶ. ೧೦-೧೨ನೇ ಶತಮಾನಗಳಲ್ಲಿ ಜೈನ, ಬೌದ್ಧ, ವೀರಶೈವ ಸಾಹಿತ್ಯಗಳು ಜಡಗೊಂಡಂತಿದ್ದ ವೈದಿಕ ಸಾಹಿತ್ಯಕ್ಕೆ ಪ್ರತೀಕಾರವೆಂಬಂತೆ ರೂಪುಗೊಂಡವು. ಅದರಂತೆ ಮಧ್ಯಕಾಲೀನ ಯುರೋಪ್ ಅರಾಜಕತೆಯಿಂದ ನರಳುತ್ತಿರುವ ಸಂದರ್ಭದಲ್ಲಿ ಹುಟ್ಟಿಕೊಂಡದ್ದು ರೊಮ್ಯಾಂಟಿಕ್ ಸಾಹಿತ್ಯ ಚಳುವಳಿ. ಮುಂದೆ ರಮ್ಯತೆಯ ಸಂವೇದನೆಯಲ್ಲಿ ಮೈಮರೆಯುತ್ತಿರುವಂತೆಯೇ ಉಸಿರುಕಟ್ಟಿಸುವ ಮಹಾಯುದ್ಧಗಳ ಕಾಲ ಆರಂಭವಾಗುತ್ತದೆ. ಆಗ ಮನುಷ್ಯ ಜೀವಕ್ಕೆ ಬೆಲೆಯೇ ಇಲ್ಲದಂತಹ ವಾತಾವರಣ. ಆಗ ಸಂಘಟನೆಗೊಂಡದ್ದು ಅಸ್ತಿತ್ವವಾದಿ ಚಳುವಳಿ. ಇವು ಮಹತ್ವದ ಸಾಹಿತ್ಯಿಕ ಚಳುವಳಿಗಳ ಘಟ್ಟಗಳಷ್ಟೇ ಅಲ್ಲ, ಒಟ್ಟು ಮನುಕುಲದ ಎಚ್ಚರಸ್ಥಿತಿಯ ದ್ಯೋತಕ ಕೂಡ.

**ಭಾರತದಲ್ಲಿ ಸಂಸ್ಕೃತಕ್ಕೆ ಸವಾಲು**

ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ಸಂಸ್ಕೃತ ಭಾಷೆ, ಸಾಹಿತ್ಯದ್ದೇ ಕಾರುಬಾರು. ವೇದ-ಉಪನಿಷತ್ತು ಅಲ್ಲದೆ ಮಹತ್ವದ ಜ್ಞಾನವೆಲ್ಲವೂ ಸಂಸ್ಕೃತದಲ್ಲಿಯೇ ಸಾಗಿಬಂದಿದ್ದವು. ಸಾಹಿತ್ಯ ಕೃತಿಗಳ ರಚನೆಗೆ ಮತ್ತು ಎಲ್ಲ ಬಗೆಯ ಅಭಿವ್ಯಕ್ತಿಗೆ ಸಂಸ್ಕೃತ ಭಾಷೆ ಅನಿವಾರ್ಯವಾಗಿತ್ತು. ಸಂಸ್ಕೃತ ಭಾಷೆಗೆ ಧರ್ಮದ ಮತ್ತು ರಾಜಾಶ್ರಯದ ಅನುಕೂಲವೂ ಒದಗಿಬಂದ ಕಾರಣ ಸಂಸ್ಕೃತ ಭಾಷೆ, ಸಾಹಿತ್ಯಕ್ಕೆ ಎಲ್ಲೆಲ್ಲೂ ಅಧಿಕೃತ ಮನ್ನಣೆ ಪ್ರಾಪ್ತವಾಗಿತ್ತು. ಆದರೆ ಮಧ್ಯಯುಗೀನ ಭಾರತದ ಸಂದರ್ಭದಲ್ಲಿ ಸಂಸ್ಕೃತವನ್ನು ಹಿಂದೆ ತಳ್ಳಿ, ಅನೇಕ ಸ್ಥಳೀಯ ಭಾಷೆಗಳು ಮುನ್ನೆಲೆಗೆ ಬಂದವು. ಪ್ರಾಕೃತ, ತಮಿಳು, ಕನ್ನಡ ಮುಂತಾದ ಅನೇಕ ಭಾಷೆಗಳ ಸಾಹಿತ್ಯ ಸಂಸ್ಕೃತ ಮತ್ತು ವೈದಿಕ ಸಂಸ್ಕೃತಿಗೆ ಸವಾಲಾಗಿ ನಿಂತು ಸ್ಥಳೀಯ ಭಾಷಾಭಿವ್ಯಕ್ತಿಯನ್ನು ರೂಪಿಸಿಕೊಂಡವು. ವೇದ-ಉಪನಿಷತ್ತುಗಳ ಕಠಿಣವಾದ ನಿಯಮಗಳು ಮತ್ತು ಭಾಷಿಕ ಮಡಿವಂತಿಕೆಯನ್ನು ಧಿಕ್ಕರಿಸಿ ಕನ್ನಡನಾಡಿನ ವಚನ ಚಳುವಳಿ ಸ್ವರೂಪದಲ್ಲಿ ದೇಶಾದ್ಯಂತ ಸಾಹಿತ್ಯ ಚಳುವಳಿಗಳು ಸಂಘಟನೆಗೊಂಡವು. ಆರಂಭದಲ್ಲಿ ಸಂಸ್ಕೃತ ಮಹಾಕಾವ್ಯಗಳನ್ನು ಅನುಸರಿಸಿದರೂ ಕನ್ನಡ ಮಹಾಕಾವ್ಯಗಳು ಸ್ವಂತಿಕೆಯನ್ನು ಮೈಗೂಡಿಸಿಕೊಂಡವು. ಸಂಸ್ಕೃತದ ಬಗೆಗಿನ ಇಂತಹ ವಿರೋಧಿ ಮನೋಭಾವದ ಕಾರಣದಿಂದಾಗಿ ಮುಂದೆ ಹಿಂದಿ, ಬಂಗಾಳಿ ಸೇರಿದಂತೆ ದೇಶದ ಬಹಳಷ್ಟು ಭಾಷೆಗಳ ಸಾಹಿತ್ಯದ ಅಸ್ತಿತ್ವಕ್ಕೆ ಭೂಮಿಕೆಯಾಯಿತು.

**ಪ್ರಜಾತಂತ್ರ ವ್ಯವಸ್ಥೆಯನ್ನು ಬೆಂಬಲಿಸಿ ಸಾಹಿತ್ಯ**

ಕನ್ನಡನಾಡಿನ ವಚನ ಚಳುವಳಿ ಜಾಗತಿಕ ಮಟ್ಟದಲ್ಲಿ ನಡೆದ ಮೊಟ್ಟಮೊದಲ ಸಮಾನತಾ ಚಳುವಳಿ. ಎಲ್ಲ ವರ್ಗದ ಶರಣರು ಸಾಹಿತ್ಯದ ಮೂಲಕ 'ಸಮಾನತೆಯ ತತ್ವ'ವನ್ನು ಸಾರಿದ್ದು ಚಾರಿತ್ರಿಕ ಮಹತ್ವದ ಘಟನೆಯಾಗಿದೆ. ಶತಶತಮಾನಗಳಿಂದ ಶೋಷಣೆಗೊಳಪಟ್ಟದ್ದ ಒಂದು ವರ್ಗ ಇಲ್ಲಿಂದ ಪ್ರಜ್ಞೆಗೊಂಡಿತು. ಇನ್ನು ಆಧುನಿಕ ಕಾಲಕ್ಕೆ ಬಂದರೆ ರಸ್ಕಿನ್ನನ 'ಅನ್‌ಟು ದಿಸ್ ಲಾಸ್ಟ್', ರೂಸೋನ 'ಸೋಷಿಯಲ್ ಕಾಂಟ್ರಾಕ್ಟ್'ನಂತಹ ಕೃತಿಗಳು ಒಟ್ಟು ಮನುಕುಲದ ಪ್ರಜ್ಞಾಪಾತಳಿಯಿಂದ ಮೂಡಿಬಂದ ಕೃತಿಗಳಾಗಿವೆ. 'ಕಟ್ಟಕಡೆಯ ಮನುಷ್ಯನಿಗೆ ಮೊಟ್ಟಮೊದಲ ಆದ್ಯತೆ' ಎಂಬ ತತ್ವದ 'ಅನುಟು ದಿಸ್ ಲಾಸ್ಟ್' ಕೃತಿಯು ಗಾಂಧೀಜಿಯಂತಹ ವ್ಯಕ್ತಿತ್ವವನ್ನು ಪ್ರಭಾವಿಸಿದ ಕೃತಿ. ಅಸ್ಪೃಶ್ಯತೆಯಂತಹ ಸಾಮಾಜಿಕ ಅಸಮಾನತೆಯನ್ನು ನಿವಾರಿಸಲು ಪ್ರೇರೇಪಿಸುವುದರ ಜೊತೆಗೆ ಇದು ಶ್ರೇಣೀಕೃತ ವ್ಯವಸ್ಥೆಯನ್ನು ಧಿಕ್ಕರಿಸಿತು. ಅದರಂತೆಯೇ, ರೂಸೋನ 'ಸೋಷಿಯಲ್ ಕಾಂಟ್ರಾಕ್ಟ್' ಪ್ರಜಾತಂತ್ರದ ನಿರೀಕ್ಷೆಯಿಂದ ಮೂಡಿಬಂದ ಕೃತಿ. ರೂಸೋ ಈ ಕೃತಿಯನ್ನು ಬರೆಯದಿದ್ದರೆ ಫ್ರಾನ್ಸ್ ಕ್ರಾಂತಿ ನಡೆಯುತ್ತಿರಲಿಲ್ಲ ಎಂಬೊಂದು ಮಾತಿದೆ. ಅಂದರೆ ಕ್ರಿ.ಶ. ೧೭-೧೮ನೇ ಶತಮಾನಗಳ ಸಂದರ್ಭದಲ್ಲಿ ಫ್ರಾನ್ಸ್ ಇತ್ಯಾದಿ ದೇಶಗಳಲ್ಲಿ ಅಸ್ತಿತ್ವದಲ್ಲಿದ್ದ ರಾಜಶಾಹಿ ವ್ಯವಸ್ಥೆಗೆ ಪ್ರತಿರೋಧವಾಗಿ ರೂಪುಗೊಳ್ಳುತ್ತಿದ್ದ ಸಂಘಟನೆಗಳಿಗೆ ರೂಸೋನ ಕೃತಿ ಆಪ್ತವಾಯಿತು. ಫ್ರಾನ್ಸ್ ಕ್ರಾಂತಿಯ ಯಶಸ್ಸಿನಿಂದ ಸ್ಫೂರ್ತಿಗೊಂಡು ಅನೇಕ ವಸಾಹತು ರಾಷ್ಟ್ರಗಳು ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಟಕ್ಕಿಳಿದವು. ೧೮೪೮ರ ಸುಮಾರಿನಲ್ಲಿ ಯುರೋಪಿನ ಉದ್ದಗಲಕ್ಕೂ ಸಂಭವಿಸಿದ ಸಂಘರ್ಷಗಳು ಇದರ ಪ್ರೇರಣೆ ಹೊಂದಿದ್ದುವೆನ್ನಬಹುದು.




**ವಸಾಹತುಶಾಹಿ ವ್ಯವಸ್ಥೆಗೆ ಪ್ರತಿರೋಧ**

ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನಗಳಲ್ಲಿ ಭಾರತ ಕಂಡ ವಸಾಹತುಶಾಹಿಯ ದಟ್ಟ ಪರಿಣಾಮವನ್ನು ಆಧುನಿಕ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ರವೀಂದ್ರನಾಥ ಟಾಗೋರ್, ಬಂಕಿಮಚಂದ್ರ ಚಟರ್ಜಿ ಮುಂತಾದವರ ಬಂಗಾಳಿ ಸಾಹಿತ್ಯ ಕೃತಿಗಳು, ಮರಾಠಿ ನಾಟಕ ಸಾಹಿತ್ಯ ಮತ್ತು ಕನ್ನಡದ ನವೋದಯ ಸಾಹಿತ್ಯ ಬ್ರಿಟಿಷ್ ವಸಾಹತುಶಾಹಿ ಆಡಳಿತದ ವಿರುದ್ಧ

ಅಭಿವ್ಯಕ್ತಿಗೊಂಡವು. ಆಗ ದೇಶಾದ್ಯಂತ ನಡೆಯುತ್ತಿದ್ದ ರಾಜಕೀಯ ಚಳುವಳಿಗೆ ಪೂರಕವಾಗಿ ಸಾಹಿತ್ಯ ಕ್ರಿಯಾಶೀಲವಾಯಿತು. ಕನ್ನಡದ ಕುವೆಂಪು, ಮಾಸ್ತಿ, ಬೇಂದ್ರೆ, ಕಾರಂತರ ಸಾಹಿತ್ಯ ಕೃತಿಗಳು ಸ್ವಾತಂತ್ರ್ಯ ಚಳುವಳಿಯನ್ನು ಹುರಿದುಂಬಿಸಿದವು. ಈ ಕಾಲದ ಅನೇಕ ಬರಹಗಾರರು ಪಶ್ಚಿಮದ ವಸಾಹತು ಶಿಕ್ಷಣದ ಬಲದಿಂದಲೇ ಏಟಿಗೆ-ಎದುರೇಟು ಕೊಟ್ಟದ್ದಿದೆ.

**ಸಮಕಾಲೀನ ಸಾಹಿತ್ಯ ಉಂಟುಮಾಡಿರುವ ಪರಿವರ್ತನೆಗಳು**

ಮೂರ್ತರೂಪದ ಸಾಹಿತ್ಯದ ಮೂಲಕ ಅಮೂರ್ತ ಸ್ವರೂಪದ ಪರಿಣಾಮಗಳು ಜಗತ್ತಿನೆಲ್ಲೆಡೆ ಸಾಧಿತವಾಗುತ್ತಲೇ ನಡೆದಿದೆ. ೧೭೮೯ರ ಫ್ರಾನ್ಸ್ ಮಹಾಕ್ರಾಂತಿ ಮತ್ತು ೧೯೧೭ರ ರಷ್ಯಾ ಕ್ರಾಂತಿಗಳ ಮೂಲಕ ವಿಶ್ವದೆಲ್ಲೆಡೆ ಹರಡಿಕೊಂಡ ಪ್ರಜಾತಂತ್ರ, ಸಮಾಜವಾದ, ಸಮತಾವಾದದಂತಹ ತತ್ವಗಳು ಮನುಷ್ಯ ಬದುಕಿನ ಚಿಂತನೆಯ ದಿಕ್ಕನ್ನೇ ಬದಲಿಸಿದವು. ಶ್ರೇಷ್ಠ ಸಾಹಿತ್ಯ ಕೃತಿಗಳು ಜೀವನ ಮೌಲ್ಯವನ್ನು ಎತ್ತಿಹಿಡಿಯುವಂತಹ ತತ್ವವಾದಗಳನ್ನು ದೇಶ-ಕಾಲ ಮೀರಿ ಜನರಿಗೆ ತಲುಪಿಸಿದವು. ಭಾರತದಂತಹ ಅಭಿವೃದ್ಧಿ ಶೀಲ ರಾಷ್ಟ್ರಗಳ ನಿರಂತರ ಸಮಸ್ಯೆಯಾದ ಮತೀಯ ಸಂಘರ್ಷ, ಮೂಢನಂಬಿಕೆಗಳು ಸಾಹಿತ್ಯದ ಮೂಲಕ ಕಟು ವಿಮರ್ಶೆಗೆ ಒಳಗಾದದ್ದು ನಮ್ಮ ಕಾಲದ ಮಹತ್ವದ ಸಂಗತಿ. ಸಟಾನಿಕ್ ವರ್ಸಸ್ (ಸಲ್ಮಾನ್ ರಶ್ದಿ), ಮಹಾಚೈತ್ರ (ಎಚ್. ಎಸ್. ಶಿವಪ್ರಕಾಶ್), ಒಡುವ ಆಟ (ಶಿವರಾಮ ಕಾರಂತ), ಲಜ್ಜಾ (ತಸ್ಲೀಮಾ ನಸರೀನ್), ಮಾರ್ಗ (ಎಂ.ಎಂ. ಕಲ್ಬುರ್ಗಿ) - ಇಂತಹ ಕೃತಿಗಳು ನಮ್ಮ ಅಭಿವೃದ್ಧಿಗೆ ಮಾರಕವಾದ ಮತೀಯವಾದದ ಬುಡಕ್ಕೇ ಕೈಹಾಕಿದವು. ಇವು ಒಂದೊಂದೂ ವಿವಾದವನ್ನು ಸೃಷ್ಟಿಸಿದ ಕೃತಿಗಳಾಗಿದ್ದರೂ ತಮ್ಮೊಳಗೆ ಹಿಡಿದಿಟ್ಟುಕೊಂಡಿರುವ ಸತ್ಯಗಳಿಂದ ಸೂಕ್ಷ್ಮ ಪರಿವರ್ತನೆಯಂತೂ ಸಾಧ್ಯವಾಗಿದೆ.

ಇನ್ನು ೧೯೭೦-೮೦ರ ದಶಕಗಳಲ್ಲಿ ಭಾರತದಾದ್ಯಂತ ಶೋಷಿತವರ್ಗದ ಧ್ವನಿಯಾಗಿ ಸಾಹಿತ್ಯ ಸ್ಪಷ್ಟರೂಪ ಪಡೆಯಿತು. ಆಫ್ರಿಕಾದ ಕಪ್ಪು ಜನರ ಅಭಿವ್ಯಕ್ತಿ ಮಾದರಿಯಾಗಿ ಕನ್ನಡದ ದಲಿತ-ಬಂಡಾಯ, ಮರಾಠಿ ದಲಿತ ಪ್ಯಾಂಥರ್ಸ್, ಆಂಧ್ರದ ದಿಗಂಬರ ಸಾಹಿತ್ಯ ಚಳುವಳಿ ರೂಪದಲ್ಲಿ ಸಂಘಟನೆಗೊಂಡವು. ಈ ಪಂಥದ ಸಾಹಿತ್ಯ ಕೆಳವರ್ಗದ ಆಶಯಗಳಿಗೆ ಕನ್ನಡಿಯಾಯಿತು. ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳಿಗಾಗಿ ಶೋಷಕ ಪ್ರವೃತ್ತಿಯನ್ನೇ ರೂಢಿಸಿಕೊಂಡು ಬಂದಿದ್ದ ಒಂದು ವರ್ಗಕ್ಕೆ ಸಾಹಿತ್ಯದ ಮೂಲಕ ಉಂಟಾಗುತ್ತಿದ್ದ ಇಂತಹ ಎಚ್ಚರದ ಸ್ಥಿತಿಯನ್ನು ಗೇಲಿ ಮಾಡಲಾಯಿತು. 'ಚಳುವಳಿ ರೂಪದ ಸಾಹಿತ್ಯ ಸಾಹಿತ್ಯವೇ ಅಲ್ಲ' (ಎಸ್. ಎಲ್. ಭೈರಪ್ಪ) ಎಂದು ಸಮಕಾಲೀನ ದಲಿತ - ಬಂಡಾಯ ಸಾಹಿತ್ಯವನ್ನು ಹೀಗಳೆಯಲಾಯಿತು. ಹೀಗೆ ಭೈರಪ್ಪ, ಡಾ.ನಾ. ಮೊಗಸಾಲೆಯಂತಹ ಪುರೋಹಿತಶಾಹಿ ಬರಹಗಾರರ ಪ್ರತಿಭಟನೆಯನ್ನು ಮೀರಿ ಕನ್ನಡ ಸಾಹಿತ್ಯ ಮುನ್ನಡೆದಿದೆ. ದಲಿತ - ಬಂಡಾಯ ಸಾಹಿತ್ಯ ಚಳುವಳಿಯನ್ನೇ ಅಲ್ಲಗಳೆಯುವ ಅನೇಕರು ಈಚೆಗೆ ಬರೆಯುತ್ತಿರುವ ಮೊಗಳ್ಳಿ ಗಣೇಶ, ಅಮರೇಶ್ ನುಗಡೋಣಿ, ನಟರಾಜ ಹುಳಿಯಾರ ಮುಂತಾದವರ ಸಾಹಿತ್ಯವನ್ನೊಮ್ಮೆ ಕಣ್ಣಾಡಿಸಬೇಕು.

ಇಂದು ಸಾಹಿತ್ಯ ಸಂವೇದನೆಗಳು ಉಂಟುಮಾಡಿರುವ ಪರಿಣಾಮಗಳು ಅಗಾಧ. 'ಸಬಾಲ್ಟರ್ನ್ ಸ್ಟಡೀಸ್', 'ಮಾನವ ಮುಖಿ ಅಧ್ಯಯನ', 'ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು' ಮುಂತಾದ ಚಿಂತನೆಗಳು ರೂಪುಗೊಳ್ಳುವಿಕೆಯ ಹಿಂದೆ ಶ್ರೇಷ್ಠ ಸಾಹಿತ್ಯ ಕೃತಿಗಳ ಆಶಯವಿದೆ. ವಾರ್ ಆ್ಯಂಡ್ ಪೀಸ್ (ಟಾಲ್‌ಸ್ಟಾಯ್), ಅನ್‌ಟು ದಿಸ್ ಲಾಸ್ಟ್ (ರಸ್ಕಿನ್), ವೇಸ್ಟ್ ಲ್ಯಾಂಡ್ (ಎಲಿಯಟ್), ಮಲೆಗಳಲ್ಲಿ ಮದುಮಗಳು (ಕುವೆಂಪು), ಒಡಲಾಳ (ದೇವನೂರು ಮಹಾದೇವ) ಮುಂತಾದ ಅನೇಕ ಕೃತಿಗಳು ನಮ್ಮ ಕಾಲದ ಎಲ್ಲ ಬಗೆಯ ಜ್ಞಾನ ಶಿಸ್ತುಗಳಿಗೂ ಆಕರವಾಗಬಲ್ಲವು.

ಹೀಗೆ ಸಾಹಿತ್ಯ ಸದಾ ಬಹುಮುಖೀ ನೆಲೆಯ ಆಳ ಹರವುಗಳನ್ನು ತನ್ನಲ್ಲಿ ಹುದುಗಿಸಿಕೊಂಡು ಅಭಿವ್ಯಕ್ತಗೊಳ್ಳುತ್ತದೆ. ಮುಖ್ಯವಾಗಿ ಅದು ಒಂದೊಂದು ಸಂದರ್ಭದಲ್ಲಿ ಚಳುವಳಿ ರೂಪದಲ್ಲಿ ಸಂಘಟನೆಗೊಂಡು ಮಲೆತುನಿಂತ ಸಮಾಜವನ್ನು ಮತ್ತು ಒಟ್ಟು ಬದುಕನ್ನು ಚಲನಶೀಲಗೊಳಿಸುತ್ತದೆ.

ನಾಗಭೂಷಣ ಪಾಟೀಲ
ಸಂಶೋಧನಾ ವಿದ್ಯಾರ್ಥಿ, ಲೋಹಿಯಾ ಅಧ್ಯಯನ ಪೀಠ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬, ಬಳ್ಳಾರಿ ಜಿಲ್ಲೆ

# ನಿಯಂತ್ರಿತ ರಕ್ಷಣೆ : ಆರೋಗ್ಯ ಕ್ಷೇತ್ರದಲ್ಲಿ ಖಾಸಗೀಕರಣ

ಭಾರತದಲ್ಲಿ ಜನಾರೋಗ್ಯ ಸುಧಾರಿಸುವ ಪ್ರಯತ್ನಗಳು ಸಮರ್ಪಕವಾಗಿಲ್ಲ. ಇಂತಹ ಸಂದರ್ಭದಲ್ಲಿ ಇದನ್ನೇ ನೆಪ ಮಾಡಿ ಜನಾರೋಗ್ಯದ ಹೆಸರಿನಲ್ಲಿ ಲಾಭಗಳಿಸುವ ಪ್ರಯತ್ನಗಳು ನಮ್ಮ ದೇಶಕ್ಕೆ ರಫ್ತಾಗುತ್ತಿವೆ. ಇವನ್ನು ಅಮೆರಿಕದಲ್ಲಿ ನಿಯಂತ್ರಿತ ರಕ್ಷಣೆ ಪ್ರಯತ್ನ ಎಂದು ಕರೆಯುತ್ತಾರೆ.

**ಜನಾರೋಗ್ಯ**

ಜನಾರೋಗ್ಯ ಸುಧಾರಣೆ ಮಾಡಲು ಕೇವಲ ಆರೋಗ್ಯ ಸೇವೆಗಳು ದೊರೆಯುವಂತೆ ಮಾಡುವುದಲ್ಲದೆ ರೋಗ ಪ್ರತಿಬಂಧನೆ, ಹಾಗೂ ಆರೋಗ್ಯ ವೃದ್ಧಿಗೂ ಗಮನ ಕೊಡಬೇಕಾಗುತ್ತದೆ. ಜನರ ಜೀವನಮಟ್ಟ ಸುಧಾರಿಸಿ, ಸಾಕ್ಷರತೆ ಹೆಚ್ಚಿಸಿ, ಜೀವನದ ಅಗತ್ಯತೆಗಳನ್ನು ಪೂರೈಸಿದಾಗ ಮಾತ್ರ ಜನಾರೋಗ್ಯ ಸುಧಾರಿಸಲು ಸಾಧ್ಯ. ಜನಾರೋಗ್ಯ ಸುಧಾರಣೆ ಎಲ್ಲ ಚುನಾಯಿತ ಸರಕಾರಗಳ ಜವಾಬ್ದಾರಿ. ವಿಶ್ವ ಆರೋಗ್ಯ ಸಂಸ್ಥೆ ದೇಶಗಳ ಜನಾರೋಗ್ಯ ಸುಧಾರಣೆಯ ಪ್ರಯತ್ನಕ್ಕೆ ಸಹಾಯ ಮಾಡುತ್ತಾ ಬಂದಿದೆ. ಇಂದು ಸಾರ್ವಜನಿಕ ಕ್ಷೇತ್ರ ಜನಾರೋಗ್ಯ ಸುಧಾರಣೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ.

ಆದರೆ ಸರಕಾರಗಳ ಖಾಸಗೀಕರಣ ನೀತಿಯಿಂದಾಗಿ ಈ ಸಾರ್ವಜನಿಕ ಕ್ಷೇತ್ರದ ಕಾರ್ಯಾಚರಣೆ ಸಮರ್ಪಕವಾಗಿಲ್ಲ. ಆರೋಗ್ಯ ಸುಧಾರಣೆಯ ಮುಖ್ಯ ಅಂಶಗಳನ್ನು ಕಡೆಗಣಿಸಿ, ನೆಪಮಾತ್ರಕ್ಕಷ್ಟೇ ಆರೋಗ್ಯ ಸುಧಾರಣೆ ಕಾರ್ಯಕ್ರಮ ಜರುಗುತ್ತಲಿದೆ.

**ಖಾಸಗೀಕರಣ**

ಇತ್ತೀಚೆಗೆ ಭಾರತ ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ಜಾಗತೀಕರಣ, ಉದಾರೀಕರಣ, ಖಾಸಗೀಕರಣ ನೀತಿಗಳನ್ನು ಅನುಸರಿಸುತ್ತಿದೆ. ಖಾಸಗೀಕರಣದಲ್ಲಿ ಸರಕಾರೀ ಕ್ಷೇತ್ರದ ಮಹತ್ವವನ್ನು ಕಡೆಗಣಿಸಲಾಗುವುದು, ಹಾಗೂ ಖಾಸಗೀ ಕ್ಷೇತ್ರದ ಮೇಲೆ ಇದ್ದ ಹಿಡಿತ ಸಡಿಲಗೊಳ್ಳುವುದನ್ನು ಸಾಧಿಸಲಾಗುತ್ತದೆ.

ಯೂರೋಪ್ ಹಾಗೂ ಅಮೆರಿಕೆಯಲ್ಲಿ ಇಂದಿಗೂ ಆರೋಗ್ಯಕ್ಷೇತ್ರ ಸಾರ್ವಜನಿಕ ಕ್ಷೇತ್ರದ ಹಿಡಿತದಲ್ಲಿದೆ. ಆದರೆ ಭಾರತದಲ್ಲಿ ಸಾರ್ವಜನಿಕ ಕ್ಷೇತ್ರದ ಹಿಡಿತ ಬಹಳ ಕಡಿಮೆ ಇದ್ದರೂ, ಈ ಹೊಸ ನೀತಿಯಿಂದಾಗಿ, ಖಾಸಗೀಕರಣವನ್ನು ಹೆಚ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ. ನಿಯಂತ್ರಿತ ರಕ್ಷಣೆಯ ಪ್ರಯತ್ನ ಖಾಸಗೀಕರಣವನ್ನು ವೈಭವೀಕರಿಸುವ ಪ್ರಯತ್ನವಾಗಿದೆ.

ಈಗಾಗಲೇ ಸಾರ್ವಜನಿಕ ಕ್ಷೇತ್ರವು ಆರೋಗ್ಯ ಕ್ಷೇತ್ರದಲ್ಲಿ ಕೆಲಸಮಾಡುತ್ತಿದೆ. ಅನೇಕ ದೇಶಗಳಲ್ಲಿ (ಚಿಲಿ, ಇಕ್ವೆಡೋರ್) ಈ ಕ್ಷೇತ್ರದಲ್ಲಿ ಸರಕಾರ ಸಾಕಷ್ಟು ಹಣ ಹೂಡಿ, ಒಳ್ಳೆಯ ತಳಿರಚನೆ ನಿರ್ಮಿಸಿದೆ. "ಸಾರ್ವಜನಿಕ ಕ್ಷೇತ್ರ ಸರಿಯಾಗಿ ಕೆಲಸಮಾಡುತ್ತಿಲ್ಲ, ಖಾಸಗೀ ಕ್ಷೇತ್ರ ದಕ್ಷ" ಎಂಬ ವಿಚಾರದ ಆಧಾರದ ಮೇಲೆ, ಕೆಲವು ಸಾರ್ವಜನಿಕ ಆಸ್ಪತ್ರೆಗಳನ್ನು ಖಾಸಗೀಕ್ಷೇತ್ರದ ಕೆಲವು ದೊಡ್ಡ ಕಂಪನಿಗಳು ಆರಿಸಿಕೊಂಡು ಅಲ್ಲಿ ತಮ್ಮ ಕಾರ್ಯಾಚರಣೆ ಪ್ರಾರಂಭಿಸುತ್ತಿವೆ. ಮೊದಲಿಗೆ ಅಲ್ಲಿ ಸಾಕಷ್ಟು ಹಣ ಹೂಡುತ್ತವೆ. ಹಣ ಹೂಡಲು ನೀಡಿ ದೇಶದವರಿಗೆ. ಆ ದೇಶದ ಶ್ರೀಮಂತರಿಗೆ ಮಾತ್ರ ಸಾಧ್ಯ. ಶೇರುಗಳ ಮುಖಾಂತರ ಸಾಕಷ್ಟು ಹಣ ಸೇರಿಸಿ, ಅಲ್ಲಿ ಕಾರ್ಯಾರಂಭ ಮಾಡುತ್ತಾರೆ ಹಾಗೂ ಸಾರ್ವಜನಿಕ ಆಸ್ಪತ್ರೆಗಳನ್ನು ಖಾಸಗೀ ಹೈಟೆಕ್ ಆಸ್ಪತ್ರೆಗಳನ್ನಾಗಿ ಪರಿವರ್ತಿಸುತ್ತಾರೆ. ಈಗಾಗಲೇ ಹಣ ಹೂಡಿ ತಳರಚನೆ ಮಾಡಿದ ಸಾರ್ವಜನಿಕ ಕ್ಷೇತ್ರದ ಮೇಲ್ವಿಚಾರಣೆ ಖಾಸಗಿ ಕ್ಷೇತ್ರದ ಸಂಸ್ಥೆಗಳಿಗೆ ದೊರೆತಂತಾಗುತ್ತದೆ. ಸರಕಾರದಿಂದ ಈ ಬದಲಾವಣೆಗಳು ತೆರಿಗೆ ರಿಯಾಯಿತಿಯನ್ನು ಪಡೆಯುತ್ತವೆ.

**ಬದಲಾವಣೆ**

ನಂತರ ಆಸ್ಪತ್ರೆಗಳ ಹೊಸ ಆಡಳಿತ ಕೆಲವು ಬದಲಾವಣೆಗಳನ್ನು ಮಾಡುತ್ತದೆ.

ಉದಾಹರಣೆಗೆ :

ಚಿಕಿತ್ಸೆಗೆ ಹಣ ಕಟ್ಟಬೇಕು.

ಕೆಲವೇ ರೋಗಗಳನ್ನು ಗುಣಪಡಿಸುವುದಕ್ಕೆ ಪ್ರಾಮುಖ್ಯತೆ (ರೋಗ ಪ್ರತಿಬಂಧನ, ಆರೋಗ್ಯ ವೃದ್ಧಿಯನ್ನು ಕಡೆಗಣಿಸಲಾಗುವುದು, ಚಿಕಿತ್ಸೆಯ ಗುಣಮಟ್ಟ ಇಳಿಮುಖವಾಗುವುದು)

> *ಖಾಸಗೀಕರಣ ನೀತಿ ಕೇವಲ ಕೆಲವೇ ಜನರ ಆರ್ಥಿಕ ಲಾಭವನ್ನು ಆಧರಿಸಿದ್ದು. ಇದರಿಂದ ಜನಾರೋಗ್ಯ ಸುಧಾರಣೆ ಸಾಧ್ಯವಿಲ್ಲ. ಆರೋಗ್ಯದ ವಿಷಯದಲ್ಲಿ ಸುಧಾರಣೆ ನೀತಿಗಿಂತ ಭದ್ರವಾದ ತಳಹದಿಯನ್ನು ನಿರ್ಮಿಸಬೇಕಾಗುತ್ತದೆ. ನಿಯಂತ್ರಿತ ರಕ್ಷಣೆ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಧೋರಣೆ. ಅದು ಮೂರನೇ ಜಗತ್ತಿನ ಬಿಕ್ಕಟ್ಟನ್ನು ಪರಿಹರಿಸುತ್ತದೆ ಎಂದರೆ ಅದು ಹಾಸ್ಯಾಸ್ಪದ.*

ಕ್ಷೇಮಾಭಿವೃದ್ಧಿಯ ಹಣ ಹೂಡಿಕೆಯನ್ನು ಕಡಿಮೆಮಾಡುತ್ತಾರೆ. ಕುಡಿಯುವ ನೀರು, ನೈರ್ಮಲ್ಯ ಸಾಧನೆಗೆ ಕಡಿಮೆ ಹಣ.

ತಾಂತ್ರಿಕತೆ ಆಧಾರಿತ ಆರೋಗ್ಯ ಸೇವೆಗಳ ಹೆಚ್ಚಳ (ಆದರೆ ಸಂಶೋಧನೆಯನ್ನು ಕಡೆಗಣಿಸಲಾಗುವುದು)

ಸಮಗ್ರ ಆರೋಗ್ಯ ಸುಧಾರಣೆ ಬದಲು, ಅಪೂರ್ಣ ಮಧ್ಯಸ್ತಿಕೆಯ ತಂತ್ರಗಳ ಬಳಕೆ. ಉದಾ : ಗೋಬಿ (ಮಕ್ಕಳ ಆರೋಗ್ಯ ಸುಧಾರಣೆಗೆ ಭಾರತದಲ್ಲಿ ವಿಶ್ವಬ್ಯಾಂಕ್ ರಚಿಸಿದ ತಂತ್ರ)

ಆರೋಗ್ಯ ಪಾಲನೆಯನ್ನು ಕೇಳಿ ಪಡೆಯಬೇಕು; ಎಲ್ಲರಿಗೂ ಆರೋಗ್ಯ ದೊರಕುವಂತಿಲ್ಲ.

ವೈದ್ಯವೃತ್ತಿಗೆ ಮಹತ್ವ ಕಡಿಮೆಯಾಗುತ್ತದೆ; ಆಡಳಿತಕ್ಕೆ ಹೆಚ್ಚು ಮಹತ್ವ ಉಂಟಾಗುತ್ತದೆ; ವೈದ್ಯರಿಗೆ ಸ್ವಾತಂತ್ರ್ಯ ಇರುವುದಿಲ್ಲ.

ಅನೇಕ ಜನರ ಗುಂಪುಗಳನ್ನು ಕಡೆಗಣಿಸಲಾಗುವುದು.

ನಿಜವಾದ ವೈದ್ಯಕೀಯ ಸೇವೆಗಳಿಗೆ ಕಡಿಮೆ ಖರ್ಚು ಮಾಡಿ ಕೇವಲ ಆಡಳಿತಕ್ಕೆ ಹಾಗೂ ಹಣ ಹೂಡಿದವರಿಗೆ ಲಾಭ ಕೊಡಲು ಹೆಚ್ಚು ಖರ್ಚುಮಾಡಲಾಗುತ್ತದೆ.

ಇಲ್ಲಿ ಸ್ವತಂತ್ರರಾಗಿ ಚಿಕಿತ್ಸೆ ಪಡೆಯಲು, ಪ್ರಶ್ನೆ - ಪರೀಕ್ಷೆಗಳಿಗೆ ಒಳಗಾಗಬೇಕಾಗುತ್ತದೆ ಹಾಗೂ ಈ ಪ್ರಶ್ನೆ - ಪರೀಕ್ಷೆಯಲ್ಲಿ ತಿರಸ್ಕರಿಸಲ್ಪಡುವವರ ಸಂಖ್ಯೆ ಶೇ. ೩೦ ರಿಂದ ೪೦ ರಷ್ಟು.

ಈ ಆಸ್ಪತ್ರೆಗಳಲ್ಲಿ ಆರೋಗ್ಯವಂತರನ್ನು ದಾಖಲಿಸಿಕೊಳ್ಳಲಾಗುವುದು. ಕಾಯಿಲೆ ಇದ್ದವರನ್ನು, ವೃದ್ಧರನ್ನು ದಾಖಲಿಸಲಾಗುವುದಿಲ್ಲ. ಇವರು ಇತರೇ ಸಾರ್ವಜನಿಕ ಆಸ್ಪತ್ರೆಗಳಿಗೆ ಹೋಗಬೇಕಾಗುತ್ತದೆ.

ರಾಷ್ಟ್ರದ ಶಾಸನ ಮಾಡುವವರಿಗೆ ತೀರ್ಮಾನಿಸುವ ಹಕ್ಕಿಲ್ಲ; ಇದೊಂದು ಪ್ರಜಾಪ್ರಭುತ್ವಕ್ಕೆ ವಿರುದ್ಧವಾದ ವ್ಯವಸ್ಥೆ.

ಈ ವ್ಯವಸ್ಥೆಯಲ್ಲಿ ಹಣ ಹೂಡಿಕೆಗೆ ಹೆಚ್ಚು ಮಹತ್ವವಿದೆ.

ಅಮೆರಿಕೆಯಲ್ಲಿ ಈ ವ್ಯವಸ್ಥೆ ಜಾರಿಯಲ್ಲಿದೆ. ಇದು ವ್ಯಾಪಕವಾಗಿ ಬೆಳೆದಿರುವುದರಿಂದ ಲಾಭ ಗಳಿಕೆಯಲ್ಲಿ ಕಡಿತ ಉಂಟಾಗಿದೆ. ಕಾರಣ, ಪೈಪೋಟಿ! ಲಾಭ ಗಳಿಸಲು ಹೊಸ ವಿಧಾನಗಳನ್ನು ಕಂಡುಹಿಡಿಯಲಾಗುತ್ತಿದೆ ಹಾಗೂ ಲಾಭ ಗಳಿಸಿದ ನಂತರ ೩-೪ ವರ್ಷದಲ್ಲಿ ಆ ಸಂಸ್ಥೆಯನ್ನು ಮಾರಿ ಹೊಸ ಸಂಸ್ಥೆಯನ್ನು ಪ್ರಾರಂಭಿಸುವ ಪ್ರಯತ್ನಗಳಾಗುತ್ತಿವೆ. ಅಮೆರಿಕೆಯಲ್ಲಿ ಈ ನಿಯಂತ್ರಿತ ರಕ್ಷಣೆಯ ಪ್ರಯತ್ನಗಳು ಕೇವಲ ಕೆಲವರಿಗೆ ಲಾಭ ಗಳಿಸಲು ಸಹಾಯವಾಗಿವೆ. ಆದರೆ ಆ ದೇಶದಲ್ಲಿ ಈ ಪ್ರಯತ್ನಕ್ಕೆ ಇನ್ನು ಅವಕಾಶವಿಲ್ಲದಂತಾಗಿದೆ. ಆದ್ದರಿಂದ ಈ ಪ್ರಯತ್ನವನ್ನು ರಫ್ತು ಮಾಡಲಾಗುತ್ತಿದೆ - ಗ್ರಾಹಕ ವಸ್ತುಗಳನ್ನು ರಫ್ತು ಮಾಡಿದಂತೆ ! ೮೦ರ ದಶಕದಲ್ಲಿ ಇದನ್ನು ಯೂರೋಪ್ ದೇಶಗಳಿಗೆ ರಫ್ತು ಮಾಡಿದಾಗ ಬ್ರಿಟನ್ನಿನ ಥ್ಯಾಚರ್ ಸರಕಾರ ಇದನ್ನು ಬೆಂಬಲಿಸಿತು. ಆದರೆ ಇತ್ತೀಚಿಗಿನ ದಿನಗಳಲ್ಲಿ ಅದನ್ನು ಬದಲಿಸಿದ್ದು ಆಗಿದೆ. ಈಗ ಲ್ಯಾಟಿನ್ ಅಮೆರಿಕಾ ಹಾಗೂ ಏಶಿಯಾದ ದೇಶಗಳಿಗೆ ರಫ್ತು ಮಾಡುವ ಪ್ರಯತ್ನ ನಡೆಯುತ್ತಿದೆ. ಲ್ಯಾಟಿನ್ ಅಮೆರಿಕೆಯಲ್ಲಿ ಸಾರ್ವಜನಿಕ ಕ್ಷೇತ್ರದಲ್ಲಿ ಸರಕಾರ ಹೆಚ್ಚು ಹಣ ಹೂಡಿದೆ. ಈ ಹಣವನ್ನು ತಮ್ಮ ಬಂಡವಾಳವಾಗಿಸಿಕೊಳ್ಳಲು ಅಮೆರಿಕದ ಅಧಿಕಾರಿಗಳು ಹಪಹಪಿಸುತ್ತಿದ್ದಾರೆ ಹಾಗೂ ಜಾಹಿರಾತು ಮುಖಾಂತರ ಹಣ ಹೂಡಲು ಜನರನ್ನು ಆಹ್ವಾನಿಸುತ್ತಿದ್ದಾರೆ. ಚಿಲಿ ದೇಶದಲ್ಲೂ ಪಿನೋಶೇ ಅಧಿಕಾರದಲ್ಲಿ ಸರಕಾರೀ ಹಣವನ್ನು ಖಾಸಗೀ ಸಂಸ್ಥೆಗಳಿಗೆ ವರ್ಗಾಯಿಸಿ ಬಹುರಾಷ್ಟ್ರೀಯ ಕಂಪನಿಗಳು ಆ ಹಣದ ಉಪಯೋಗ ಪಡೆಯುವಂತೆ ಮಾಡಲಾಗಿತ್ತು. ಇದೀಗ ಭಾರತದ ಸರದಿ. ಈಗಾಗಲೇ ಭಾರತದಲ್ಲಿ ಕಾರ್ಪೊರೇಟ್ ಆಸ್ಪತ್ರೆಗಳು ತಮ್ಮ ಕಾರ್ಯಾಚರಣೆಯನ್ನು ಪ್ರಾರಂಭಿಸಿವೆ. ನಿಯಂತ್ರಿತ ರಕ್ಷಣೆ ಪ್ರಭಾವ ಈ ಆಸ್ಪತ್ರೆಗಳ ಮೇಲೆ ಈಗ ಕಂಡುಬರದಿದ್ದರೂ ಈ ಆಸ್ಪತ್ರೆಗಳ ಕಾರ್ಯವೈಖರಿ ನಿಯಂತ್ರಿತ ರಕ್ಷಣೆಯನ್ನು ಆಹ್ವಾನಿಸುವಂತಿದೆ.

ಜಗತ್ತಿನಾದ್ಯಂತ ಬಹುರಾಷ್ಟ್ರೀಯ ಕಂಪೆನಿಗಳು ಔಷಧಿ ಕ್ಷೇತ್ರದಿಂದ ಆರೋಗ್ಯ ಕ್ಷೇತ್ರಕ್ಕೆ ಕಾಲಿಡುತ್ತಿವೆ. ಸಾರ್ವಜನಿಕ

**ಡಾ|| ಪ್ರಕಾಶ್ ಸಿ. ರಾವ್**

ಕ್ಷೇತ್ರದ ಸುರಕ್ಷತೆಯ ನಿಧಿಯನ್ನು ಹೊಸ ಮಂತ್ರವಾದ ನಿಯಂತ್ರಣ ಪಾಲನೆಗೆ ವರ್ಗಾಯಿಸಲು ವಿಶ್ವ ಬ್ಯಾಂಕ್ ಎಲ್ಲ ಸರ್ಕಾರಗಳಿಗೆ ಪ್ರೋತ್ಸಾಹ ನೀಡುತ್ತಿದೆ. ಖಾಸಗಿ ಕ್ಷೇತ್ರ ದಕ್ಷ, ಆದರೆ ಸಾರ್ವಜನಿಕ ಕ್ಷೇತ್ರಗಳಲ್ಲಿ ಭ್ರಷ್ಟಾಚಾರ ಹಾಗೂ ಆರೋಗ್ಯ ಸೇವೆಗಳು ಕುಂಠಿತಗೊಂಡಿವೆ ಎಂದು *ಆರೋಗ್ಯದಲ್ಲಿ ಹಣ ಹೂಡಿಕೆ* ಎಂಬ ವಿಶ್ವ ಬ್ಯಾಂಕ್ ವರದಿಯಲ್ಲಿ (೧೯೯೩) ಪ್ರತಿಪಾದಿಸಲಾಗಿದೆ. ಈ ವರದಿ ಖಾಸಗೀ ಇನ್ಶೂರೆನ್ಸ್ ಹಾಗೂ ಮಾರುಕಟ್ಟೆಯಲ್ಲಿ ಪೈಪೋಟಿಯನ್ನು ಬೆಂಬಲಿಸುತ್ತದೆ.

**ವಿರೋಧ**

ಈ ಹೊಸ ನೀತಿ ಸಾರ್ವಜನಿಕ ಹಣವನ್ನು ಕಬಳಿಸುವುದಲ್ಲದೆ, ಜನಾರೋಗ್ಯಕ್ಕೆ ಮಹತ್ವ ಕೊಡುವುದಿಲ್ಲವೆಂಬ ಸಂಗತಿ ಎಲ್ಲರಿಗೂ ತಿಳಿದ ವಿಷಯ. ಲ್ಯಾಟಿನ್ ಅಮೆರಿಕೆಯ ತಜ್ಞರು ವಿಶ್ವ ಬ್ಯಾಂಕ್ ನೀತಿಯನ್ನು ವಿಮರ್ಶಿಸುತ್ತ ''ವಿಶ್ವ ಬ್ಯಾಂಕ್ ಆರೋಗ್ಯವನ್ನು ಒಂದು ಖಾಸಗೀ ವಿಷಯ ಹಾಗೂ ಆರೋಗ್ಯ ಪಾಲನೆ ಖಾಸಗೀ ಒಳಿತಿಗೆ ಎಂಬ ನೀತಿಯನ್ನು ಪ್ರತಿಪಾದಿಸುತ್ತದೆ'' ಎಂದು ಹೇಳಿದ್ದಾರೆ. ಇದರಂತೆಯೇ ಅನೇಕ ದೇಶಗಳಲ್ಲಿ ಇದರ ವಿರುದ್ಧ ಹೋರಾಟಗಳು ನಡೆದಿವೆ.

ಇಕ್ವೆಡೋರ್‌ನಲ್ಲಿ ಕಾರ್ಮಿಕರು, ವೈದ್ಯಕೀಯ ಶಿಕ್ಷಕರು ಹಾಗೂ ಸ್ಥಳೀಯ ಜನರ ಸಂಘಟನೆಗಳು ಈ ಯೋಜನೆಯನ್ನು ವಿರೋಧಿಸಿವೆ. ಬ್ರೆಝಿಲ್‌ನಲ್ಲಿ 'ರಾಷ್ಟ್ರೀಯ ದುಡಿಯುವ ಜನರ ಸಂಘಟನೆ' ಈ ಯೋಜನೆಯನ್ನು ವಿರೋಧಿಸಿ, ಆರೋಗ್ಯ ತಮ್ಮ ಹಕ್ಕು ಎಂದು ಹೋರಾಡುತ್ತಿದೆ. ಸಾವಿರಾರು ವೈದ್ಯರ ಸಂಘಟನೆಯಾದ 'ಯುನಿಮಡ್' ಸಹಿತ ಇದನ್ನು ವಿರೋಧಿಸಿದೆ. ಇದಲ್ಲದೆ, ಅರ್ಜೆಂಟೈನಾ, ಚಿಲಿ, ಕೊಲಂಬಿಯಾ ದೇಶಗಳಲ್ಲಿಯೂ ಕೂಡ ಈ ಹೊಸ ಯೋಜನೆಯ ವಿರುದ್ಧ ಪ್ರತಿಭಟನೆಗಳು ಜರುಗುತ್ತಿವೆ.

ನಿಯಂತ್ರಿತ ರಕ್ಷಣೆಯ ಯೋಜನೆ ಭಾರತಕ್ಕೂ ರಫ್ತಾಗುತ್ತದೆ. ಜನಹಿತ ದೃಷ್ಟಿಯ ಗ್ರಾಹಕ ರಕ್ಷಣೆ ಕಾಯಿದೆ ಬಂದಾಗ ಅದನ್ನು ವಿರೋಧಿಸಿದ ವೈದ್ಯರು ಈ ಜನವಿರೋಧಿ ಯೋಜನೆಗೆ ಹೇಗೆ ಪ್ರತಿಕ್ರಿಯಿಸುತ್ತಾರೋ ಕಾದು ನೋಡಬೇಕಾಗಿದೆ.

**ಈ ಹೊಸ ಯೋಜನೆಯನ್ನು ಜಾರಿಗೆ ತರುವಾಗ ಸೃಷ್ಟಿಸುವ ಮೌಢ್ಯಗಳು**

ಮಿಥ್ಯೆ ೧ : ಆರೋಗ್ಯಕ್ಕೆ ವಿಪತ್ತು ಬಂದಿರಲು ಆರ್ಥಿಕ ಪರಿಸ್ಥಿತಿಯೇ ಕಾರಣ.

ತಥ್ಯ : ವಿಪತ್ತು ಬಂದಿರಲು ತಪ್ಪು ಆರೋಗ್ಯ ನೀತಿಯೇ ಕಾರಣ.

ಮಿಥ್ಯೆ ೨ : ಹೊಸ ಆಡಳಿತ ವ್ಯವಸ್ಥೆ ಹೊಸ ಸಮಂಜಸ ವಿಧಾನವನ್ನು ಸೃಷ್ಟಿಸುತ್ತದೆ.

ತಥ್ಯ : ಈಗಿರುವ ಸಮಂಜಸ ವಿಧಾನವನ್ನು ಅಳಿಸಿ ಹಾಕುತ್ತದೆ.

ಮಿಥ್ಯೆ ೩ : ವೈದ್ಯಕೀಯ ತೀರ್ಮಾನಗಳಿಗಿಂತ, ಆಡಳಿತ ಮಂಡಳಿಯ ತೀರ್ಮಾನಗಳು ಬಿಕ್ಕಟ್ಟು ಬಗೆಹರಿಸಲು ಹೆಚ್ಚು ಪರಿಣಾಮಕಾರಿಯಾಗಿವೆ.

ತಥ್ಯ : ವೈದ್ಯಕೀಯ ಕ್ಷೇತ್ರದಲ್ಲಿ ಬಿಕ್ಕಟ್ಟು ಬಗೆಹರಿಸಲು ವೈದ್ಯಕೀಯ ತೀರ್ಮಾನಗಳೇ ಹೆಚ್ಚು ಸಮಂಜಸ.

ಮಿಥ್ಯೆ ೪ : ಪೈಪೋಟಿಯಿಂದ ಕಾರ್ಯ ಸಮರ್ಥತೆ ಹೆಚ್ಚುತ್ತದೆ. ವೈದ್ಯಕೀಯ ಹಾಗೂ ಆಡಳಿತ ವಿಷಯಗಳನ್ನು ಬೇರ್ಪಡಿಸಿದರೆ, ಕಾರ್ಯ ಸಮರ್ಥತೆ ಹೆಚ್ಚುತ್ತದೆ.

ತಥ್ಯ : ಸಮಾನ ಪೈಪೋಟಿಯಿಂದ ಕಾರ್ಯ ಸಮರ್ಥತೆ ಹೆಚ್ಚಬಹುದು; ಆದರೆ, ಅಸಮಾನತೆ ಇದ್ದಾಗ ಅದು ಸಾಧ್ಯವಿಲ್ಲ. ಇಲ್ಲಿಯವರೆಗೆ ವೈದ್ಯಕೀಯ ಸಂಸ್ಥೆಗಳಲ್ಲಿ, ವೈದ್ಯರೇ ಆಡಳಿತ ನಡೆಸುತ್ತಿದ್ದಾರೆ. ಆಡಳಿತ ನಡೆಸಲು ವೈದ್ಯರೂ ಸಮರ್ಥರು.

## ಅಲ್ಲಮನಿಗೊಂದು ಪ್ರಶ್ನೆ

ಶಿಲೆಯೊಳಗೆ ಅಗ್ನಿ : ಕಾಣಲಹುದು
ಜಲದೊಳಗೆ ಪ್ರತಿಬಿಂಬ : ಕಾಣಲಹುದು
ಬೀಜದೊಳಗೆ ವೃಕ್ಷ : ಕಾಣಲಹುದು



ಈ ಪದಾರ್ಥಗಳ ಉದ್ಧರಣೆಯಲಿ
ಕಾಣದಾದುದನ್ನು
ಹೇಳುವುದು ಉಂಟೇನು ?
ಇಹುದೆಂಬ ಅರಿವು ಬದಿಗಿಡು

— ಭಾವಜ್ಞ

ಮಿಥ್ಯೆ ೫ : ಆರೋಗ್ಯಕ್ಕೆ ಸಂಬಂಧಿಸಿದ ಮಾರುಕಟ್ಟೆಯನ್ನು ವೃದ್ಧಿಸಬೇಕು. ಏಕೆಂದರೆ, ಅದು ಗುಣಮಟ್ಟವನ್ನು ಹಾಗೂ ಬೆಲೆಗಳನ್ನು ನಿಯಂತ್ರಿಸುತ್ತದೆ.

ತಥ್ಯ : ಆರೋಗ್ಯದಲ್ಲಿಯ ಗುಣಮಟ್ಟವನ್ನು ಕಾಪಾಡಲು ಮಾರುಕಟ್ಟೆಯ ಬದಲು ಆರೋಗ್ಯ ನೀತಿ, ವೈದ್ಯರ ದಕ್ಷತೆ ಪ್ರಮುಖವಾಗುತ್ತದೆ.

ಮಿಥ್ಯೆ ೬ : ಖಾಸಗೀ ಆಡಳಿತವು ಸಾರ್ವಜನಿಕ ಕ್ಷೇತ್ರದ ಆಡಳಿತಕ್ಕಿಂತ ಹೆಚ್ಚು ಸಮರ್ಥ ಹಾಗೂ ಕಡಿಮೆ ಭ್ರಷ್ಟತೆಯುಳ್ಳದ್ದು.

ತಥ್ಯ : ಖಾಸಗೀ ಆಡಳಿತ ಕಡಿಮೆ ಭ್ರಷ್ಟತೆಯುಳ್ಳದ್ದೇನಲ್ಲ, ಆದರೆ ಅದು ಕೂಡಲೆ ದಿವಾಳಿಯಾಗುವ ಸಾಧ್ಯತೆ ಇದೆ. ಹೆಚ್ಚು ಸಮರ್ಥ ಎನ್ನುವುದರ ಬದಲು, ಹೆಚ್ಚು ಅಧಿಕಾರಶಾಹಿ ನೀತಿಯುಳ್ಳದ್ದು ಎನ್ನುವುದು ಸಮಂಜಸ.

ಮಿಥ್ಯೆ ೭ : ಕಾರ್ಮಿಕ ಸಂಬಂಧಗಳು ವಿಧೇಯತೆಯಿಂದ ಕೂಡಿರಬೇಕು. ಇದರಿಂದ ಕಾರ್ಯ ಸಮರ್ಥತೆ, ಉತ್ಪಾದನೆ, ಗುಣಮಟ್ಟ ಹೆಚ್ಚುತ್ತದೆ.

ತಥ್ಯ : ಕಾರ್ಮಿಕ ಸಂಬಂಧಗಳು ವಿಧೇಯತೆಯಿಂದಿರಬೇಕು ಎನ್ನುವುದಕ್ಕಿಂತ, ಕಾರ್ಮಿಕ-ಮಾಲಿಕ ಸಂಬಂಧಗಳು ಪರಸ್ಪರ ವಿಧೇಯತೆಯಿಂದ ಕೂಡಿರಬೇಕು !

ಮಿಥ್ಯೆ ೮ : ಪ್ರತಿಯೊಬ್ಬರೂ ಸಾಮಾಜಿಕ ಭದ್ರತೆಗೆ ಹಣ ಹೂಡಬೇಕು.

ತಥ್ಯ : ಸಾಮಾಜಿಕ ಭದ್ರತೆ ಸರಕಾರದ ಜವಾಬ್ದಾರಿ, ಆದ್ದರಿಂದ ಸರಕಾರ ಹಣ ಹೂಡಬೇಕು.

ಡಾ|| ಪ್ರಕಾಶ್ ಸಿ. ರಾವ್
ನಂ. ೭೩/೨, ೧ನೇ ರಿಸರ್ವಾಯರ್ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦




ದಿನಾಂಕ ೯, ೧೦ ಜೂನ್ ೨೦೦೧ರಂದು ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ನಡೆದ ಕನ್ನಡ ವೈದ್ಯ ಸಾಹಿತ್ಯ ಸಮ್ಮೇಳನದಲ್ಲಿ ಡಾ|| ಸಿ. ಆರ್. ಚಂದ್ರಶೇಖರ್ ಅವರನ್ನು ಸನ್ಮಾನಿಸಲಾಯಿತು. ಚಿತ್ರದಲ್ಲಿ ಡಾ|| ಆರ್. ಸಿ. ಅಗಡಿ, ಕರ್ನಾಟಕ ಸರ್ಕಾರದ ಸಚಿವ ಶ್ರೀ ಇನಾಂದಾರ್, ವಿದ್ಯಾವರ್ಧಕ ಸಂಘದ ಅಧ್ಯಕ್ಷ ಶ್ರೀ ಪಾಟೀಲ ಪುಟ್ಟಪ್ಪ ಮತ್ತು ಸ್ಥಳೀಯ ಶಾಸಕ ಶ್ರೀ ಬೆಲ್ಲದ ಇದ್ದಾರೆ. ಡಾ|| ಚಂದ್ರಶೇಖರ್‌ಅವರು ಈಗ ನಿಮ್ಹಾನ್ಸ್‌ನಲ್ಲಿ ಪ್ರಾಧ್ಯಾಪಕರಾಗಿ ಬಡ್ತಿ ಪಡೆದಿದ್ದಾರೆ.

# ವಿಚ್ಛೇದ್ಯ ಪ್ಲಾಸ್ಟಿಕ್ಕುಗಳು



ಪ್ರತಿಯೊಂದು ಸಮಾಜ ತನಗೆ ಬೇಕಾದ ಆಹಾರ, ಆಶ್ರಯ ಮತ್ತು ಆರೋಗ್ಯಕರ ಪರಿಸರ ಒದಗಿಸಲು ಪ್ರಯತ್ನಿಸುತ್ತದೆ. ಈ ಅಗತ್ಯಗಳು ಯಥೇಚ್ಛವಾಗಿ ಪೂರ್ತಿಯಾಗುವುದು ಖಾತ್ರಿಯಾದ ಬಳಿಕ ಸುಖವಾಗಿ ಹೇಗೆ ಇರಬೇಕು, ಅಧಿಕ ಅನುಕೂಲತೆ, ಸೌಕರ್ಯಗಳನ್ನು ಹೇಗೆ ಪಡೆಯಬೇಕು ಎಂಬುದರ ಕಡೆಗೆ ಲಕ್ಷ್ಯ ಹರಿಸುತ್ತದೆ. ಎಷ್ಟರಮಟ್ಟಿಗೆ ಈ ಇಚ್ಛೆ ಪೂರೈಸುತ್ತದೆ ಅನ್ನುವುದು ಜೀವನದ ಮಟ್ಟವನ್ನು ಅವಲಂಬಿಸಿರುತ್ತದೆ. ಈ ಸುಖ ಸೌಕರ್ಯಗಳನ್ನು ಪಡೆಯುವುದು ಅಷ್ಟೇನು ಕಷ್ಟದ್ದಾಗಲಿಕ್ಕಿಲ್ಲ. ಆದರೆ ಇವನ್ನು ಆಯ್ಕೆ ಮಾಡಿಕೊಳ್ಳುವುದು ಅವಶ್ಯವಾಗುತ್ತದೆ. ಏಕೆಂದರೆ ಒಂದನ್ನು ಪಡೆಯಬೇಕಾದರೆ ಮತ್ತೊಂದನ್ನು ಕಳೆದುಕೊಳ್ಳಬೇಕಾಗುತ್ತದೆ. ಇದಕ್ಕೆ ಪ್ಲಾಸ್ಟಿಕ್ಕಿಗಿಂತ ಉತ್ತಮ ಉದಾಹರಣೆ ಪ್ರಸ್ತುತ ಕಾಲದಲ್ಲಿ ಮತ್ತೊಂದಿರಲಿಕ್ಕಿಲ್ಲ.

ಮನುಷ್ಯ ಈಗ ಪಾಲಿ ಇಥಿಲೀನ್ ಪಾಕೀಟಿನಲ್ಲಿ ಹಾಲು ತರುತ್ತಾನೆ. ಪ್ಲಾಸ್ಟಿಕ್ ಕನ್ನಡಕ ಧರಿಸಿ ಪಾಲಿ ಎಸ್ಟರ್ ಬಟ್ಟೆ ತೊಟ್ಟು, ಪ್ಲಾಸ್ಟಿಕ್ಕಿನ ಪಾದರಕ್ಷೆ ಮೆಟ್ಟು ಪಾಲಿವಿನೈಲ್ ಕ್ಲೋರೈಡ್ ಚಾಪೆಯ ಮೇಲೆ ಕಾಲಿಟ್ಟು ಸಾಗುತ್ತಾನೆ. ಪಾಲಿಸ್ಟೈರೀನ್ ಆಸನಗಳ ಮೇಲೆ ಕೂಡುತ್ತಾನೆ. ಮೆಲಮೀನ್ ತಟ್ಟೆಗಳಲ್ಲಿ ಉಣ್ಣುತ್ತಾನೆ, ಲೋಟಗಳಲ್ಲಿ ಕುಡಿಯುತ್ತಾನೆ, ಪ್ಲಾಸ್ಟಿಕ್ ಗುಂಡಿಯನ್ನು ಒತ್ತುತ್ತಾನೆ, ಪ್ಲಾಸ್ಟಿಕ್ ಕೆಬಿನೆಟ್ ಉಳ್ಳ ಟೆಲಿವಿಜನ್, ಟೆಲಿಫೋನು ಬಳಸುತ್ತಾನೆ, ರಬ್ಬರೀಕೃತ ರಸ್ತೆಯ ಮೇಲೆ ಪಾಲಿ ಐಸೋಪ್ರೀನಿನ್ ಟಾಯರುಗಳುಳ್ಳ ವಾಹನಗಳನ್ನು ಓಡಿಸುತ್ತಾನೆ, ಪಾಲಿವಿನೈಲ್ ಎಸಿಟೇಟನಿಂದ ತಯಾರಿಸಿದ ಫ್ಲಾಪಿ ತಟ್ಟೆಗಳನ್ನು ಕಂಪ್ಯೂಟರಿಗೆ ಉಣ್ಣಿಸುತ್ತಾನೆ. ಅಂಗವಿಕಲರನ್ನು ನಡೆಯುವಂತೆ ಮಾಡಲು, ರಕ್ತನಾಳಗಳನ್ನು ಜೋಡಿಸಲು, ಪ್ಲಾಸ್ಟಿಕ್ಕನ್ನು ಬಳಸುತ್ತಾನೆ. ಗಾಸಿಯಾದ ಶ್ವಾಸನಾಳ, ಧ್ವನಿಪೆಟ್ಟಿಗೆ, ಗರ್ಭಕೋಶ ಮುಂತಾದ ಅಂಗಗಳ ಬದಲಾಗಿ ಪ್ಲಾಸ್ಟಿಕ್ ಅಂಗಗಳನ್ನು ಪ್ರತಿಸ್ಥಾಪಿಸಬಲ್ಲ. ಕಬ್ಬಿಣ ಹಾಗೂ ಮರದ ಬದಲಿಗೆ ರಚನಾಸಾಮಾಗ್ರಿಯಾಗಿ ಪ್ಲಾಸ್ಟಿಕ್ಕನ್ನು ಉಪಯೋಗಿಸಬಲ್ಲ.

ಡಾ॥ ಸರ್ವೋತ್ತಮ ಅಂಬೇಕರ

ಇಲ್ಲಿಯವರೆಗೆ ವಿವರಿಸಿದ ಉದಾಹರಣೆಗಳು ಪ್ಲಾಸ್ಟಿಕ್ಕಿನ ಅದ್ಭುತ ಪ್ರಪಂಚ ಮತ್ತು ಅದರಿಂದ ನಮಗೆ ಸಿಗುವ ಸುಖ, ಸೌಕರ್ಯಗಳ ಬಗ್ಗೆ ಅರಿವನ್ನುಂಟುಮಾಡುತ್ತವೆ. ಈ ಸುಖ ಸೌಕರ್ಯ ಪಡೆಯಲು ನಾವು ತೆರಬೇಕಾದ ಬೆಲೆ ಎಂದರೆ ಆರೋಗ್ಯಕರ ಪರಿಸರ. ಸೆಲುಲೋಸ್, ಪ್ರೋಟೀನ್ ಇಂಥ ನೈಸರ್ಗಿಕ ಪಾಲಿಮರುಗಳು ಸಹಜ ವಿಚ್ಛೇದನೆಗೊಳ್ಳಲ್ಪಟ್ಟು ನಿಸರ್ಗದ ಜೊತೆ ಲೀನವಾಗುತ್ತವೆ. ಪ್ಲಾಸ್ಟಿಕ್ ಆದರೋ ಹೀಗಾಗದು. ಈ ಅವಿಚ್ಛೇದನೆಯೇ ಅದರ ಅಸಂಖ್ಯ ಅನ್ವಯಗಳಿಗೆ ಕಾರಣ. ಎಂದೇ ಪ್ಲಾಸ್ಟಿಕ್ಕನ್ನು ಅವಿಚ್ಛೇದ್ಯ ಪಾಲಿಮರು ಅನ್ನುತ್ತಾರೆ. ಇತ್ತೀಚೆಗೆ ಪ್ಲಾಸ್ಟಿಕ್ಕುಗಳ ಬಳಕೆ ಎಷ್ಟು ತ್ವರಿತ ಗತಿಯಲ್ಲಿ ಹೆಚ್ಚುತ್ತಲಿದೆ ಅಂದರೆ ತ್ಯಾಜ್ಯ ಪ್ಲಾಸ್ಟಿಕ್ಕನ್ನು ತೊಲಗಿಸುವುದು ಅತ್ಯಂತ ಗಂಭೀರ ಸಮಸ್ಯೆಯಾಗಿದೆ. ಪ್ರತಿವರ್ಷ ಸಾವಿರಾರು ಮಿಲಿಯನ್ ಟನ್ ತ್ಯಾಜ್ಯ ಪ್ಲಾಸ್ಟಿಕ್ಕನ್ನು ಪರಿಸರದಲ್ಲಿ ಮಾನವ ಚೆಲ್ಲುತ್ತಲಿದ್ದಾನೆ. ಇದು ಪ್ರತಿವರ್ಷ ಹೆಚ್ಚಾಗುತ್ತಲೇ ಹೋಗುತ್ತಲಿದೆ. ಅಧಿಕ ಪ್ರಮಾಣದ ತ್ಯಾಜ್ಯ ಪ್ಲಾಸ್ಟಿಕ್ ಸಾಗರವನ್ನು ಸೇರುತ್ತಲಿದೆ. ಜಲಚರ ಪ್ರಾಣಿಗಳು ಇವನ್ನು ಆಹಾರವೆಂದು ಬಗೆದು ತಿಂದಾಗಲೀ ಅಥವಾ ಅದರಲ್ಲಿ ಸಿಕ್ಕಿಹಾಕಿಕೊಂಡಾಗಲೀ ಸಾಯುತ್ತಲಿವೆ. ಭಾರತದಂಥ ದೇಶಗಳಲ್ಲಿ ನೆಲದ ಮೇಲೆ ಎಸೆದ ತ್ಯಾಜ್ಯ ಪ್ಲಾಸ್ಟಿಕ್ಕನ್ನು ದನಕರುಗಳು ತಿಂದು ಸಾಯುವುದುಂಟು. ಪ್ರಪಂಚದಲ್ಲಿ ಉತ್ಪನ್ನವಾಗುವ ಒಟ್ಟು ಪ್ಲಾಸ್ಟಿಕ್ಕಿನ ಅರ್ಧದಷ್ಟು ಪ್ಲಾಸ್ಟಿಕ್ಕನ್ನು ಸಾಮಾನು ಕಟ್ಟಲು ಮತ್ತು ಕೈಚೀಲ ತಯಾರಿಸಲು ಉಪಯೋಗಿಸಲಾಗುತ್ತಿದೆ. ಇಂಥ 'ತ್ಯಾಜ್ಯ ಪ್ಲಾಸ್ಟಿಕ್' ಪರಿಸರವನ್ನು ಹಾಳು ಮಾಡುತ್ತಲಿದೆ.

ಪ್ಲಾಸ್ಟಿಕ್ಕಿನ ಈ ಅವಾಂತರವನ್ನು ಗುರುತಿಸಿದ್ದು ೧೯೬೦ರ ದಶಕದ ಮೊದಲ ಭಾಗದಲ್ಲಿ. ಹೆಚ್ಚೂ ಕಡಿಮೆ ರಾಕೆಲ್ ಕಾರ್ಸನ್ ಅವರು ತಮ್ಮ "Silent Sprint" ಎಂಬ ಪುಸ್ತಕವನ್ನು ಪ್ರಕಟಿಸಿದ ಕಾಲ. ಅಂದಿನಿಂದ ಇಂದಿನವರೆಗೆ ತ್ಯಾಜ್ಯ ಪ್ಲಾಸ್ಟಿಕ್ಕನ್ನು ತೊಲಗಿಸಿ ಪರಿಸರವನ್ನು ಕಾಪಾಡಲು ಅನೇಕ ಪ್ರಯತ್ನಗಳು ನಡೆಯುತ್ತಲಿವೆ. ಪರಿಹಾರ ಉಪಾಯಗಳು ಸುಲಭವಿಲ್ಲ. ಈಗ ಗುರುತಿಸಲಾದ ಮುಖ್ಯ ಪರಿಹಾರೋಪಾಯಗಳೆಂದರೆ,

೧. ತ್ಯಾಜ್ಯ ಪ್ಲಾಸ್ಟಿಕ್ಕಿನಿಂದ ಉಪಯೋಗಿ ವಸ್ತುಗಳ ಪುನರುತ್ಪಾದನೆ.

೨. ದಹನ

೩. ವಿಚ್ಛೇದ್ಯ ಪ್ಲಾಸ್ಟಿಕ್ ಉತ್ಪಾದನೆ.

ತಾತ್ವಿಕವಾಗಿ ಹೇಳುವುದಾದರೆ ಇವೆಲ್ಲವುಗಳ ಪೈಕಿ ಶ್ರೇಷ್ಠ ಪರಿಹಾರೋಪಾಯ ಅಂದರೆ ವಿಚ್ಛೇದ್ಯ ಪ್ಲಾಸ್ಟಿಕ್ಕಿನ ಉತ್ಪಾದನೆ. ಸಂಶ್ಲೇಷಿತ ಪಾಲಿಮರುಗಳು ಏಕೆ ವಿಚ್ಛೇದನಗೊಳ್ಳುವುದಿಲ್ಲ? ಅವನ್ನು ವಿಚ್ಛೇದನಗೊಳ್ಳುವಂತೆ ಹೇಗೆ ಮಾಡಬೇಕು? ಎಂಬ ಸಮಸ್ಯೆಗಳನ್ನು ಕೈಗೆತ್ತಿಗೊಂಡು ಇಂದಿನ ರಸಾಯನ ವಿಜ್ಞಾನಿ ಕಾರ್ಯತತ್ಪರನಾಗಿದ್ದಾನೆ.

**ಸಂಶ್ಲೇಷಿತ ಪಾಲಿಮರುಗಳು ಏಕೆ ವಿಚ್ಛೇದನಗೊಳ್ಳುವುದಿಲ್ಲ?**

ಸಂಶ್ಲೇಷಿತ ಪಾಲಿಮರುಗಳು ವಿಚ್ಛೇದನೆಗೊಳ್ಳುವುದಿಲ್ಲ ಅನ್ನುವುದು ಒಂದು ರೀತಿಯಿಂದ ತಪ್ಪು. ಏಕೆಂದರೆ ಪ್ರಪಂಚದಲ್ಲಿ ವಿಚ್ಛೇದನಗೊಳ್ಳದ ವಸ್ತುವೇ ಇಲ್ಲ. ಎಲ್ಲವೂ ಒಂದು ದಿನ ನಾಶ ಆಗುತ್ತದೆ. ಅದಕ್ಕೆ ಪ್ಲಾಸ್ಟಿಕ್ಕೇನೂ ಹೊರತಲ್ಲ. ಆದರೆ ಅದು ವಿಚ್ಛೇದನಗೊಳ್ಳಲು ತೆಗೆದುಕೊಳ್ಳುವ ಕಾಲಾವಧಿ ಅಸಾಧಾರಣವಾಗಿ ದೀರ್ಘವಾಗಿರುತ್ತದೆ. ಒಂದು ಹಣ್ಣನ್ನೋ, ಕಾಗದದ ತುಂಡನ್ನೋ ತಿಪ್ಪೆಯಲ್ಲಿ ಎಸೆದರೆ ಅವು ಕೆಲ ದಿನಗಳಲ್ಲಿ ಮಣ್ಣು ಸೇರುತ್ತವೆ. ಆದರೆ ಅದೇ ಒಂದು ಪ್ಲಾಸ್ಟಿಕ್ ಬಾಟಲಿಯನ್ನು ತಿಪ್ಪೆಯಲ್ಲಿ ಎಸೆದರೆ ೪೦-೫೦ ವರ್ಷಗಳವರೆಗೆ ಹಾಗೆಯೇ ಉಳಿಯುತ್ತದೆ. ಎಷ್ಟೋ ಪ್ಲಾಸ್ಟಿಕ್ಕುಗಳು ೨೦೦-೪೦೦ ವರ್ಷಗಳವರೆಗೆ ವಿಚ್ಛೇದನಗೊಳ್ಳದೇ ಉಳಿಯಬಲ್ಲವು ಎಂದು ಅಂದಾಜುಮಾಡಲಾಗಿದೆ. ಈ ಕಾರಣಕ್ಕಾಗಿ ಪ್ಲಾಸ್ಟಿಕ್ಕುಗಳನ್ನು ವಿಚ್ಛೇದನಗೊಳ್ಳದವು ಅನ್ನುತ್ತಾರೆ.

ವಿಚ್ಛೇದನಗೊಳ್ಳುವುದು ಅಂದರೆ ಜೀವಾಣುಗಳಿಂದಾಗಲೀ ಅಥವಾ ವಾತಾವರಣದ ನೈಸರ್ಗಿಕ ಪ್ರಕ್ರಿಯೆಗಳಿಂದಾಗಲೀ ಖನಿಜೀಭವನ ಹೊಂದುವುದು, ಅಥವಾ ನಿರುಪದ್ರವಿ ಘಟಕಗಳನ್ನಾಗಿ ಪರಿವರ್ತಿಸುವುದು. ಖನಿಜೀಭವನ ಅಂದರೆ ಅಂತಿಮವಾಗಿ ವಸ್ತುವೊಂದು $CO_2$, $H_2$, $N_2$, $O_2$ ಇತ್ಯಾದಿ ಮೂಲ ರಸಾಯನಿಕ ಘಟಕಗಳಾಗಿ ಪರಿವರ್ತನೆಗೊಳ್ಳುವುದು. ಪ್ರೋಟೀನ್ ಆಗಲಿ ಕಾಗದವೇ ಆಗಲಿ ಇಂಥ ನೈಸರ್ಗಿಕ ಪಾಲಿಮರುಗಳು ಏಕೆ ಬೇಗನೆ ವಿಚ್ಛೇದನೆಗೊಳ್ಳುತ್ತವೆ? ಪ್ಲಾಸ್ಟಿಕ್ ಏಕೆ ಹಾಗೆ ಆಗುವುದಿಲ್ಲ? ಎನ್ನುವುದು ಎರಡು ಮುಖ್ಯ ವಿಷಯಗಳನ್ನು ಅವಲಂಬಿಸಿದೆ.

೧. ಜೀವಾಣುಗಳು ತಮ್ಮ ಆಹಾರವನ್ನು ತಿನ್ನುವ ಬಗ್ಗೆ

೨. ಪಾಲಿಮರುಗಳ ಅಣವಿಕ ರಚನೆ.

| | ನೈಸರ್ಗಿಕ ಪಾಲಿಮರುಗಳು | ಸಂಶ್ಲೇಷಿತ ಪಾಲಿಮರುಗಳು |
|---|---|---|
| ೧. | ಪುನರಾವರ್ತಿಸುವ ಮೊನೊಮರ್ ಸಾಕಷ್ಟು ಉದ್ದವಾಗಿರುತ್ತದೆ. | ಪುನರಾವರ್ತಿಸುವ ಮೊನೊಮರ್ ಚಿಕ್ಕದಾಗಿರುತ್ತದೆ. |
| ೨. | ಕ್ರಿಯಾತ್ಮಕ ಪುಂಜಗಳುಳ್ಳ ಮೊನೊಮರುಗಳು. | ಬಹುತೇಕ ಹೈಡ್ರೋ ಕಾರ್ಬನ್ನುಗಳು ಮೊನೊಮರುಗಳು. |
| ೩. | ಹೆಚ್ಚಿನ ಮಟ್ಟಿಗೆ ಅಸ್ಪಟಿಕೀಯ. ಆದ್ದರಿಂದ ರಾಸಾಯನಿಕ ಕ್ರಿಯೆಗೆ ಅಥವಾ ಜೀವಾಣುಗಳು ಲಗ್ಗೆ ಇಡಲು ಕ್ರಿಯಾಪುಂಜಗಳು ತೆರೆದುಕೊಂಡಿರುತ್ತವೆ. | ಹೆಚ್ಚಿನ ಮಟ್ಟಿಗೆ ಸ್ಪಟಿಕೀಯ. ಆದ್ದರಿಂದ ಕ್ರಿಯಾಪುಂಜಗಳು ಇದ್ದರೂ ಅವು ತೆರೆದುಕೊಂಡು ಇರುವುದಿಲ್ಲ. |
| ೪. | ಜೀವಾಣುಗಳು ಪಾಲಿಮರ್ ಸರಪಳಿಯ ಮಧ್ಯದಲ್ಲಿರುವ ಕ್ರಿಯಾಪುಂಜಗಳಿಗೆ ಲಗ್ಗೆ ಹಾಕಿ ಎಲ್ಲಂದರಲ್ಲಿ ತಿನ್ನುವುದರಿಂದ | ಉದ್ದನೆಯ ಪಾಲಿಮರ್ ಸರಪಳಿಯ ಮಧ್ಯ ಜೀವಾಣುಗಳು ಲಗ್ಗೆ ಇಡಲಾರವು. ಸರಪಳಿಯ ಎರಡು ದಂಡೆಗಳಿಂದ ಮಾತ್ರ ತಿನ್ನುತ್ತ ಬರುವುದರಿಂದ |

| | |
|---|---|
| ಬೇಗನೆ ವಿಚ್ಛೇದನಗೊಳ್ಳುತ್ತವೆ. | ವಿಚ್ಛೇದನೆಗೆ ಹೆಚ್ಚು ವೇಳೆ ಬೇಕು. |
| ಉದಾ : ಜಲೇಬಿಯನ್ನು ಯಾವ ಭಾಗದಿಂದಲೂ ತಿನ್ನುವಂತೆ. | ಉದಾ : ಕಬ್ಬಿನ ಜಲ್ಲೆಯನ್ನು ಎಲ್ಲೆಂದರಲ್ಲಿ ತಿನ್ನದೇ ಒಂದು ತುದಿಯಿಂದ ಮಾತ್ರ ತಿನ್ನುವಂತೆ. |

ಸ್ಥೂಲವಾಗಿ ಹೇಳುವುದಾದರೆ ಸಂಶ್ಲೇಷಿತ ಪಾಲಿಮರುಗಳಲ್ಲಿ ಉದ್ದವಾದ ಹೈಡ್ರೋಕಾರ್ಬನ್ ಸರಪಳಿ ಇರುವುದರಿಂದ ಅದು ರಾಸಾಯನಿಕ ಕ್ರಿಯೆಗೆ ಬೇಗನೆ ಈಡಾಗುವುದಿಲ್ಲ ಮತ್ತು ಜೀವಾಣುಗಳು ಒಂದು ತುದಿಯಿಂದ ತಿನ್ನುತ್ತ ಬರುವುದರಿಂದ ಪಾಲಿಮರು ವಿಚ್ಛೇದನಗೊಳ್ಳಲು ಅಧಿಕ ಕಾಲ ಬೇಕು. ಆದ್ದರಿಂದ ವಿಚ್ಛೇದನೆಯ ಅವಧಿಯನ್ನು ಕಡಿಮೆ ಮಾಡಬೇಕು. ಇದನ್ನು ಸಾಧಿಸಬೇಕಾದರೆ ಸಂಶ್ಲೇಷಿತ ಪಾಲಿಮರ್ ಅಣುವಿನ ರಚನಾ ಲಕ್ಷಣಗಳು ನೈಸರ್ಗಿಕ ಪಾಲಿಮರ್ ಅಣುವಿನ ರಚನಾಲಕ್ಷಣಗಳಂತೆ ಇರಬೇಕು. ಇಂಥ ಪಾಲಿಮರುಗಳನ್ನು ಸಂಶ್ಲೇಷಿಸುವಲ್ಲಿ ರಸಾಯನ ವಿಜ್ಞಾನಿ ಸ್ವಲ್ಪ ಮುಂದುವರೆದಿದ್ದಾನೆ. ದ್ಯುತಿವಿಚ್ಛೇದ್ಯ, ರಾಸಾಯನಿಕ ವಿಚ್ಛೇದ್ಯ ಮತ್ತು ಜೀವ ವಿಚ್ಛೇದ್ಯ ಎಂಬ ಮೂರು ತರಹದ ಪಾಲಿಮರುಗಳನ್ನು ತಯಾರಿಸಲಾಗಿದೆ (ವಿನ್ಯಾಸ-೧)




ವಿನ್ಯಾಸ -೧

ಉದಾಹರಣೆಗೆ, ಪಾಲಿಎಥಿಲೀನಿನಂತಹ ಕ್ರಿಯಾತ್ಮಕವಲ್ಲದ ಹೈಡ್ರೋಕಾರ್ಬನ್ ಪುಂಜಗಳುಳ್ಳ ಅವಿಚ್ಛೇದನೀಯ ಪಾಲಿಮರನ್ನು ಆಕ್ಸಿಜನ್ನಿನೊಂದಿಗೆ ವಿಶಿಷ್ಟ ರೀತಿಯಲ್ಲಿ ವರ್ತಿಸಿ ಅದರಲ್ಲಿಯ ಕೆಲ – $CH_2$ – ಪುಂಜಗಳನ್ನು ಕ್ರಿಯಾತ್ಮಕ ಕಾರ್ಬೊನಿಲ್ (–*CO*–) ಪುಂಜಗಳನ್ನಾಗಿ ಪರಿವರ್ತಿಸುತ್ತಾರೆ. ಕಾರ್ಬೊನಿಲ್ ಪುಂಜಯುಕ್ತ ಸಂಯುಕ್ತಗಳು ದ್ಯುತಿರಾಸಾಯನಿಕ ಕ್ರಿಯೆಗೆ (Photochemical reaction)




ಒಳಗಾಗಿ ವಿಚ್ಛೇದನಗೊಳ್ಳುತ್ತವೆ ಅಥವಾ ಈ ರೀತಿ ದೊರೆತ ಕಾರ್ಬೊನಿಲ್ ಪುಂಜಯುಕ್ತ ಪಾಲಿಮರುಗಳನ್ನು ಬೇಯರ್ – ವಿಲಿಗರ್ ಕ್ರಿಯೆಗೆ ಒಳಪಡಿಸಿದಾಗ ಅದು ಎಸ್ಟರ್ ಪುಂಜವುಳ್ಳ (–*CO–O*–) ಪಾಲಿಮರ್ ಆಗುತ್ತದೆ. ಇದು ವಾತಾವರಣ ದಲ್ಲಿ ರಾಸಾಯನಿಕ ಕ್ರಿಯೆಗೆ ಒಳಗಾಗಿ ಬೇಗನೆ ವಿಚ್ಛೇಧಿಸುತ್ತದೆ. (ವಿನ್ಯಾಸ-೨)




ವಿನ್ಯಾಸ-೨

ಸಂಶ್ಲೇಷಿತ ಪಾಲಿಮರಿನ ಜೊತೆಗೆ ಪಿಷ್ಟ ಸೇರಿಸಿ ತಯಾರಿಸಿದ ಪಾಲಿಮರುಗಳು ಮಾರುಕಟ್ಟೆಯಲ್ಲಿ ಬಂದಿವೆ. ಇವು ಜೀವ ವಿಚ್ಛೇದ್ಯ ಪಾಲಿಮರ್ ತಳಿಗೆ ಸೇರಿದ ಮೊದಲ ಪಾಲಿಮರುಗಳು. ಪಿಷ್ಟದ ಪ್ರಮಾಣ ಶೇಕಡಾ ೬ ರಿಂದ ೯೦ರ ವರೆಗೆ ಇರಬಹುದು. ಇತ್ತೀಚೆಗೆ ಮಹತ್ವ ಪಡೆಯುತ್ತಿರುವ ಜೀವ ವಿಚ್ಛೇದ್ಯ ಪಾಲಿಮರುಗಳು ಅಂದರೆ ಪಾಲಿಹೈಡ್ರೊಕ್ಸಿ ಅಲ್ಕೆನೊಯೇಟುಗಳು (PHA : Polyhydroxy Alkanoates). ಕೆಲವು ಜಾತಿಯ ಸೂಕ್ಷ್ಮಜೀವಿಗಳು ಈ ಪಾಲಿಮರುಗಳನ್ನು ಆಪತ್ಕಾಲದ ಆಹಾರ ಎಂದು ತಮ್ಮಲ್ಲಿಯೇ ಉತ್ಪಾದಿಸುತ್ತವೆ. ಹುದುಗಿಸಿ ಬೀರನ್ನು ತಯಾರಿಸುವಂತೆ ಈ ಸೂಕ್ಷ್ಮ ಜೀವಿಗಳನ್ನು ಹುದುಗಿಸುವ ಕ್ರಿಯೆಯಿಂದ ದೊಡ್ಡ ಪ್ರಮಾಣದಲ್ಲಿ ಬೆಳೆಸುತ್ತಾರೆ. ಅವು ಬೆಳೆದು ದಷ್ಟಪುಷ್ಟವಾದಾಗ ಸೂಕ್ಷ್ಮಜೀವಿಗಳಿಂದ PHA ಯನ್ನು ಬೇರ್ಪಡಿಸುತ್ತಾರೆ. ಇದಕ್ಕೆ ಅನಂತರ ಶಾಖಕೊಟ್ಟು ಪ್ಲಾಸ್ಟಿಕ್ಕನ್ನು ತಯಾರಿಸುತ್ತಾರೆ. ಈ ವಿಚ್ಛೇದ್ಯ ಪ್ಲಾಸ್ಟಿಕ್ಕುಗಳು ಸಾಮಾನ್ಯ ಪ್ಲಾಸ್ಟಿಕ್ಕುಗಳಂತೆ ಬಲ ಮತ್ತು ನಮ್ಯತೆ ಹೊಂದಿದ್ದು ಇವನ್ನು ಅಚ್ಚುಹಾಕಿ ಬೇಕಾದ ರೂಪವನ್ನು ಕೊಡಬಹುದು. ಇದರಿಂದ ತಯಾರಿಸಿದ ಲೋಟದಲ್ಲಿ ಚಹಾ ಕುಡಿಯಬಹುದು. ಆದರೆ ಹೆಚ್ಚು ಶಾಖವನ್ನು ತಾಳಲಾರವು. ಸೂಕ್ಷ್ಮಜೀವಿಗಳೇ ಇವನ್ನು ತಯಾರಿಸಿದ್ದರಿಂದ ಇವು ಕೇವಲ ೬ ವಾರಗಳಲ್ಲಿ ವಿಚ್ಛೇದನ ಹೊಂದುತ್ತವೆ.

ತೀರ ಇತ್ತೀಚೆಗೆ (೧೯೯೯) ಜರ್ಮನಿಯ BASF ಕಂಪನಿ ಎಲಿಫಾಟಿಕ್ (ಕಾರ್ಬನ್ ಪರಮಾಣುಗಳು ಸರಪಳಿಯಾಕಾರದಲ್ಲಿರುವ) ಮತ್ತು ಆಮ್ಲಗಳ ಮಿಶ್ರ ಎಸ್ಟರುಗಳುಳ್ಳ ಪಾಲಿಮರನ್ನು ಆರೋಮ್ಯಾಟಿಕ್ (ಕಾರ್ಬನ್ ಪರಮಾಣುಗಳು ಉಂಗುರದ ಆಕೃತಿ) ತಯಾರಿಸಿದೆ. ಇದು ಶೇಕಡಾ ೯೫ ರಷ್ಟು ಜೀವವಿಚ್ಛೇದನೆಗೊಳ್ಳುತ್ತದೆ ಎಂದು ಪ್ರಯೋಗದಿಂದ ಪುಷ್ಟೀಕರಿಸಿದೆ.

ವಿಚ್ಛೇದ್ಯ ಪ್ಲಾಸ್ಟಿಕ್ ತಯಾರಿಕೆ ಉತ್ತಮ ಪರಿಹಾರವೇನೋ ಸರಿ. ಆದರೆ ಅವನ್ನು ತಯಾರಿಸುವುದು ದುಬಾರಿ. ಅದರ ಬೆಲೆ ಅದರ ಬಳಕೆಯನ್ನು ಮಿತಿಗೊಳಿಸುತ್ತದೆ. ಆದರೂ ಇದನ್ನು ವೈದ್ಯಕೀಯ ಶಾಸ್ತ್ರದಲ್ಲಿ ಸಾಕಷ್ಟು ಬಳಸಲಾಗುತ್ತಿದೆ. ಒಟ್ಟು ಪ್ಲಾಸ್ಟಿಕ್ಕಿನ ಶೇಕಡಾ ೫-೧೦ರಷ್ಟು ಮಾತ್ರ ವಿಚ್ಛೇದ್ಯ ಪಾಲಿಮರುಗಳನ್ನು ಉತ್ಪಾದಿಸಲಾಗುತ್ತದೆ.

ತ್ಯಾಜ್ಯ ಪ್ಲಾಸ್ಟಿಕ್ಕನ್ನು ತೊಲಗಿಸಲು ವಿಚ್ಛೇದ್ಯ ಪಾಲಿಮರುಗಳು ತಾತ್ವಿಕವಾಗಿ ಉತ್ತಮ ಪರಿಹಾರೋಪಾಯ ಆಗಿದ್ದರೂ ಈ ಕಾರಣಗಳಿಂದಾಗಿ ವ್ಯಾವಹಾರಿಕವಾಗಿ ಪರಿಣಾಮ ಕಾರಿಯಾಗುವುದು ಇನ್ನೂ ದೂರ. ಇದಕ್ಕಾಗಿ ಕಾಯದೆ ತ್ಯಾಜ್ಯ ಪ್ಲಾಸ್ಟಿಕ್ಕನ್ನು ತೊಲಗಿಸಲು, ನಾಗರಿಕರು, ಉದ್ದಿಮೆಗಳು ಮತ್ತು ವಿಜ್ಞಾನಿಗಳು ಜೊತೆ ಜೊತೆಗೇ ಕೆಲಸ ಮಾಡಬೇಕು. ನಾಗರಿಕರು ಪ್ಲಾಸ್ಟಿಕ್ ಬಳಕೆಯನ್ನೇ ಕಡಿಮೆ ಮಾಡಬೇಕು. ಉಪಯೋಗಿಸಿದ ಪ್ಲಾಸ್ಟಿಕ್ ವಸ್ತುಗಳನ್ನು ಪುನಃ ಪುನಃ ಉಪಯೋಗಿಸಬೇಕು. ಉದ್ದಿಮೆಯವರು ತ್ಯಾಜ್ಯ ಪ್ಲಾಸ್ಟಿಕ್ಕಿನಿಂದ ಉಪಯೋಗಿ ವಸ್ತುಗಳ ಪುನರುತ್ಪಾದನೆ ಮಾಡಬೇಕು. ವಿಜ್ಞಾನ ಉತ್ತಮ ಮಟ್ಟದ ಮತ್ತು ಕಡಿಮೆ ಬೆಲೆಯ ವಿಚ್ಛೇದ್ಯ ಪಾಲಿಮರಿನ ಉತ್ಪಾದನೆಯತ್ತ ಇನ್ನೂ ಹೆಚ್ಚಿನ ಗಮನ ಹರಿಸಬೇಕು. ಇವೇ ತ್ಯಾಜ್ಯ ಪ್ಲಾಸ್ಟಿಕ್ಕನ್ನು ತೊಲಗಿಸಲು ಸದ್ಯಕ್ಕಿರುವ ಜಾಣ ಉಪಾಯಗಳು.


ಡಾ|| ಸರ್ವೋತ್ತಮ ಅಂಬೇಕರ
"ಅನುಶ್ರೀ" ೫೧, ೩ನೆಯ ಅಡ್ಡರಸ್ತೆ, ಜಯನಗರ, ಧಾರವಾಡ-೫೮೦



ಇದರಲ್ಲಿ ಎರಡು ಭಾಗಗಳಿವೆ. ಮೊದಲನೆಯದು ಕೋಮುವಾದ ರಾಜಕೀಯದ ಹಿನ್ನೆಲೆ ಮತ್ತು ಬೆಳವಣಿಗೆ. ಈ ಭಾಗದಲ್ಲಿ ಲೇಖಕರು ಕೋಮುವಾದದ ರಾಜಕೀಯದ ವಿರಾಟ್ ಸ್ವರೂಪದ ಮುಖ್ಯ ಎಳೆಯನ್ನು ಹಿಡಿದುಕೊಡುತ್ತಾರೆ. ಆದ್ದರಿಂದ ಇದು ಬಹಳ ಕರಾರು ವಾಕ್ಕಾಗಿದೆ. ಅಲ್ಲದೆ ಚಾರಿತ್ರಿಕ ಹಿನ್ನೆಲೆಯನ್ನು ಮನದಟ್ಟು ಮಾಡುತ್ತದೆ. ಕೋಮುವಾದ ಮತ್ತು ಕೋಮುಗಲಭೆಯ ಬಗ್ಗೆ ಗೊಂದಲಗೊಂದಲವಾಗಿರುವ ಅನಿಸಿಕೆಗೆ ಒಂದು ಸ್ಪಷ್ಟ ತಿಳಿವಳಿಕೆ ಈ ಭಾಗ ಕೊಡುತ್ತದೆ. ಇದು ಮುಂದಿನ ಭಾಗದ ಕೇಸ್ ಸ್ಟಡಿಯಷ್ಟೇ ಮಹತ್ವದ್ದಾಗಿದೆ.

ಇಂದು ಎಲ್ಲೆಲ್ಲೂ ಮೂಲಭೂತವಾದಕ್ಕೂ ಕೋಮುವಾದದ ರಾಜಕೀಯಕ್ಕೂ ಒಂದೇ ಅರ್ಥ ಬಳಸಲಾಗುತ್ತದೆ. ಆದರೆ ಅದರ ನಿಜ ಅರ್ಥವೇನೆಂದರೆ ''ರಾಜಕೀಯ ಅಧಿಕಾರಕ್ಕಾಗಿ ಒಂದು ಧರ್ಮದ ಅನುಯಾಯಿಗಳನ್ನು ಇನ್ನೊಂದು ಧರ್ಮದವರ ವಿರುದ್ಧ ಎತ್ತಿ ಕಟ್ಟುವುದು ಮತ್ತು ಬಹುಸಂಖ್ಯಾತರ ಸಂಸ್ಕೃತಿಗೆ ಅಲ್ಪಸಂಖ್ಯಾತರು ಹೊರಗಿನವರು ಎಂದು ವಾದಿಸಿ ಅವರ ಬಗ್ಗೆ ದ್ವೇಷ ತಿರಸ್ಕಾರಗಳನ್ನು ಬೆಳೆಸುವುದು ಕೋಮುವಾದ. ತನ್ನ ಧರ್ಮದ ಕಟ್ಟುಪಾಡುಗಳಿಗೆ ಮತ್ತು ಪವಿತ್ರ ಗ್ರಂಥಗಳಿಗೆ ಆ ಧರ್ಮಕ್ಕೆ ಸೇರಿದ ಪ್ರತಿಯೊಬ್ಬನೂ ತಲೆ ಬಾಗಲೇಬೇಕು ಎಂದು ಒತ್ತಾಯಿಸುವುದು ಮೂಲಭೂತವಾದ.'' ಇದು ಒಂದಕ್ಕೊಂದು ಪೂರಕವಾಗ ಬಹುದು. ಆದರೆ ಎರಡೂ ಒಂದೇ ಅಲ್ಲ ಎನ್ನುವ ಸೂಕ್ಷ್ಮದ ಕಡೆ ನಮ್ಮ ಗಮನ ಹೋಗಬೇಕು.

ಜರ್ಮನಿಯಲ್ಲಿ ಯಹೂದಿಗಳ ಮೇಲೆ ನಾಝಿಗಳು ನಡೆಸಿದ ಸಮೂಹ ಹಿಂಸೆಯಲ್ಲಿ ಜನಸಾಮಾನ್ಯರು – ಜವಾಬ್ದಾರಿಯುತ ಪ್ರಜೆ ಕೂಡ – ಮೂಕ ಪ್ರೇಕ್ಷಕರಾಗಿದ್ದ ಪರಿಣಾಮ ಹದಿನೈದು ಲಕ್ಷ ಯಹೂದಿಗಳನ್ನು ಜನಾಂಗೀಯ ದ್ವೇಷದಿಂದ ಕೊಂದುಹಾಕಲು ಸಾಧ್ಯವಾಯಿತು ಎಂಬ ಭಯಾನಕ ಘಟನೆಯ ಬಗ್ಗೆ ಲೇಖಕರು ನಮ್ಮನ್ನು ಎಚ್ಚರಿಸುತ್ತಾರೆ. ಅಂತಹುದೇ ಸಂದರ್ಭ ಭಾರತದಲ್ಲಿ ನಮ್ಮದೂ ಕೂಡ.

ಆರ್. ಎಸ್. ಎಸ್. ಹುಟ್ಟಿಕೊಂಡದ್ದು ಮಹಾರಾಷ್ಟ್ರದಲ್ಲಿ. ಅದಕ್ಕೆ ಚಾರಿತ್ರಿಕ ಹಿನ್ನೆಲೆಯೇನು ? ಭಾರತೀಯ ಸಂಸ್ಕೃತಿಯ ಹುಡುಕಾಟದಲ್ಲಿ ಮನ್ನಣೆ ಪಡೆದದ್ದು. ''ವೈದಿಕ ಗ್ರಂಥಗಳಲ್ಲಿ ನಿರೂಪಿತವಾಗಿದ್ದ ಈ ಸಮಾಜದ ಮೇಲುವರ್ಗದ ಸಂಸ್ಕೃತಿ, ಬ್ರಾಹ್ಮಣೇತರವಾದ ಕೆಳವರ್ಗದ ಬದುಕು ಈ ಸಂಸ್ಕೃತಿಯ ವ್ಯಾಪ್ತಿಯಿಂದ ದೂರ ಉಳಿಯಿತು.'' ಆ ಕಾಲಕ್ಕಾಗಲೇ ದಲಿತ ಚಳವಳಿ, ಮಹಿಳೆಯರ ಚಳವಳಿ ಮತ್ತು ಕೆಳ ಜಾತಿಯವರ ಚಳವಳಿ ಸ್ವಲ್ಪಮಟ್ಟಿಗೆ ಆರಂಭವಾಗಿದ್ದವು. ಕಮ್ಯುನಿಸ್ಟ್ ಪಕ್ಷದ ಸ್ಥಾಪನೆ ಕೂಡ ಆಗಿತ್ತು. ಆದ್ದರಿಂದ ಇದು ''ಮಧ್ಯಮ ವರ್ಗದ ಭಯಭೀತ ಬ್ರಾಹ್ಮಣರ ಪ್ರತಿಕ್ರಿಯೆ''ಯಾಗಿತ್ತು. ಮುಂದೆ ಇದು ಮುಸ್ಲಿಮ್ ಮತ್ತು ಕ್ರಿಶ್ಚನ್ನರ ಬಗ್ಗೆ ಹಿಂದು ಪರಿಕಲ್ಪನೆಯಲ್ಲಿ ಬರುವ ಕೆಳಜಾತಿಗಳಲ್ಲಿ ಸಹ ದ್ವೇಷ ಹುಟ್ಟಿ ಬೆಳೆಯುವಂತೆ ವ್ಯವಸ್ಥಿತವಾಗಿ ಕೆಲಸ ಮಾಡಿತ್ತು. ಈ ಕೆಲಸವನ್ನು ಅತ್ಯಂತ ಚಾಣಾಕ್ಷತನದಿಂದ ನಡೆಸಿದ ಆರ್. ಎಸ್. ಎಸ್. ಎಪ್ಪತ್ತು ವರ್ಷಗಳ ನಂತರ 'ಬಿ.ಜೆ.ಪಿ.' ಎಂಬ ಹೆಸರಿನ ರಾಜಕೀಯ ಪಕ್ಷದ ಮುಖಾಂತರ ಕೇಂದ್ರ ಸರಕಾರದ ಅಧಿಕಾರ ಹಿಡಿಯುವಲ್ಲಿ ಯಶಸ್ವಿಯಾಯಿತು. ಹಾಗಾದರೆ ಸೆಕ್ಯುಲರ್ ಪಕ್ಷವೆಂದು ಹೆಸರಿಸಿಕೊಂಡ ಕಾಂಗ್ರೆಸ್ಸಿನ ಪಾಲೆಷ್ಟು ಎಂಬುದನ್ನೂ ಇಲ್ಲಿ ನಿಖರವಾಗಿ, ಮನನೀಯವಾಗಿ ವಿವರಿಸಿಟ್ಟಿದೆ. ಅದರ ಅಂಗವಾಗಿ ನೆಹರು ಮತ್ತು ಶಾಸ್ತ್ರಿಗಳ ನಂತರ ಕಾಂಗ್ರೆಸ್ಸಿನ ರಾಜಕೀಯ ಆಟದಲ್ಲಿ ಕೋಮು ರಾಜಕೀಯ ಬೆಳೆದು ಬಂದ ರೀತಿಯನ್ನು ವಿವರಿಸಿದ್ದಾರೆ. ಅಲ್ಲದೆ ಆರ್. ಎಸ್. ಎಸ್. ನ ವಿವಿಧ ಸಂಘ - ಶಾಖೆಗಳು ಸಮಾಜ ಸೇವೆ, ಸಂಸ್ಕೃತಿ ಸೇವೆಯ ಹೆಸರಿನಲ್ಲಿ ಹೇಗೆ ಅಲ್ಪಸಂಖ್ಯಾತರ ಬಗ್ಗೆ ದ್ವೇಷವನ್ನು ಹರಡುತ್ತವೆ ಎಂದು ನಿರೂಪಿಸಿದ್ದಾರೆ. ಮತ್ತೆ ಇದು ಅಮೂರ್ತವಾಗೇನೂ ಇಲ್ಲ. ಇವಕ್ಕೆ ಉದಾಹರಣೆಗಳು ನಮ್ಮೆದುರೇ ಚಾಲ್ತಿಯಲ್ಲಿರುವುದನ್ನು ತೆರೆದು ತೋರಿಸಲಾಗಿದೆ. ಆರ್. ಎಸ್. ಎಸ್. ಸ್ವಾತಂತ್ರ್ಯ ಚಳವಳಿಯಿಂದ ದೂರ ಉಳಿದ ಬಗ್ಗೆ ಕಾರಣಗಳ ಶೋಧನೆ ಸಹ ಇಲ್ಲಿದೆ.

ಪುಟ : ೯೬ ಬೆಲೆ : ರೂ. ೨೫

ದಕ್ಷಿಣ ಕನ್ನಡದ ಸುರತ್ಕಲ್‌ನಲ್ಲಿ ೨೯-೧೨-೯೮ರಿಂದ ೫-೧-೯೯ರವರೆಗೆ ನಡೆದ ಕೋಮು ಗಲಭೆಯಲ್ಲಿ ಸತ್ತವರಲ್ಲಿ ಹಿಂದುಗಳು ಇಬ್ಬರು ಮತ್ತು ಮುಸ್ಲಿಮರು ಏಳು. ಪೆಟ್ಟು ತಿಂದು ಆಸ್ತಿಪಾಸ್ತಿ ನಾಶ ಮಾಡಿಕೊಂಡವರು ಹಿಂದುಗಳು ೩೪, ಮುಸ್ಲಿಂರು ೯೪. ಈ ಸಂಖ್ಯೆಗಳೂ ಮುಖ್ಯವೇ; ಆದರೆ ಈ ಸಂಖ್ಯೆಗಳ ಹಿಂದಿನ ವಿಶ್ಲೇಷಣೆ ಎದೆ ನಡುಗಿಸುವ ಭೀತಿಯ ಚಿತ್ರವನ್ನು ನೀಡುತ್ತದೆ.

[illegible] ಏಕಪಕ್ಷೀಯವಾದ ತನಿಖೆಯಿಂದ [illegible] ಹಿಂದುಗಳ ಸಾಕ್ಷಿಯೂ ಇದೆ. ಹಾಗೆಯೇ [illegible] ಇಲ್ಲಿಯ ವಿವರಣೆಯನ್ನು ನೋಡಿದಾಗ ಬಾಬ್ರಿ ಮಸೀದಿ ಧ್ವಂಸದ ಸಂದರ್ಭದ ಎಲ್ಲಾ ಲಕ್ಷಣವೂ ಕಾಣಸಿಕೊಳ್ಳುತ್ತದೆ. ಅಲ್ಲಿ ತರುಣರೆನ್ನದೆ ಅರವತ್ತೈದು ವರ್ಷದ ಹಿರಿಯ ಹಾಗೆಯೇ ೧೦-೧೨ ವರ್ಷದ ಮಗು ಹಲ್ಲೆಗೊಳಗಾದ ಹಾಗೆ ಇಲ್ಲಿಯೂ ಆಗಿದ್ದಾರೆ. ಇಂಥ ಕೆಲಸದಲ್ಲಿ 'ಹೊಸದಿಗಂತ', 'ಉದಯವಾಣಿ'ಯ ಪಾತ್ರವನ್ನೂ ಹೇಳಲಾಗಿದೆ. ಅಂದರೆ ಅದನ್ನು ಸಹ ಮೊಗಮ್ ಆಗಿ ಹೇಳದೆ ನಿರ್ದಿಷ್ಟಗೊಳಿಸಲಾಗಿದೆ. ಹಿಂದೂ ಹುಡುಗಿಯನ್ನು ಮುಸ್ಲಿಂ ಹುಡುಗ ಚುಡಾಯಿಸಿದ ಘಟನೆಯಲ್ಲಿ ಪೊಲೀಸರು ಪಕ್ಷಪಾತ ನೀತಿ ಅನುಸರಿಸದಿದ್ದರೆ ಸುರತ್ಕಲ್ ಗಲಭೆ ಆಗುತ್ತಿರಲಿಲ್ಲ ಎಂದು ಉಡುಪಿ ಎಂ.ಪಿ.ಗಳಾದ ಎಂ. ಐ. ಜಯರಾಮ ಶೆಟ್ಟಿ, ಶಾಸಕರಾದ ಯೋಗೀಶ ಭಟ್, ಕುಂಬ್ಳೆ ಸುಂದರರಾವ್, ಬಾಲಕೃಷ್ಣ ಭಟ್ ಮುಂತಾದವರು ಹೇಳುವ ಮಾತು ಮಾತ್ರ ಎಷ್ಟು ಸುಳ್ಳು ಮತ್ತು ಹೊಣೆಗೇಡಿತನದ್ದು ಎಂಬುದು ಇಲ್ಲಿ ತಿಳಿಯುತ್ತದೆ. ''ಪೊಲೀಸರು ಸೆಕ್ಯುಲರ್ ನಾಯಿಗಳು, ಸರಕಾರದಿಂದ ಮತ್ತು ಈ ನಾಯಿಗಳಿಂದ ಹಿಂದುಗಳ ರಕ್ಷಣೆಯಿಲ್ಲ. ಹಿಂದುಗಳು ತಮ್ಮ ರಕ್ಷಣೆಯನ್ನು ತಾವೇ ಮಾಡಿಕೊಳ್ಳಬೇಕು. ಬೀದಿಗಿಳಿದು ಮುಸ್ಲಿಮರನ್ನು ಶಿಕ್ಷಿಸಬೇಕು'' ಎಂದು ಹಿಂದು ಜಾಗರಣ ಸಮಿತಿಯ ಪ್ರಾಂತೀಯ ಸಂಚಾಲಕ ಜಗದೀಶ ಕಾರಂತ ಸಾರ್ವಜನಿಕವಾಗಿ ಕರೆ ಕೊಡುತ್ತಾರೆ. ಹತ್ಯೆಗೆ ಪ್ರಚೋದಿಸುವುದು ಕೂಡ ಕ್ರಿಮಿನಲ್ ಅಲ್ಲವೆ ?

ಇಂಥವರು ಹಬ್ಬಿಸುವ ಸುಳ್ಳು ಸುದ್ದಿಯನ್ನೂ ಇಲ್ಲಿ ಬಯಲು ಮಾಡಲಾಗಿದೆ. ''ಚೊಕ್ಕ ಬೆಟ್ಟು ಮಸೀದಿಯ ಬಳಿ ರಿಕ್ಷಾ ನಿಲ್ಲಿಸಿ ಮೂವರು ಹಿಂದೂ ಯುವತಿಯರ ಮೇಲೆ ಅತ್ಯಾಚಾರ ಮಾಡಿದ್ದಾರೆ'' ಎಂಬ ಸುದ್ದಿಯನ್ನು ಹಬ್ಬಿಸಲಾಯಿತು. ಆದರೆ ಅಲ್ಲಿ ಆದದ್ದೇನು ? ರಿಕ್ಷಾದ ಮೇಲೆ ಹೋಗುತ್ತಿದ್ದ ಯುವತಿಯರಿಗೆ ತೊಂದರೆ ಆಗದಂತೆ ಮುಸ್ಲಿಂ ಹಿರಿಯರೇ ರಿಕ್ಷಾಕ್ಕೆ ದಾರಿ ಮಾಡಿಕೊಟ್ಟಿದ್ದಾರೆ. ಇದನ್ನು ಆ ಮೂರು ಯುವತಿಯರೇ ಪ್ರತ್ಯಕ್ಷ ಹೇಳಿಕೆ ಕೊಟ್ಟಿದ್ದಾರೆ. ಇದು ಒಂದು ಉದಾಹರಣೆ ಅಷ್ಟೆ.

ಹಲ್ಲೆಗೊಳಗಾದವರಲ್ಲಿ ಚೆಳ್ಯಾರಿನ ಅಬ್ದುಲ್ ಖಾದರರೂ ಒಬ್ಬರು. ೬೫ ವರ್ಷದ ಹಿರಿಯ ೪೦ ವರ್ಷಗಳಿಂದ ಒಂದು ದಿನಸಿನ ಅಂಗಡಿ ಇಟ್ಟುಕೊಂಡಿದ್ದಾರೆ. ಸುತ್ತಲಿನವರ ಪ್ರಕಾರ ಅವರು ''ದೇವರಂತಹ ಮನುಷ್ಯರು.'' ಆದರೆ ಕೋಮುವಾದಿಗಳಿಗೆ ಮುಸ್ಲಿಮ್ ಒಬ್ಬ ದೇವರಂತಹ ಮನುಷ್ಯರಾಗಲು ಹೇಗೆ ಸಾಧ್ಯ ? ''ನೀವು ಹೆದರಿಕೊಳ್ಳೋದು ಬೇಡ ನಾವೆಲ್ಲ ಇದ್ದೇವೆ'' ಎಂದು ಹೇಳಿ ಹೋದವರೆ ಸಂಜೆ ನಾಲ್ಕು ಗಂಟೆಗೆ ಮೊದಲು ಮಾಡಿದ ಕೆಲಸ ಟೆಲಿಫೋನ್ ಲೈನ್ ಕತ್ತರಿಸಿದ್ದು. ಖಾದರ್ ತಮ್ಮ ಹೆಂಗಸರು ಮಕ್ಕಳನ್ನೆಲ್ಲ ಕಟ್ಟಿಕೊಂಡು ಮನೆಯ ಹಿಂಬದಿ ಇರುವ ಗುಡ್ಡದ ಬೆಟ್ಟದಲ್ಲಿ ಬೆಳಗಿನತನಕ ಅಡಗಿ ಕುಳಿತುಕೊಳ್ಳುತ್ತಾರೆ. ಅಳುವ ಮಕ್ಕಳ ಬಾಯಿ ಮುಚ್ಚಿ ಹಿಡಿಯುತ್ತಾರೆ. ಮರುದಿನ ಪೊಲೀಸರನ್ನು ಕರೆತಂದ ನಂತರವೇ ಮನೆಗೆ. ಆದರೆ ಅದೇ ದಿನ ಸಂಜೆ ೬ ಗಂಟೆಗೆ ಒಂದು ಗುಂಪು ಬಂತು. ಚೆಳ್ಯಾರು ಪಂಚಾಯಿತಿ ಸದಸ್ಯೆ ಚಂದ್ರಾವತಿ, 'ಹೋಗಿ ಬಾಗಿಲು ಒಡೆಯಿರಿ. ನಾನು ಗಂಡಸಾಗಿದ್ದರೆ ಇಷ್ಟರಲ್ಲೇ ಕೆಲಸ ಮುಗಿಸುತ್ತಿದ್ದೆ' ಎಂದು ಒದರುತ್ತಿದ್ದರು. ಕೊನೆಗೆ ಅಂಗಡಿಯಲ್ಲಿ ಉಳಿಸಿಹೋದದ್ದು ಕೇವಲ ಉಪ್ಪಿನ ಚೀಲ ಮಾತ್ರ. ಇನ್ನು ಬೇರೆ ಕಡೆ ಚಿನ್ನದ ಆಭರಣ, ಸೀರೆ ಇತ್ಯಾದಿಗಳನ್ನು ಲೂಟಿ ಮಾಡಿದ್ದಾರೆ. ಉದಾಹರಣೆಗಾಗಿ ಇದು ಒಂದು ಘಟನೆ.

ಹಿಂದುಗಳ ಹತ್ಯೆಯೂ ನಡೆದಿದೆ. ಅದೂ ಪರಮ ಅನ್ಯಾಯವೇ. ಹಿಂದೂಗಳು ಮುಸ್ಲಿಮರನ್ನು ರಕ್ಷಿಸಿದ ಸಂಗತಿಗಳ ದಾಖಲೆಯೂ ಇಲ್ಲಿದೆ. ಆದರೆ ಇದಕ್ಕಿಂತ ಈ ಗಲಭೆಯ ನಂತರ ಹಿಂದುಗಳ ಮನಸ್ಸಿನಲ್ಲಿ ಉಂಟಾದ ಹಿಂದೂ ಪಕ್ಷಪಾತ, ಮುಸ್ಲಿಂ ದ್ವೇಷ ಭಯಾನಕವಾದುದು. ಅಂತೆಯೇ ಮುಸ್ಲಿಮರಲ್ಲಿಯ ಅನುಮಾನ, ಅತಂತ್ರತೆ ಇವುಗಳ ಸಾಕ್ಷಿ ಸಹಿತ ಉಲ್ಲೇಖ ಇಲ್ಲಿದೆ. ಇದು ನಿಶ್ಚಯವಾಗೂ ಗಂಭೀರ ಸಂಗತಿ ಮತ್ತು ಭಯಾನಕವಾದುದು. ಇದರ ನಿವಾರಣೆಯ ಅವಶ್ಯಕತೆಯನ್ನು ಪುಸ್ತಕ ಮನದಟ್ಟು ಮಾಡುತ್ತದೆ.

ಎಲ್ಲೇ ಕೋಮುಗಲಭೆ ನಡೆದಾಗ ಇಂತಹ ಘಟನೆ ನಡೆಯುವುದು ಸಾಮಾನ್ಯವಾಗಿದೆ. ಭಟ್ಕಳದಲ್ಲಿ ಕೋಮುಗಲಭೆಯಾದಾಗ ಸ್ವತಃ ವಿಡಂಬಾರಿ (ಹಿರಿಯ ಚುಟುಕು ಕವಿ) ಶಿರಾಲಿಯತ್ತ ತನ್ನ ಪಕ್ಕದ ಮನೆಯ ಮುಸ್ಲಿಂ ಕುಟುಂಬವೊಂದಕ್ಕೆ ಒಂದು ರಾತ್ರಿ ತನ್ನ ಮನೆಯಲ್ಲಿ ಆಶ್ರಯ ಕೊಟ್ಟು ರಕ್ಷಿಸಿದ್ದಕ್ಕಾಗಿ ತನ್ನ ಬಾಡಿಗೆ ಮನೆಯನ್ನೇ ಬಿಡಬೇಕಾಗಿ ಬಂದ ಘಟನೆ ನಡೆದಿದೆ. ಈ ಪುಸ್ತಕವನ್ನು ಓದಿದಾಗ ಭಟ್ಕಳದಲ್ಲಿ ನಡೆದ ಕೋಮುಗಲಭೆಯ ಬಗ್ಗೆ ಉತ್ತರ ಕನ್ನಡ ಜಿಲ್ಲೆಯ ಬುದ್ಧಿಜೀವಿಗಳೆಂದುಕೊಳ್ಳುವ ನಾವು ಇಂಥ ಒಂದು ಅಭ್ಯಾಸವನ್ನು ಮಾಡಿ ಸತ್ಯ ಸಂಗತಿಗಳನ್ನು ಬಯಲು ಮಾಡಲಿಲ್ಲವಲ್ಲಾ ಎನ್ನುವ ವಿಷಾದ ನನ್ನನ್ನು ಆವರಿಸಿತು.

ಡಾ|| ಆರ್. ವಿ. ಭಂಡಾರಿ
ಅರೆಅಂಗಡಿ-೫೮೧ ೪೫೦, ಹೊನ್ನಾವರ - ಉ. ಕ.

# ನಿರ್ಮಾಣ ಕ್ಷೇತ್ರದಲ್ಲಿ ಹೊಸತು
# ರಿಯಾಕ್ಟಿವ್ ಪೌಡರ್ ಕಾಂಕ್ರೀಟು

**ಕಾಂಕ್ರೀಟಿನ** ಪರಿಚಯ ಯಾರಿಗಿಲ್ಲ! ಇದರ ಬಳಕೆಯು ಅಪಾರವಾಗಿ ಆಗುತ್ತಿದೆ. ಏಕೆಂದರೆ, ಕಾಂಕ್ರೀಟಿನ ಕಟ್ಟಡಗಳು ದುರಸ್ತಿಯ ಅವಶ್ಯಕತೆಯಿಲ್ಲದೆ ಬಹುಕಾಲ ಬಾಳಿಕೆ ಬರುವಂತಹವು. ಇದೊಂದು ಇಂಜಿನಿಯರಿ ವಸ್ತು - ಇಂಜಿನಿಯರಿ ಮತ್ತು ವೈಜ್ಞಾನಿಕ ಸೂತ್ರಗಳನ್ನು ಅಳವಡಿಸಿಕೊಂಡು ತಯಾರಿಸಬೇಕಾದುದು. ಆದರೂ ಎಲ್ಲರೂ ಬಳಸುತ್ತಿದ್ದಾರೆ. ಎಲ್ಲರೂ ಅಂದರೆ, ಪರಿಣತರು ಮತ್ತು ಪರಿಣತರಲ್ಲದವರು. ಇವರೆಲ್ಲರೂ ಕಾಂಕ್ರೀಟಿನ ಕಟ್ಟಡಗಳನ್ನು ಎಲ್ಲೆಲ್ಲೂ ಕಟ್ಟಿದ್ದೇ ಕಟ್ಟಿದ್ದು! ಆದರೆ, ಇಂಜಿನಿಯರಿ ನಿಯಮಗಳನ್ನೂ, ಒಳ್ಳೆಯ ಸಂಪ್ರದಾಯಗಳನ್ನೂ ಅಳವಡಿಸಿಕೊಂಡು ನಿರ್ಮಿಸುವವರು ಎಷ್ಟು ಮಂದಿ ? ಬಹಳ ಸ್ವಲ್ಪವೇ! ಬಹುಕಾಲ ಬಾಳಿಕೆ ಬರಬೇಕಾದ ಕಾಂಕ್ರೀಟಿನ ಕಟ್ಟಡಗಳು, ತಮ್ಮ ಸೇವಾ ಅವಧಿಯಲ್ಲೇ ದುರಸ್ತಿ ಮತ್ತು ಪುನರುಜ್ಜೀವನಕ್ಕೊಳಗಾಗ ಬೇಕಾಗಿವೆ. ಇದಕ್ಕೆ ಕೋಟ್ಯಾಂತರ ರೂಪಾಯಿಗಳನ್ನು ಒದಗಿಸ ಬೇಕಾಗಿದೆ. ಇದೊಂದು ಇಂಜಿನಿಯರಿ ದುರಂತವೇ ಸರಿ.

**ಕಾಂಕ್ರೀಟು** : ಸಿಮೆಂಟು, ಮರಳು, ಜಲ್ಲಿ ಮತ್ತು ನೀರಿನ ಮಿಶ್ರಣವೆ ಕಾಂಕ್ರೀಟು. ಮರಳು ಮತ್ತು ಜಲ್ಲಿಯನ್ನು ಸಮಷ್ಟಿ (ಅಗ್ರಿಗೇಟ್) ಎನ್ನುವರು. ಮರಳು ಸೂಕ್ಷ್ಮ ಸಮಷ್ಟಿ, ಜಲ್ಲಿಯು ಸ್ಥೂಲ ಸಮಷ್ಟಿ. ಕಲ್ಲಿನ ವಿವಿಧ ಅಳತೆಯ ಕಣಗಳ ರಾಶಿಯೇ ಜಲ್ಲಿ. ಕಲ್ಲಿಗೆ ಬದಲಾಗಿ ಹಲವು ಇತರ ಪದಾರ್ಥಗಳನ್ನೂ ಬಳಸುತ್ತಾರೆ. ಮರಳಿಗೆ ಬದಲಾಗಿ ಕಲ್ಲಿನ ಸೂಕ್ಷ್ಮ ಕಣಗಳನ್ನೂ ಬಳಸುತ್ತಾರೆ.

ಸಿಮೆಂಟು ಒಂದು ರಾಸಾಯನಿಕ ವಸ್ತುವೆಂದರೂ ತಪ್ಪಾಗದು. ಸಿಮೆಂಟು ನೀರಿನೊಂದಿಗೆ ಸಂಪರ್ಕ ಹೊಂದಿದಾಗ ಎಲ್ಲಾ ಪರಿಕರಗಳೂ ಏಕಾಂಡವಾಗಿ ಬಂಧಿಸಲ್ಪಟ್ಟು, ಈ ವಸ್ತು ಗಳ ರಾಶಿಯು (ಮಾಸ್) ಬಿರುಸಾಗಿ, ಬಲಯುತವಾಗುತ್ತದೆ.

ಹಸಿಯ ಕಾಂಕ್ರೀಟಿನಲ್ಲಿ ಕೆಲವು ವಿಶಿಷ್ಟ ಗುಣಗಳನ್ನು ಪಡೆಯಲು ಹಲವು ಇತರೆ ವಸ್ತುಗಳನ್ನೂ ಬಳಸುವರು. ಇವುಗಳನ್ನು ಸಂಕರಗಳೆಂದು ಕರೆಯುವರು.

ಈ ಸಾಂಪ್ರದಾಯಿಕ ಕಾಂಕ್ರೀಟು ಅಪಾರ ಪ್ರಮಾಣದಲ್ಲಿ ಬಳಕೆಯಾಗುತ್ತಿದ್ದರೂ, ಇದರ ಬಗ್ಗೆ ಇಂಜಿನಿಯರುಗಳು ಅರಿತಿರುವುದು ಸ್ವಲ್ಪವೇ ! ಕಾಂಕ್ರೀಟಿನಿಂದ ಅನುಕೂಲ ಗಳೆಷ್ಟು ದೊರೆತಿವೆಯೋ, ಅಷ್ಟೇ ಸಮಸ್ಯೆಗಳು ಉದ್ಭವಿಸಿವೆ. ಆದ್ದರಿಂದ ಕಾಂಕ್ರೀಟನ್ನು ಅರಿಯಲು ಸಂಶೋಧನೆಗಳೂ ನಡೆಯುತ್ತಲೇ ಇವೆ. ಆಗಾಗ ಹೊಸ ವಿಚಾರಗಳು ಬೆಳಕಿಗೆ ಬರುತ್ತವೆ. ಇದರ ಫಲವೇ - ರಿಯಾಕ್ಟಿವ್ ಪೌಡರ್ ಕಾಂಕ್ರೀಟು (ರಿಪಕಾ).

**ರಿಪಕಾ** : ಸಾಧಾರಣ ಕಾಂಕ್ರೀಟಿನಲ್ಲಿ ಬಳಸುವ ಸ್ಥೂಲ ಹಾಗೂ ಸೂಕ್ಷ್ಮ ಸಮಷ್ಟಿಗಳಿಗೆ ಬದಲಾಗಿ ಅತಿ ಸೂಕ್ಷ್ಮ ಕಣಗಳುಳ್ಳ ಸಮಷ್ಟಿಯನ್ನು ಬಳಸಿ ತಯಾರಿಸಿದುದು - ರಿಪಕಾ. ಇದನ್ನು ಗಾರೆಯೆಂದರೂ ಒಪ್ಪುತ್ತದೆ. ಕಣಗಳ ಅಳತೆಯು ೦.೬೦ದಿಂದ ೦.೦೦೦೧ ಮಿ.ಮೀ.ವರೆಗೂ ಇರುತ್ತದೆ. ಅವಶ್ಯಕತೆಗೆ ಅನುಗುಣವಾಗಿ, ಸಂಪೂರ್ಣವಾದ ಅಡಕಣೆಯನ್ನು ಪಡೆಯಲು, ಕಣಗಳ ಅಳತೆಯನ್ನು ಸೂಕ್ತವಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ.

---

ಎಂ.ಜಿ. ಶ್ರೀನಿವಾಸನ್

---

ರಿಪಕಾದ ವಿವಿಧ ಪರಿಕರಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ಬೆರೆಸುತ್ತಾರೆ. ಅದರ ಮಿಶ್ರಣದ ಒಂದು ಮಾದರಿ ಹೀಗಿದೆ :

ಸಿಮೆಂಟು - ೭೧೦ ಕಿ.ಗ್ರಾಂ, ಮರಳು - ೧೦೧೧ ಕಿ.ಗ್ರಾಂ, ಬೆಣಚುಕಲ್ಲಿನ ಪುಡಿ - ೨೧೦ ಕಿ.ಗ್ರಾಂ, ಅತಿ ನಮ್ಯಕಾರಕ - ೧೯ ಲೀ, ಸಿಲಿಕಾ ಫ್ಯೂಂ - ೨೩೦ ಕಿ.ಗ್ರಾಂ, ನೀರು - ೨೦೦ ಲೀ, ಉಕ್ಕಿನ ತಂತುಗಳು - ೧೯೦ ಕಿ.ಗ್ರಾಂ.

ಸಮಷ್ಟಿಯ ಕಣಗಳು ಅತಿ ಸೂಕ್ಷ್ಮವಾಗಿರುವುದರಿಂದ, ಹಸಿಯ ಕಾಂಕ್ರೀಟು, ಅಂದರೆ ಆಗ ತಾನೆ ಕಲಸಿದ ಬಿರುಸಾಗಿಲ್ಲದ ಕಾಂಕ್ರೀಟು, ನಮ್ಯವಾಗಿರಲು ಹೆಚ್ಚಿಗೆ ನೀರನ್ನು ಬೆರೆಸಬೇಕಾಗುತ್ತದೆ. ಆದರೆ ನೀರನ್ನು ಹೆಚ್ಚಿಗೆ ಬೆರೆಸಿದಷ್ಟೂ, ಬಲಿತ ಅಂದರೆ ಗಟ್ಟಿಯಾದ ಕಾಂಕ್ರೀಟಿನ ಸಾಮರ್ಥ್ಯವು ಕಡಿಮೆಯಾಗುತ್ತದೆ. ಇದು ಸಾಧಾರಣ ಕಾಂಕ್ರೀಟಿಗೂ ಅನ್ವಯಿಸುತ್ತದೆ. ಆದ್ದರಿಂದ ಸಾಮರ್ಥ್ಯವು ಕಡಿಮೆಯಾಗದಂತಿರಲು, ಎಷ್ಟು ಬೇಕೋ ಅಷ್ಟು ಮಾತ್ರ ನೀರನ್ನು ಬಳಸಿದರೂ ಸೂಕ್ತವಾದ ನಮ್ಯತೆಯನ್ನು ಪಡೆಯಲು, ಅತಿನಮ್ಯಕಾರಕ (ಸೂಪರ್ ಪ್ಲಾಸ್ಟಿಸೈಜರ್) ಎಂಬ ರಾಸಾಯನಿಕ ಸಂಕರವನ್ನು ಬೆರೆಸುವರು.

ಸಿಮೆಂಟು ನೀರಿನೊಂದಿಗೆ ಸಂಪರ್ಕ ಹೊಂದಿದಾಗ, ಜಲ ಸಂಯೋಜನೆ (ಹೈಡ್ರೇಷನ್) ಎಂಬ ರಾಸಾಯನಿಕ ಕ್ರಿಯೆಯು ನಡೆಯುತ್ತದೆ. ಈ ಸಂದರ್ಭದಲ್ಲಿ ಕ್ಯಾಲ್ಸಿಯಂ ಹೈಡ್ರಾಕ್ಸೈಡಿನ ಬಿಡುಗಡೆ ಆಗುತ್ತದೆ. ಇದು ಕಾಂಕ್ರೀಟಿನ ಬಾಳಿಕೆಗೆ ಹಾನಿಕರ. ಇದರೊಂದಿಗೆ ರಾಸಾಯನಿಕವಾಗಿ ವರ್ತಿಸಿ, ಅದನ್ನು ಸ್ಥಿರವಾದ ರಾಸಾಯನಿಕ ಸಂಯುಕ್ತವನ್ನಾಗಿ ಮಾರ್ಪಡಿಸಲು, ಪೊಜೋಲಾನ ಎಂಬ ವಸ್ತುವನ್ನು ಬೆರೆಸುತ್ತಾರೆ. ಪೊಜೋಲಾನದ ಬಳಕೆಯಿಂದ ರಿಪಕಾದ ಜಲಾಭೇದ್ಯತೆಯು ಹೆಚ್ಚುತ್ತದೆ. ಜಲಸಂಯೋಜನೆಯ ಸಮಯದಲ್ಲಿ ಉತ್ಪತ್ತಿಯಾಗುವ ಹಾನಿಕಾರಕ ಶಾಖವೂ ಕಡಿಮೆಯಾಗುತ್ತದೆ, - ಒಟ್ಟಿನಲ್ಲಿ ಬಾಳಿಕೆಯು ಹೆಚ್ಚುತ್ತದೆ. ಇದು ಸಾಧಾರಣ ಕಾಂಕ್ರೀಟಿಗೂ ಅನ್ವಯಿಸುತ್ತದೆ. ರಿಪಕಾದಲ್ಲಿ ಬಳಸುವ ಸಿಲಿಕಾಫ್ಯೂಂ ಎಂಬುದು ಈಚಿನ ಒಂದು ಉತ್ಕೃಷ್ಟ ಪೊಜೋಲಾನ.

ರಿಪಕಾದ ಸಾಮರ್ಥ್ಯವು ಅಪಾರವಾಗಿರುತ್ತದೆ. ಆದರೆ ಅದರ ತಾಂತವತೆಯು (ಡಕ್ಟಿಲಿಟಿ) ಕಡಿಮೆ. ಉಕ್ಕಿನ ಗಿಡ್ಡ ತಂತು (ಫೈಬರ್)ಗಳನ್ನು ಬೆರೆಸುವುದರಿಂದ, ಅದರ ತಾಂತವತೆಯು ಬಹಳವಾಗಿ ಹೆಚ್ಚುತ್ತದೆ. ಬಿರುಕು ಸುಲಭವಾಗಿ ಉಂಟಾಗುವುದಿಲ್ಲ.

ಕಾಂಕ್ರೀಟಿನ ಸಾಮರ್ಥ್ಯ ವೃದ್ಧಿಗೆ ಅಥವಾ ಬಲವೃದ್ಧಿಗೆ, ಸಿಮೆಂಟಿನ ಜಲಸಂಯೋಜನೆಯೇ ಕಾರಣ. ಇದು ತಡೆಯಿಲ್ಲದೆ ಪರಿಪೂರ್ಣವಾಗಿ ನಡೆಯಲು ಕ್ಯೂರಣೆ ಎಂಬ ಪ್ರಕ್ರಿಯೆಯನ್ನು ನಡೆಸುವರು. ಕಾಂಕ್ರೀಟಿನ ಕ್ಯೂರಣೆಯ ಒಂದು ಸಾಮಾನ್ಯ ವಿಧಾನ - ನೀರನ್ನು ಸಿಂಪಡಿಸುವುದು ಅಥವಾ ನೀರನ್ನು ಕಟ್ಟುವುದು. ರಿಪಕಾದ ಕ್ಯೂರಣೆಗೆ ೯೦° ಸೆಲ್ಸಿಯಸ್ ತಾಪದ ಬಿಸಿನೀರನ್ನೋ, ಹಬೆಯನ್ನೋ, ೪೦೦° ಸೆಲ್ಸಿಯಸ್ ತಾಪದ ಬರೀಶಾಖವನ್ನೋ ಬಳಸುವರು. ಇದರಿಂದ ರಿಪಕಾದ ಪರಿಕರಗಳ ಪ್ರಮಾಣಕ್ಕನುಗುಣವಾಗಿ ೨೦೦೦ದಿಂದ ೮೦೦೦ ಕಿ.ಗ್ರಾಂ. ಚ.ಸೆಂ. (ಚದರ ಸೆಂಟಿ ಮೀಟರ್) ಸಾಮರ್ಥ್ಯವನ್ನು ಪಡೆಯಬಹುದಾಗಿದೆ. ನಾವು ಸರ್ವೇಸಾಮಾನ್ಯವಾಗಿ ಬಳಸುವ ಸಾಮರ್ಥ್ಯ ೧೫೦ ಅಥವಾ ೨೦೦ ಕಿ.ಗ್ರಾಂ./ಚ.ಸೆಂ. ಎಂಬುದನ್ನು ಗಮನಿಸಬೇಕು.

**ಅನುಕೂಲಗಳು** : ರಿಪಕಾನ ಅನುಕೂಲಗಳೆಂದರೆ,

- ಅಪಾರವಾದ ಸಾಮರ್ಥ್ಯ. ಆದ್ದರಿಂದ ನಿರ್ಮಾಣ ಕ್ಷೇತ್ರದಲ್ಲಿ ಉಕ್ಕಿನೊಂದಿಗೆ ಸ್ಪರ್ಧಿಸಬಲ್ಲದು.
- ಅಪಾರವಾದ ತಾಂತವತೆ. ಇದರಿಂದ ನಿಗದಿತ ಮಿತಿಗಿಂತ ಹೆಚ್ಚಿನ ಭಾರವು ಕಟ್ಟಡದ ಮೇಲೆರಗಿದರೂ, ನಂಬಿಕಾರ್ಹವಾಗಿ ಸೇವೆ ಸಲ್ಲಿಸುತ್ತದೆ.
- ಪರ್ಯಾಯವಾಗಿ ಹೆಪ್ಪುಕಟ್ಟಿ ಕರಗುವ ಕ್ರಿಯೆಯು ನಡೆಯುವ ಸನ್ನಿವೇಶಗಳಲ್ಲಿ ಇದು ಸುಲಭವಾಗಿ ಶಿಥಿಲವಾಗುವುದಿಲ್ಲ.
- ಹೆಚ್ಚು ತೋಯ್ತ ನಿರೋಧಿ
- ಉಕ್ಕಿನ ತಂತುಗಳ ಬಳಕೆಯಿಂದ ನಮನದ ಸಾಮರ್ಥ್ಯವು ಅಧಿಕವಾಗಿರುತ್ತದೆ. ಅಂದರೆ ಸರಳ

([illegible] ನೇ ಪುಟಕ್ಕೆ)



ವಾಷಿಂಗ್ಟನ್ ಡಿ.ಸಿ., ಮೇ ತಿಂಗಳ ಮುಂಜಾನೆ. ಲಫಾಯಿತ್ ಪಾರ್ಕಿನ ಮೂಲಕ ನಾನು, ಮಾಲತಿ ಪೆನ್ಸಿಲ್ವೇನಿಯಾ ಅವೆನ್ಯೂಗೆ ಬಂದೆವು. ಬರುತ್ತಿದ್ದಂತೆ ಭವ್ಯ ಶ್ವೇತ ಭವನಕ್ಕೂ ಮೊದಲು ಕಂಡದ್ದು 'ವೈಟ್ ಹೌಸ್' ಎದುರಿನ ಪಾರ್ಕಿಗಂಟಿದ ಫುಟ್‌ಪಾತಿನಲ್ಲಿ ಈ ಮಹಿಳೆ ! ತಲೆಗೆ ದಪ್ಪನೆಯ ಮುಂಡಾಸು ಸುತ್ತಿ, ಬೆಳಗಿನ ಚಳಿಗೆ ತುಂಬು ತೋಳಿನ ಷರಾಯಿ ಹಾಕಿ ಕುಳಿತ ಈ ಮಹಿಳೆ ತಟ್ಟನೆ ನನ್ನ ಕುತೂಹಲ ಕೆರಳಿಸಿದಳು. ಆಕೆಯ ಎರಡೂ ಬದಿಗೂ ದೊಡ್ಡ ದೊಡ್ಡ ಬೋರ್ಡುಗಳು. ಅಮೆರಿಕದ ಅಣ್ವಸ್ತ್ರ ನೀತಿಯನ್ನು ವಿರೋಧಿಸಿ ಕೂಗಿದ ಬೋರ್ಡುಗಳು. ಜನಹತ್ಯೆಯ ಶಸ್ತ್ರಗಳನ್ನು ತ್ಯಜಿಸಲು ಬೇಡಿದ ಆರು ಅಡಿಯ ಬೋರ್ಡುಗಳು. ಹತ್ತಿರದ ಮರಗಳಿಂದ ಅಳಿಲುಗಳು ಬುಡಬುಡನೆ ಈಕೆಯ ಬಳಿಗೆ ಬಂದು ಕಡಲೆಕಾಯಿ ಇಸಕೊಂಡು ಅಲ್ಲೇ ಕುಳಿತು ತಿನ್ನುತ್ತಿದ್ದವು. ಈಕೆ ಕಡಲೆಕಾಯಿ ಬಿಡಿಸಿ ಬೀಜಗಳನ್ನು ಕೈಯಲ್ಲಿ ಹಿಡಿದೊಡನೆ ಗುಬ್ಬಚ್ಚಿಗಳು ಹಾರಿ ಬಂದು ಈಕೆಯ ಕೈಯಿಂದಲೇ ಬೀಜ ಎತ್ತಿಕೊಂಡು ಹೋಗುತ್ತಿದ್ದವು. ಯಾರೀಕೆ ? ಗುಬ್ಬಚ್ಚಿ ಅಳಿಲುಗಳ ಒಡನಾಟದಲ್ಲಿ



'ಶಾಂತಿಯ ಕಾವಲುಗಾರ್ತಿ' ಕೋನಿಯ ಜೊತೆ ಲೇಖಕಿ

## ಆಗಸ್ಟ್ ೬ - ಶಾಂತಿದಿನ

# ಶ್ವೇತಭವನದ ಮುಂದೆ-೨೦ ವರ್ಷ

ನೇಮಿಚಂದ್ರ

ಫುಟ್‌ಪಾತಿನ ಮೇಲೆ ಝೂಂಡಾ ಊರಿರುವ ಮಹಿಳೆ. 'ಯಾರಮ್ಮಾ ತಾಯಿ ನೀನು ?' ಎಂದು ಅಲ್ಲೇ ಫುಟ್‌ಪಾತಿನಲ್ಲಿ ಕುಳಿತು ಆಕೆಯ ಸಂದರ್ಶನ ಆರಂಭಿಸಿದೆ.

೫೬ ವರ್ಷದ ಈ ಮಹಿಳೆ ೨೦ ವರ್ಷಗಳಿಂದ ಶ್ವೇತ ಭವನದ ಎದುರು ಪ್ರತಿಭಟಿಸುತ್ತಾ ಕುಳಿತಿದ್ದಾಳೆ ! ಇಷ್ಟು ವರ್ಷ ಇಲ್ಲಿ ಕುಳಿತರೂ, ಈಕೆಯ ಎದುರು ಮನೆಯವನನ್ನು ನೋಡಲಾಗಿಲ್ಲ. ತನ್ನೆಲ್ಲ ಪುಡಿಗಂಟುಗಳನ್ನು ಒಟ್ಟೈಸಿ ಇಲ್ಲಿ ಕುಳಿತಿದ್ದಾಳೆ. ದಿನಾ ಅಮೆರಿಕದ ಅಧ್ಯಕ್ಷರು, ಆತನ ಕುಟುಂಬ ಎದುರಿನ ಫುಟ್‌ಪಾತಿನ ಈ ದಿಟ್ಟ ಮಹಿಳೆಯನ್ನು ನೋಡುತ್ತಾರೆ. ರೋನಾಲ್ಡ್ ರೀಗನ್‌ರಿಂದ ಬುಷ್‌ವರೆಗೆ ಎಲ್ಲಾ ಅಧ್ಯಕ್ಷರೂ ಈಕೆಯನ್ನು ಕಂಡಿದ್ದಾರೆ. ಯಾರೊಬ್ಬರೂ ಈಕೆಯನ್ನು ಮಾತನಾಡಿಸಿದ್ದಿಲ್ಲ. ಬದಲು ಈಕೆಯ ಪ್ರತಿಭಟನೆಯನ್ನು ಮೊಟಕು ಮಾಡಲು ಒಂದಿಲ್ಲೊಂದು ಕಾನೂನು-ಹೇರುತ್ತಾರೆ. ಪೊಲೀಸರು, ಸೈನಿಕರು ಈಕೆಯನ್ನು ಬಡಿದದ್ದು ಎಷ್ಟು ಬಾರಿಯೋ. ರಕ್ತದಿಂದ ತೊಯ್ದ ಈಕೆಯ ಚಿತ್ರಗಳಿವೆ.

'ಈ ಸರಕಾರ ಬೊಂಬೆಯ ಸರಕಾರ, ಇದರ ಹಿಂದಿನ ಸೂತ್ರಧಾರಿಗಳು ಶಸ್ತ್ರ ವ್ಯಾಪಾರಿಗಳು. ಇಡೀ ಸಮುದಾಯವನ್ನು ಸುಟ್ಟು ಬೂದಿಯಾಗಿಸುವ ಅಸ್ತ್ರಗಳನ್ನು ಪೇರಿಸಿ ಇಡುತ್ತಾರೆ. ಅಸ್ತ್ರಗಳನ್ನು ಇಡೀ ಜಗತ್ತಿಗೆ ಮಾರುವ ದಳ್ಳಾಳಿಗಳ ಕೈಗೊಂಬೆಯಾಗಿದೆ ಈ ಸರಕಾರ. ಅಮೆರಿಕದ ದಿಗ್ಬಂಧನದಿಂದ ಇರಾಕಿನಲ್ಲಿ ದಿನಕ್ಕೆ ೫೦೦೦ ಮಕ್ಕಳು ಸಾಯುತ್ತಿದ್ದಾರೆ. ನಿಮಗೆ ಗೊತ್ತೆ ?' ಅಮೆರಿಕದ ಘೋರ ಕೃತ್ಯಗಳ ಬಗ್ಗೆ, ಪರಮ ನೀಚತನದ ಬಗ್ಗೆ, ಒಂದೇ ಸಮನೆ ನಿರರ್ಗಳವಾಗಿ ಮಾತನಾಡಿದಳು. ಅಂಕಿಅಂಶಗಳನ್ನು ಉಲ್ಲೇಖಿಸಿದಳು.

ಇಪ್ಪತ್ತು ವರ್ಷಗಳಿಂದ ವೈಟ್ ಹೌಸ್ ಎದುರಿನ ಫುಟ್‌ಪಾತಿನಲ್ಲಿ ಈಕೆಯ ವಾಸ. ಈಕೆಯದು ಪ್ರತಿಭಟನೆಯ ಬದುಕು. ತಲೆಗೆ ಭದ್ರ ಮುಂಡಾಸು. ಸಾಕಷ್ಟು ಬಾರಿ ಈಕೆಯನ್ನು ಇಲ್ಲಿಂದಟ್ಟಲು ಪೊಲೀಸರ ಲಾಠಿ ಪ್ರಹಾರವಾಗಿದೆ. ಈಕೆಯನ್ನು ಪೊಲೀಸರು ಬಾರಿಸಿ ಬಂಧಿಸಿ ಜೈಲಿಗೊಯ್ದದ್ದು ಲೆಕ್ಕವಿಲ್ಲದಷ್ಟು ಬಾರಿ. ತಲೆ ಕಾಯ್ದುಕೊಳ್ಳಲು ಒಳಗೊಂದು ಹೆಲ್ಮೆಟ್ ಇಟ್ಟುಕೊಂಡು ಸುತ್ತಿಕೊಂಡಂತೆ ಕಂಡಿತು. ಈಕೆಯ ಹೆಸರು ಕನ್ಸೆಪ್ಸಿಯನ್ ಪಿಸಿಯೋತೋ (Concepcion Picciotto). ಈಕೆಯನ್ನು ಎಲ್ಲರೂ ಕರೆಯುವುದು ಕೋನಿ ಎಂದು. ಹಗಲು, ಇರುಳು, ಬೆಳಗು, ಸಂಜೆ, ಬಿಸಿಲು, ಮಳೆ, ಚಳಿ ಎಲ್ಲಿ ಸಮಯದಲ್ಲೂ ಈಕೆ ಫುಟ್‌ಪಾತಿನಲ್ಲಿ ಕುಳಿತು ಪ್ರತಿಭಟಿಸುತ್ತಾಳೆ. ಬಂಧನ, ಬೆದರಿಕೆ, ಬೈಯ್ಗಳು ಎಲ್ಲದರ ನಡುವೆಯೂ ಅಚಲವಾಗಿ ನಿಂತಿದ್ದಾಳೆ.

ಈಕೆಯ ಫುಟ್‌ಪಾತ್ ಬದುಕು ಆರಂಭವಾದದ್ದು ೧೯೮೧ರ ಆಗಸ್ಟ್ ೧ನೇ ತಾರೀಖು. ಈ ಆಗಸ್ಟ್‌ಗೆ ಸರಿಯಾಗಿ ಇಪ್ಪತ್ತು ವರ್ಷಗಳ ಹಿಂದೆ ಆರಂಭವಾಯಿತು ಈಕೆಯ 'ಶಾಂತಿ ಕಾವಲು.' ಅಂದಿನಿಂದ ಇಂದಿನವರೆಗೂ ಈಕೆ ಪ್ರತಿ ಹಗಲು ರಾತ್ರಿ ಇಲ್ಲಿ ಕುಳಿತಿದ್ದಾಳೆ. ಫುಟ್‌ಪಾತೇ ಈಕೆಯ ಮನೆ. ಆದರೆ ಈಕೆ ಒಂಟಿಯಲ್ಲ. ಜೊತೆಗೆ ಅಳಿಲುಗಳು, ಗುಬ್ಬಚ್ಚಿಗಳು ಸದಾ ಸಂಗಾತಿ. ಪ್ರತಿಭಟನೆಯ ಸಂಗಾತಿ ಥಾಮಸ್ ಕೂಡಾ ಜೊತೆ ನೀಡುತ್ತಾನೆ. ಈಕೆ ಹಂಚುವ ಕರಪತ್ರಗಳು ಕೂಗುತ್ತವೆ : 'LIVE BY THE BOMB, DIE BY THE BOMB.' ಮತ್ತೊಂದು ಸಾರುತ್ತದೆ : 'CIVILISED PEOPLE DO NOT NUKE FELLOW HUMANS.' ಗುಂಡಾದ ಕಲ್ಲುಗಳನ್ನು ಆರಿಸಿ ಈಕೆ, ಅವುಗಳ ಮೇಲೆ 'ಶಾಂತಿ ಸಂದೇಶ'ವನ್ನು ಬಿಡಿಸುತ್ತಾಳೆ. ಕಪ್ಪೆ ಚಿಪ್ಪುಗಳನ್ನು ತುಂಡು ಕಾಗದಕ್ಕೆ ಅಂಟಿಸಿ, ಬಂದು ನಿಂತು ತನ್ನ ಪ್ರತಿಭಟನೆಯ ಕತೆಯನ್ನು, ಶಾಂತಿ ಸಂದೇಶವನ್ನು ಕೇಳಿದವರಿಗೆ ನೀಡುತ್ತಾಳೆ. ಇವನ್ನು ಈಕೆ ಮಾರುವುದಿಲ್ಲ. ನಾ ಏನನ್ನೂ ಕೊಡುವ ಮೊದಲೇ, ನನ್ನ ಕೈಗೆ 'ಕಪ್ಪೆ ಚಿಪ್ಪಿನ ಶಾಂತಿ ಸಂದೇಶ'ವನ್ನು ನೀಡಿದ್ದಳು. 'ನಿಮ್ಮ ಹೊಟ್ಟೆಪಾಡಿಗೇನು ಮಾಡುತ್ತೀರಿ ?' ಎಂದು ಕೇಳಿದಾಗ, 'ತನ್ನ ಶಾಂತಿಯ ಕಾವಲಿಗೆ ಮಿಡಿದು ಜನ ತಾವಾಗಿ ಕೊಟ್ಟ ಹಣದಿಂದ ನನ್ನ ಬದುಕು ಸಾಗುತ್ತದೆ' ಎಂದಳು. ಆಕೆಯ ದಿನದ ಅಗತ್ಯಗಳೆಂದರೆ ಕಾಫಿ, ಬ್ರೆಡ್ಡು, ಅಳಿಲುಗಳಿಗೆ, ಗುಬ್ಬಚ್ಚಿಗಳಿಗೆ ಕಡಲೆಕಾಯಿ.

ತನ್ನ ಪ್ರತಿಭಟನೆಯನ್ನು 'ಅಣ್ವಸ್ತ್ರ ವಿರುದ್ಧದ ಶಾಂತಿ ಕಾವಲು' ಎಂದು ಈಕೆ ಕರೆಯುತ್ತಾಳೆ. ಕರಪತ್ರಗಳನ್ನು ಹಂಚುತ್ತಾಳೆ. ಕೇಳಲು ನಿಂತವರೊಡನೆಲ್ಲ ಮಾತನಾಡುತ್ತಾಳೆ. ಈಕೆಯ ಸಂದೇಶ ಇಷ್ಟೆ : 'ಭೂಮಿಯ ಮೇಲೆ ಶಾಂತಿಗೊಂದು ಅವಕಾಶ ಕೊಡಿ.' 'ನನ್ನ ಬದುಕೆಲ್ಲ ಪ್ರತಿಭಟನೆಯಲ್ಲಿ ಫುಟ್‌ಪಾತಿನಲ್ಲಿ ಕಳೆದಿದೆ, ಆದರೂ ನನಗೆ ಇದೆಲ್ಲ ವ್ಯರ್ಥ ಎನಿಸಿಲ್ಲ, ನನ್ನ 'ಶಾಂತಿ ಕಾವಲು' ನಿಲ್ಲುವುದಿಲ್ಲ' ಎನ್ನುತ್ತಾಳೆ ಅರವತ್ತರತ್ತ ಸಾಗುತ್ತಿರುವ ಈ ಇಳಿ ವಯಸ್ಸಿನ ಮಹಿಳೆ !

ನಿಜಕ್ಕೂ ಯಾರೀಕೆ ? ಎಲ್ಲಿಂದ ಬಂದಳು ? ಪ್ರತಿ ಕ್ಷಣವನ್ನೂ ಹಣವಾಗಿ ಪರಿವರ್ತಿಸಬಲ್ಲ ಕೊಳ್ಳುಬಾಕ ಅಮೆರಿಕದಲ್ಲಿ ಹೊಟ್ಟೆಪಾಡಿಗೆ ಈಕೆ ಫುಟ್‌ಪಾತಿನಲ್ಲಿ ಕೂರಬೇಕಿರಲಿಲ್ಲ. ಬರ್ಗರ್ ಅಂಗಡಿಗಳಲ್ಲಿ, ಕೌಂಟರಿನಲ್ಲಿ ನಿಂತರೂ ಗಂಟೆಗೆ ಕನಿಷ್ಠ ೫. ೨೫ ಡಾಲರ್ ಸಿಗುತ್ತದೆ. ಈಕೆ ಕಾನೂನು ಬಾಹಿರವಾಗಿ ಅಮೆರಿಕೆಗೆ ಬಂದವಳೂ ಅಲ್ಲ. ಈಕೆ ಹುಟ್ಟಿದ್ದು ಸ್ಪೇನ್ ದೇಶದಲ್ಲಿ. ಇದ್ದೊಬ್ಬ ಅಜ್ಜ ತೀರಿಕೊಂಡಾಗ, ಹದಿನೆಂಟು ವರ್ಷದ ಕೋನಿ ಅಮೆರಿಕಗೆ ಬಂದಿಳಿದಳು. ಸ್ಪ್ಯಾನಿಷ್ ಕಾನ್ಸುಲೇಟಿನಲ್ಲಿ ಕಾರ್ಯದರ್ಶಿ ಕೆಲಸ ದೊರೆಯಿತು. ಇಪ್ಪತ್ತೊಂದರ ವಯಸ್ಸಿಗೆ ಇಟಲಿಯ ಉದ್ಯಮಿಯೊಡನೆ ವಿವಾಹವಾಯಿತು. ಏಳು ವರ್ಷದ ವಿವಾಹದಂಚಿಗೆ ಒಬ್ಬ ಮಗಳು ಜನಿಸಿದಳು. ಕೆಲವೇ ತಿಂಗಳ ನಂತರ ಕಿತ್ತಾಟದ ವಿಚ್ಛೇದನದಲ್ಲಿ ಕೋನಿ ಗಂಡನನ್ನು, ಮಗಳನ್ನು, ಕೆಲಸವನ್ನು, ಮನೆಯನ್ನು ಒಟ್ಟಿಗೇ ಕಳೆದುಕೊಂಡಳು. ಇವೆಲ್ಲವನ್ನು ಆಕೆ ತೇಲಿಸಿಬಿಡುತ್ತಾಳೆ, ತನ್ನ ಪ್ರತಿಭಟನಾ ಪೂರ್ವ ಬದುಕು ಅಮುಖ್ಯವೆಂಬಂತೆ. ಅದನ್ನು ವಿವರಿಸಲು ನಿರಾಕರಿಸುತ್ತಾಳೆ.

೧೯೮೦ರಲ್ಲಿ ಕೋನಿ, ಬೇಬಿ ಸಿಟ್ಟರ್ ಆಗಿ ಕೆಲಸ ಪಡೆದು, ತನ್ನ ರಜೆಯ ದಿನಗಳನ್ನೆಲ್ಲ ಶ್ವೇತ ಭವನದ ಮುಂದೆ ಅಣ್ವಸ್ತ್ರ ಪ್ರತಿಭಟನೆಯಲ್ಲಿ, ಶಾಂತಿ ಸಂದೇಶ ಹರಡುವಲ್ಲಿ ಕಳೆಯತೊಡಗಿದಳು. ಮೆಲ್ಲನೆ ಶ್ವೇತಭವನದ ಮುಂದಿನ ಇತರ ಪ್ರದರ್ಶನಕಾರರ ಪರಿಚಯವಾದಂತೆ, ಕೋನಿಯ ಉತ್ಸಾಹ ಹೆಚ್ಚಿತು. ಅಣ್ವಸ್ತ್ರ ವಿರೋಧಿ ಪ್ರತಿಭಟನೆ ಆಕೆಯ

ಗೀಳಾಯಿತು. ಬಾಳಿನ ಧ್ಯೇಯವಾಗಿ ಇಡೀ ಬದುಕನ್ನೇ ಆವರಿಸಿಬಿಟ್ಟಿತು. ಆಗ ರೋನಾಲ್ಡ್ ರೀಗನ್ ಅಮೆರಿಕದ ಅಧ್ಯಕ್ಷ. ಒಂದು ಬೇಸಿಗೆಯ ದಿನ ಕೋನಿ, ತನ್ನೆಲ್ಲ ಗಂಟು ಮೂಟೆ ಕಟ್ಟಿಕೊಂಡು ಪೆನ್ಸಿಲ್ವೇನಿಯಾ ಅವೆನ್ಯೂಗೆ ಬಸ್ಸು ಹಿಡಿದು ಬಂದು, ಇಲ್ಲಿ ಕುಳಿತವಳು ಇಂದಿನವರೆಗೂ ಈ ಫುಟ್‌ಪಾತಿನಲ್ಲೇ ತಳವೂರಿದ್ದಾಳೆ. ಅಲ್ಲಿಂದ ಮುಂದೆ ಥಾಮಸ್ ಎಂಬ ಒಬ್ಬಾತ ಈಕೆಯ ಪ್ರತಿಭಟನೆಗೆ ಜೊತೆಯಾದ. ತನ್ನ ಅಮೆರಿಕ ಪಾಸ್‌ಪೋರ್ಟ್ ಎಸೆದ ಕಾರಣಕ್ಕೆ ಆತನನ್ನು ಬ್ರಿಟನ್ನಿನಿಂದ ಹೊರದಬ್ಬಿದ್ದರು. ಒಂದು ಕಾಲಕ್ಕೆ ಕೋನಿಯ ಬಳಿ ಹದಿನೆಂಟು ಬೋರ್ಡುಗಳಿದ್ದವು. ಹತ್ತು ಅಡಿ ಎತ್ತರದವು ! ಪೊಲೀಸರು ಅವೆಲ್ಲವನ್ನು ಕಿತ್ತು ಹಾಕಿ ಇಂದು ಈಕೆಯ ಬಳಿ ಎರಡು ಬೋರ್ಡುಗಳು ಮಾತ್ರ ಉಳಿದಿವೆ. ದೈತ್ಯ ಶಕ್ತಿಯ ಅಮೆರಿಕ ಸರಕಾರ ಈ ಪುಟ್ಟ ಮಹಿಳೆಗೆ ಹೆದರಿದೆ, ನೂರೊಂದು ಕಾನೂನುಗಳನ್ನು ಪೇರಿಸಿಟ್ಟಿದೆ. ಯಾರೇ ಪ್ರತಿಭಟಿಸುವವರು ಎರಡಕ್ಕಿಂತ ಹೆಚ್ಚು ಬೋರ್ಡು ಇಟ್ಟುಕೊಳ್ಳುವಂತಿಲ್ಲ ಮತ್ತು ಅವು ಆರು ಅಡಿಗಿಂತ ಹೆಚ್ಚು ಎತ್ತರ ಇರುವಂತಿಲ್ಲ ಎಂಬ ನಿರ್ಬಂಧ ಹಾಕಿದ್ದಾರೆ. ಪಾರ್ಕ್ ಪೊಲೀಸರು ಸದಾ ಕೋನಿಯ ಬೆನ್ನು ಹತ್ತಿರುತ್ತಾರೆ. ಮಲಗುವುದನ್ನು 'ಕ್ಯಾಂಪಿಂಗ್' ಎಂದು ಕರೆಯುವುದರಿಂದ ಇಲ್ಲಿ ಆಕೆ ನಿಂತಿರುವುದು ಬಲು ದೊಡ್ಡ ಅಪರಾಧ. ಪೋಸ್ಟರುಗಳನ್ನು ಬಿಟ್ಟು ಹೋಗುವುದು ಕಾನೂನುಬಾಹಿರ. ಪೊಲೀಸರು ಈಕೆ ಬೋರ್ಡುಗಳನ್ನು ಬಿಟ್ಟು ಬಾತ್‌ರೂಮಿಗೆ ಹೋಗುವುದನ್ನೇ ಕಾಯುತ್ತಾರೆ. ಅವುಗಳನ್ನು ಎತ್ತಿ ಒಗೆಯಲು ಹೊಂಚುಹಾಕುತ್ತಾರೆ. ಸಹೃದಯಿ ಸ್ನೇಹಿತರಿಂದ, ಸಂಗಾತಿ ಪ್ರತಿಭಟನಾಕಾರ ಥಾಮಸನಿಂದ ಈಕೆಗೆ ಬಾತ್‌ರೂಮಿಗೆ, ಸ್ನಾನಕ್ಕೆ, ಆಗೀಗ ಒಂದಿಷ್ಟು ಸುತ್ತಿ ಬರಲು, ಪುರುಸೊತ್ತು ಸಿಗುತ್ತದೆ.

ಇಲ್ಲಿ ವೈಟ್ ಹೌಸ್ ಮುಂದೆ ಪ್ರತಿಭಟಿಸುವವರೇನು ಕಡಿಮೆಯಲ್ಲ. ಆದರೆ ಕೆಲವರು ಕೆಲವು ಗಂಟೆ ಪ್ರತಿಭಟಿಸುತ್ತಾರೆ. ಕೆಲವು ದಿನ, ಕೆಲವು ವಾರ. ಆದರೆ ೨೦ ವರ್ಷಗಳಿಂದ ಪ್ರತಿಭಟಿಸುತ್ತಾ ಬಂದು ಮುಂದುವರೆಯುತ್ತಿರುವುದು ಈ ಮಹಿಳೆ ಮಾತ್ರ. ೧೯೮೧ರಲ್ಲಿ ಈಕೆ ಮತ್ತು ಥಾಮಸ್, ನಾರ್ಮನ್ ಮೇಯರ್ ಎಂಬ ಅನುಕಂಪಿಸುವ ಸಹೃದಯಿಯನ್ನು ಭೇಟಿಯಾದರು. ಆತ ಇವರಿಗೆ ಮತ್ತಷ್ಟು ಎತ್ತರದ ಬೋರ್ಡು ಮಾಡಲು ಉತ್ಸಾಹ ತುಂಬಿ ಪ್ರೋತ್ಸಾಹಿಸಿದ. ಪ್ರತಿದಿನವೂ ಇವರೊಂದಿಗೆ ಬಂದು ಕುಳಿತು ಅಣ್ವಸ್ತ್ರಗಳ ವಿರುದ್ಧ ಪ್ರತಿಭಟಿಸಿದ. ಆದರೆ ೬೬ ವರ್ಷದ ನಾರ್ಮನ್ ಡಿಸೆಂಬರ್ ೮, ೧೯೮೧ರಂದು ವಾಷಿಂಗ್ಟನ್ ಸ್ಮಾರಕವನ್ನು ಹತ್ತು ಗಂಟೆಗಳ ಕಾಲ ಸುತ್ತುಗಟ್ಟಿ ನಿಂತಾಗ, ಆತನನ್ನು ಪೊಲೀಸರು ಗುಂಡಿಕ್ಕಿ ಕೊಂದರು. ಆತನನ್ನು ಕೊಂದದ್ದೇ ಅಲ್ಲದೆ ಪಾರ್ಕಿನ ಕಾನೂನುಗಳನ್ನೂ ಬದಲಾಯಿಸಿದರು. ನಿರ್ಬಂಧಗಳು ಬಲವಾದವು. ವೈಟ್ ಹೌಸ್ ಬೇಲಿಗೇ ಬಡಿದಿಟ್ಟ ಬೋರ್ಡುಗಳನ್ನು ತೆಗೆದೊಗೆದರು. ಬೋರ್ಡುಗಳನ್ನು ಕ್ಷಣ ಕೂಡಾ ಬಿಟ್ಟು ಕದಲಿದರೆ ಎತ್ತಿ ಒಗೆಯಲಾಗುತ್ತದೆ. ಇಲ್ಲಿಯ ಮರಗಳಂತೆ ಕೋನಿ ಮತ್ತು ಈಕೆಯ ಪೋಸ್ಟರುಗಳು ನೆಲಕ್ಕೆ ಬೇರುಬಿಟ್ಟು ನಿಂತಿವೆ.

ಕೋನಿಯ ಸಂದೇಶ ಸರಳವಾಗಿದೆ. 'ಅಣ್ವಸ್ತ್ರಗಳ ತಯಾರಿಕೆ ನಿಲ್ಲಿಸಿ, ಹಣವನ್ನು ಬಡತನದ ನಿರ್ಮೂಲನೆಗೆ ಬಳಸಿ.' ಐದಡಿಯೂ ಪೂರಾ ಇಲ್ಲದ ಈ ಪುಟ್ಟ ಮಹಿಳೆ ನಿರರ್ಗಳವಾಗಿ ಮಾತನಾಡುತ್ತಾಳೆ. ಫುಟ್‌ಪಾತನ್ನು ಗುಡಿಸಿ, ತನ್ನ ಸಾಮಾನುಗಳನ್ನೆಲ್ಲ ಚೊಕ್ಕಟವಾಗಿ ಜೋಡಿಸಿ ಇಟ್ಟುಕೊಂಡಿದ್ದಾಳೆ. ಮಳೆ, ಚಳಿ, ಗಾಳಿ, ಹಿಮ ಎಲ್ಲಕ್ಕೂ ತೆರೆದೊಡ್ಡಿದ ಕೋನಿಯ ಮುಖದಲ್ಲಿ, ಫುಟ್‌ಪಾತಿನಲ್ಲಿ ಕಂಡ ಇಪ್ಪತ್ತು ಶಿಶಿರಗಳ ಸುಕ್ಕುಗಳಿವೆ. ಆದರೆ ಈಕೆ ಉತ್ಸಾಹ ಕಳೆದುಕೊಂಡಿಲ್ಲ, ಭರವಸೆ ಈಕೆಯನ್ನು ತೊರೆದಿಲ್ಲ. ಮಾನವ ಜನಾಂಗದ ದಿಟ್ಟ ಹೋರಾಟದ ಪ್ರತೀಕವೆಂಬಂತೆ ಅವಳು ನಿಂತಿದ್ದಾಳೆ. ಈಕೆ ಕಾಫಿ ಮತ್ತು ಬ್ರೆಡ್ ಮೇಲೆ ಬದುಕುಳಿದಿದ್ದಾಳೆ. ಸ್ನೇಹಿತರು, ಪ್ರವಾಸಿಗಳು ಕೆಲವೊಮ್ಮೆ ಈಕೆಗೆ ಸ್ಯಾಂಡ್‌ವಿಚ್ ಅಥವಾ ಹಣ್ಣುಗಳನ್ನು ತಂದುಕೊಡುವುದುಂಟು. ಕುತೂಹಲ ತಡೆಯಲಾರದೆ 'ಸ್ನಾನ, ಶೌಚಕ್ಕೆ ಏನು ಮಾಡುತ್ತೀಯಮ್ಮಾ ?' ಎಂದು ಕೇಳಿದೆ. ಹತ್ತಿರದ ರೆಸ್ಟೋರೆಂಟ್ ಮಾಲೀಕ ಈಕೆಗೆ ತನ್ನ ಹೋಟಲಿನ ಶೌಚಗೃಹವನ್ನು ಬಳಸಲು ಅನುಮತಿ ನೀಡಿದ್ದಾನೆ. ಆಗಾಗ್ಗೆ ಸ್ನಾನಕ್ಕೆಂದು 'ಮನೆಯಿಲ್ಲದವರ ಶೆಲ್ಟರ್'ಗೆ ಹೋಗಿಬರುತ್ತಾಳೆ. ಜನ ಈಕೆಯ ಮಾತು ಕೇಳಿ ಕೊಟ್ಟಷ್ಟು ಹಣದಿಂದ, ಈಕೆಯ ದಿನದ ಕಾಫಿ, ಬ್ರೆಡ್ಡು, ಕರಪತ್ರಗಳ ಮುದ್ರಣ, ಕಲ್ಲುಗಳ ಮೇಲೆ ಶಾಂತಿ ಸಂದೇಶ ಬರೆಯಲು ಬೇಕಾದ ಬಣ್ಣ, ಕುಂಚ ಎಲ್ಲಾ ಸಾಗಬೇಕು.

ಫುಟ್‌ಪಾತಿನಲ್ಲಿ ಕೋನಿ ಬರೀ ಮಳೆ, ಚಳಿ, ಗಾಳಿ ಎದುರಿಸಬೇಕಲ್ಲದೆ ಪೊಲೀಸರ ಕಿರುಕುಳವನ್ನು ಪ್ರತಿ ಕ್ಷಣ ಎದುರಿಸಬೇಕು. ಯಾವನೋ ಅಮೆರಿಕದ ನೌಕಾಪಡೆಯಲ್ಲಿದ್ದ ಸೈನಿಕ ಈಕೆಯ ಅಸ್ತ್ರ ವಿರೋಧಿ ಭಾಷಣ ಕೇಳಿ ಈಕೆಯ ಮುಖಕ್ಕೇ ಗುದ್ದಿದ್ದ. ಹತ್ತಿರದ ಪಾರ್ಕಿನಲ್ಲಿ ಮನೆಯಿಲ್ಲದೆ ಅಲೆವವರೂ ಬೆದರಿಸಿದ್ದುಂಟು. ಮನೆಯಿಲ್ಲದೆ ಅಲೆವವರು ಕೇವಲ ಭಾರತದಂತಹ ಬಡದೇಶದಲ್ಲಿದ್ದಾರೆ ಎಂದು ತಿಳಿಯಬೇಡಿ, ಈ ಶ್ರೀಮಂತ ದೇಶದಲ್ಲೂ ಬೇಕಾದಷ್ಟಿದ್ದಾರೆ. ಕಸದ ಬುಟ್ಟಿಯಲ್ಲಿ ತಡಕಾಡುವವರು, ಮನೆಯಿಲ್ಲದೆ ಚಳಿಯಲ್ಲಿ ನಡುಗುವವರು, ಈ ಪಾರ್ಕಿನಲ್ಲಿ ಚಳಿಗಾಲದಲ್ಲಿ ಮರಗಟ್ಟಿ ಸತ್ತವರನ್ನು ಕೋನಿ ನೋಡಿದ್ದಾಳೆ. 'ನೋಡಿ ಅಮೆರಿಕದ ಅತ್ಯಂತ ಶಕ್ತಿಶಾಲಿ ಪ್ರಭಾವಿ ಮನುಷ್ಯನ ಮನೆಯ ಮುಂದೆ, ಜನ ಹೊಟ್ಟೆಗಿಲ್ಲದೆ, ಚಳಿಗೆ ಸಾಯುತ್ತಾರೆ. ಇದಕ್ಕಿಂತ ದೊಡ್ಡ ವಿಪರ್ಯಾಸ ಇನ್ನೊಂದಿದೆಯೆ ?' ಕೇಳುತ್ತಾಳೆ ಕೋನಿ. ಆದರೆ ಈಕೆಯ ಪ್ರತಿಭಟನೆಗೆ, ಶಾಂತಿ ಕರೆಗೆ ತಲೆದೂಗುವವರೂ ಇದ್ದಾರೆ. 'ಹ್ಯೂಮನ್ ಸೊಸೈಟಿ'ಯ ಒಬ್ಬಾಕೆ ಪ್ರತಿವಾರ ಕೋನಿಗೆ ಒಂದು ಚೀಲ ಕಡಲೆಕಾಯಿ ತಲುಪಿಸಿ ಹೋಗುತ್ತಾಳೆ. ಕೋನಿಯ ಓಡಾಟವೆಲ್ಲ ಸೈಕಲ್ ಮೇಲೆ. ಒಮ್ಮೆ ಆಕೆಯ ಸೈಕಲ್ ಕಳುವಾಯಿತು. ಹತ್ತಿರದ ಸೈಕಲ್ ಅಂಗಡಿಯಲ್ಲಿ ಕೆಲಸ ಮಾಡುವ ಹುಡುಗನೊಬ್ಬ ಮತ್ತೊಂದು ಸೈಕಲ್ ಜೋಡಿಸಿ ತಂದುಕೊಟ್ಟ.

ಕೋನಿ ನಮ್ಮ ಕೈಗಿತ್ತ ಮೂರು ಪುಟಗಳ ಕರಪತ್ರವನ್ನು ಓದತೊಡಗಿದೆ. ಜೆರಾಕ್ಸ್ ಮಾಡಿದ ಕರಪತ್ರಗಳವು. 'ನಿಮ್ಮ ದೇಶವನ್ನು ಪ್ರೀತಿಸಿ, ನಿಮ್ಮ ಸರಕಾರವನ್ನು ಅನುಮಾನಿಸಿ, ದಿಟ್ಟರಾಗಿ, ಸತ್ಯವನ್ನು ಎದುರಿಸಿ, ಜನಹತ್ಯೆಯನ್ನು ದ್ವೇಷಿಸಿ, ಅದಕ್ಕೆ ನೀವೂ ಗುರಿಯಾಗಬಲ್ಲಿರಿ ಎಚ್ಚರ' ಎಂದು ಒಂದು ಪುಟ ಸಾರಿತ್ತು. ಮತ್ತೊಂದರಲ್ಲಿ, 'ನಮ್ಮ ಬದುಕಿನ ಪ್ರತಿದಿನವೂ ಮನುಷ್ಯನಿರ್ಮಿತ ವಿನಾಶದ ಅಂಚಿನಲ್ಲಿದೆ, ಇದು ಸಭ್ಯತೆ, ಶಿಷ್ಟತೆಯ ನಡೆವಳಿಕೆಯಲ್ಲ, ನಾಗರಿಕತೆಗೆ ಅಪಮಾನದ್ದು' ಎಂದು ಬರೆದಿತ್ತು. 'ಅಣ್ವಸ್ತ್ರಗಳ ಈ ಹುಚ್ಚುತನವನ್ನು ಬಿಡಿ, ಇದು ನಿಮ್ಮಿಂದ ಆರಂಭವಾಗಬೇಕು' ಮತ್ತೊಂದು ಪೋಸ್ಟರ್ ಕೂಗಿತ್ತು. ಬೋರ್ಡಿನ ಮೇಲೆ ಅಂಟಿಸಿದ ಫೋಟೋಗಳಲ್ಲಿ ಹಿಂದೆ ಈಕೆ ವೈಟ್ ಹೌಸ್ ಬೇಲಿಗೇ ನಿಲ್ಲಿಸಿದ ಬೋರ್ಡುಗಳು ಕಾಣುತ್ತಿದ್ದವು. 'AS AN ACT OF SANITY, BAN NUCLEAR WEAPONS' ಎಂದು ಒಂದರಲ್ಲಿ ಬರೆದಿದೆ. 'NATO - WARSAW PACT COUNTRIES STAND ASTRIDE THE SAME UNCONTROLLABLE WEAPON PILE' ಎಂದು ಬರೆದ ದೊಡ್ಡ ಬೋರ್ಡನ್ನು ಪೊಲೀಸರು ಎತ್ತಿ ಎಸೆಯುತ್ತಿರುವ ಚಿತ್ರವಿದೆ. ವೈಟ್ ಹೌಸಿನ ಬೇಲಿಗೆ ಅಂಟಿಸಿದ್ದ ಮತ್ತೊಂದು ಬೋರ್ಡಿನಲ್ಲಿ 'WANTED : WISDOM AND HONESTY' ಎಂದಿತ್ತು !

ಈಕೆ ಕೊಟ್ಟ ಒಂದು ಕರಪತ್ರದಲ್ಲಿ ಪುಟ್ಟ ಜಪಾನಿ ಬಾಲಕಿಯ ಚಿತ್ರವಿದೆ. ಅದರ ಕೆಳಗೆ 'ಶಾಂತಿಯಿಂದ ಮಲಗು ಮಗುವೆ, ಈ ತಪ್ಪು ಮತ್ತೊಮ್ಮೆ ಪುನರಾವರ್ತಿಸದು' ಎಂಬ ಹಿರೋಷಿಮಾದಲ್ಲಿಯ ಅಣುಬಾಂಬ್ ಸ್ಮಾರಕದ ಮೇಲಿರುವ ನುಡಿಗಳಿವೆ. ಈ ಪುಟದಲ್ಲಿ ಕೋನಿಯ ಒಂದು ಕವನವೂ ಇದೆ.

**'ಹಿರೋಷಿಮಾದಲ್ಲಿ ಸತ್ತ ಪುಟ್ಟ ಹುಡುಗಿ'**

ನಾ ಪ್ರತಿ ಬಾಗಿಲೆದುರು ಬಂದು ನಿಲ್ಲುತ್ತೇನೆ
ಯಾರೂ ನನ್ನ ನಿಶ್ಶಬ್ದ ಹೆಜ್ಜೆಗಳ ಸಪ್ಪಳವ ಕೇಳರು
ಬಾಗಿಲು ಬಡಿಯುತ್ತೇನೆ, ನಾ ಅದೃಶ್ಯಳು
ಕಾರಣ ನಾ ಸತ್ತಿರುವೆ, ನಾ ಸತ್ತಿರುವೆ
ನನಗೆ ಕೇವಲ ಏಳು ವರ್ಷ, ಆದರೂ ನಾ ಸತ್ತಿರುವೆ
ಹಿರೋಷಿಮಾದಲ್ಲಿ, ದಶಕ ದಶಕಗಳ ಹಿಂದೆ



ಅಂತೆಯೇ ನಾನೀಗಲೂ ಏಳು ವರ್ಷದ ಬಾಲಿಕೆ
ಸತ್ತ ಮಕ್ಕಳು ಬೆಳೆಯುವುದಿಲ್ಲ
ನನಗೆ ಅನ್ನ ಬೇಕಿಲ್ಲ, ಹಣ್ಣು ಬೇಕಿಲ್ಲ
ಊಟ ಬೇಕಿಲ್ಲ, ತಿಂಡಿ ಬೇಕಿಲ್ಲ
ನನಗಾಗಿ ನನಗೇನೂ ಬೇಕಿಲ್ಲ
ಕಾರಣ ನಾ ಸತ್ತಿರುವೆ, ನಾ ಸತ್ತಿರುವೆ

ನಾ ಕೇಳುವುದಿಷ್ಟೆ, ಶಾಂತಿಗಾಗಿ
ನೀವು ಹೋರಾಡಿ, ಇಂದು ನೀವು ಹೋರಾಡಿ
ನಾಳಿನ ಮಕ್ಕಳು ಬದುಕುಳಿಯಲು,
ಆಡಿ ಬೆಳೆಯಲು, ನಕ್ಕು ನಲಿಯಲು.

'ಇಡೀ ಸಮುದಾಯವು ಮಾನವ ಜನಾಂಗವನ್ನೇ ಸುಟ್ಟು ನಿರ್ನಾಮ ಮಾಡುವ ಅಸ್ತ್ರಗಳನ್ನು ಪೇರಿಸಿಟ್ಟುಕೊಂಡು ಭೂಮಿಯ ಮೇಲಿಂದ ಮನುಷ್ಯನೇ ನಿರ್ಮೂಲವಾಗುವ ಸ್ಥಿತಿ ಇದೆ. ಈ ಸರಕಾರ ಜನರನ್ನು ಪ್ರತಿನಿಧಿಸುತ್ತಿಲ್ಲ. ಅದರ ಹಿಂದೆ ಕೈವಾಡ ತೋರಿಸುತ್ತಿರುವ ಆರ್ಮ್ಸ್ ಡೀಲರುಗಳನ್ನು ಪ್ರತಿನಿಧಿಸುತ್ತಿದೆ. ಜನರು ಮುಂದಾಗಬೇಕು, ಆಗಷ್ಟೆ ಕ್ರಾಂತಿ ಸಾಧ್ಯ. ಶಾಂತಿಗಾಗಿ ಕ್ರಾಂತಿ. ದೇಶದ ಆರ್ಥಿಕ ಸ್ಥಿತಿ ಕುಸಿಯುತ್ತಿದೆ. ಎಲ್ಲೆಡೆಯೂ ಮಿತಿಮೀರಿದ ಅಪರಾಧಗಳು. ಬಾಂಬ್ ಎಸೆವವರು ಹೆಚ್ಚುತ್ತಿದ್ದಾರೆ. ಅತೃಪ್ತ ಯುವಕನೊಬ್ಬ ಒಕ್ಲಹಾಮಾದಲ್ಲಿ ಎಸೆದ ಮನೆಯಲ್ಲಿ ತಯಾರಿಸಿದ ಬಾಂಬ್ ೧೬೭ ಜನರನ್ನು ಕೊಂದಿತು, ಅದರಲ್ಲಿ ೧೯ ಮಕ್ಕಳು ಪುಟ್ಟ ಹಸುಗೂಸುಗಳು. ನಾವು ಎತ್ತ ಸಾಗಿದ್ದೇವೆ ?' ಕೇಳುತ್ತಾಳೆ ಕೋನಿ. ಅದು ನಮ್ಮೆಲ್ಲರ ಪ್ರಶ್ನೆಯೂ ಆಗಿದೆ.

'ಮಕ್ಕಳಿಗೆ ಜೀವವನ್ನು, ಬದುಕನ್ನು ಗೌರವಿಸುವುದನ್ನು ಕಲಿಸಬೇಕು. ಬರೀ ಭೌತಿಕ ವಸ್ತುಗಳ ಹಿಂದೆ ಓಡುವುದಲ್ಲ' ಎನ್ನುತ್ತಾಳೆ ಆಕೆ. 'ಅದೊಂದೇ ರೀತಿಯಲ್ಲಿ ನಾವು ಶಾಂತಿಯನ್ನು ಗಳಿಸಬಲ್ಲೆವು.' ಆದರೆ ನಿಜಕ್ಕೂ ಇಲ್ಲಿ ಈ ಅಮೆರಿಕಾದಲ್ಲಿ ಬದುಕಿಗೆ ಗೌರವವಿದೆಯೆ ? ಗ್ರಾಸರಿ ಅಂಗಡಿಗಳಲ್ಲೂ ಬಂದೂಕು, ಗನ್ನುಗಳು ದೊರೆಯುತ್ತವೆ. ಪುಸ್ತಕದಂಗಡಿಗೆ ಹೋದರೆ ಗನ್ನು, ರೈಫಲ್ ಕುರಿತು ೨೫-೩೦ ಪತ್ರಿಕೆಗಳು ನೇತಾಡುತ್ತಿರುತ್ತವೆ. ಬೇಟೆ ಪ್ರಿಯವಾದ ಹವ್ಯಾಸವಾಗಿ ಬಿತ್ತರಿಸಲ್ಪಡುತ್ತದೆ. ಒಕ್ಲಹಾಮಾದಲ್ಲಿ ಬಾಂಬ್ ಸಿಡಿಸಿದ ಯುವಕ ಗನ್ನು, ರೈಫಲ್‌ಗಳೊಂದಿಗೆ ಬೆಳೆದವನು. ಆತನ ತಾತನ ಪ್ರಿಯ ಹವ್ಯಾಸವೂ ಬೇಟೆ, ಪ್ರಿಯವಸ್ತು - ಗನ್ನು, ರೈಫಲ್. ಇನ್ನು ಮೈಲಿಗಟ್ಟಲೆ ಮಾಲ್‌ಗಳ ಕೊಳ್ಳುಬಾಕ ಅಮೆರಿಕದಲ್ಲಿ ಈ ಮಹಿಳೆ ಸಾರುವ ಸರಳತೆ, ತ್ಯಾಗ, ಶಾಂತಿಯ ಸಂದೇಶ ಎಷ್ಟು ಯಶಸ್ವಿಯಾದೀತು ? ಆದರೆ ಇಂತಹ ಕಡೆಯೇ ತಾನೆ ಕೋನಿಯಂತಹ ಮಹಿಳೆಯ ಅಗತ್ಯವಿರುವುದು !

'ಮತ್ತೊಂದು ಹಿರೋಷಿಮಾ ಬೇಡ' : ಆಕೆಯ ಬೋರ್ಡಿಗಂಟಿಸಿದ ಚಿತ್ರದಲ್ಲಿ ಓರ್ವ ಪುಟ್ಟ ಹುಡುಗಿ ಸಡೊಕೊ ಸಸಾಕಿ ನಿಂತಿದ್ದಾಳೆ. ಈಕೆ ೧೯೫೫ರಲ್ಲಿ 'ಅಣ್ವಸ್ತ್ರ ರೋಗ'ವಾದ ರಕ್ತದ ಕ್ಯಾನ್ಸರಿನಿಂದ ಸತ್ತಳು. ಹಿರೋಷಿಮಾದ ಶಾಂತಿ ಉದ್ಯಾನದಲ್ಲಿ ಈಕೆಯ ಮೂರ್ತಿಯನ್ನು ನಿಲ್ಲಿಸಿದ್ದಾರೆ. ಸಡೊಕೊ ಒಂದು ಕೈಯಲ್ಲಿ ಚಿನ್ನದ ಕೊಕ್ಕರೆಯನ್ನು ಹಿಡಿದು ನಿಂತಿದ್ದಾಳೆ. ಜಪಾನಿನ ದಂತಕತೆಯ ಪ್ರಕಾರ ನೀವು ಕಾಗದದಲ್ಲಿ ನೂರು ಕೊಕ್ಕರೆಗಳನ್ನು ತಯಾರಿಸಿದರೆ, ದೇವದೂತರು ನಿಮ್ಮ ಯಾವುದೇ ಆಸೆಯನ್ನೂ ಈಡೇರಿಸುತ್ತಾರೆ. ಪ್ರತಿ ವರ್ಷ 'ಶಾಂತಿಯ ದಿನ'ವೆಂದು ಕರೆಯುವ ಆಗಸ್ಟ್ ಆರರಂದು, ಜಗತ್ತಿನೆಲ್ಲೆಡೆಯಿಂದ ಮಕ್ಕಳು ಇಲ್ಲಿ ಬರುತ್ತಾರೆ. ಸಡೊಕೊ ಬಾಲಕಿಯ ಮೂರ್ತಿಯ ಬುಡದಲ್ಲಿ ಕಾಗದದ ಕೊಕ್ಕರೆಗಳನ್ನು ಇಡುತ್ತಾರೆ. ಶಾಂತಿಗಾಗಿ ಪ್ರಾರ್ಥಿಸುತ್ತಾರೆ.

ಕೋನಿ ಜಗತ್ತಿನ ಶಾಂತಿಗಾಗಿ ಹೋರಾಡುವ ಜನರಿಗೆ ಸ್ಫೂರ್ತಿಯಾಗಿದ್ದಾಳೆ. ವರ್ಷ ಪ್ರತಿ ವರ್ಷ ಇಲ್ಲಿಗೆ ಬಂದು ಈಕೆಯೊಡನೆ ಫೋಟೋ ಹೊಡೆಸಿಕೊಂಡು ಹೋಗುವವರಿದ್ದಾರೆ. ದೈತ್ಯ ಸಹನೆಯ, ದೈತ್ಯ ಹೋರಾಟದ ಈ ಪುಟ್ಟ ಮಹಿಳೆಯ ಬಗಲಲ್ಲಿ ನಾನೂ ನಿಂತು ಫೋಟೋ ಹೊಡೆಸಿಕೊಂಡೆ. ಈಕೆಯ ಶಾಂತಿ ಸಂದೇಶವನ್ನು ಎದೆಯಲ್ಲಿ ಹೊತ್ತು ನನ್ನೂರಿಗೆ ಬಂದೆ.


ನೇಮಿಚಂದ್ರ
[illegible]
[illegible]




(೫೭ನೇ ಪುಟದಿಂದ)

ವಾಗಿ ಹೇಳುವುದಾದರೆ ಗೊತ್ತಾದ ಅಳತೆಯ ತೊಲೆ ಮುಂತಾದ ಬಾಗುವ ಅಂಗಗಳು ಸಾಧಾರಣ ಕಾಂಕ್ರೀಟಿನದಕ್ಕಿಂತ ಹೆಚ್ಚು ಭಾರವನ್ನು ಹೊರಬಲ್ಲವು.

**ಉಪಯೋಗ :** ಪ್ಯಾರಿಸ್ಸಿನ 'ಬೂಯ್ಗಸ್ ಎಸ್.ಎ.' ಎಂಬ ಇಂಜಿನಿಯರಿ ಸಂಸ್ಥೆಯ ಕೂಸಾಗಿ, ೧೯೯೪ರಲ್ಲಿ ಪ್ರಯೋಗಾಲಯದ ವಸ್ತುವಾಗಿದ್ದ ಇದು, ನಿರ್ಮಾಣ ಕ್ಷೇತ್ರಕ್ಕೆ ಕಾಲಿಟ್ಟಿದೆ. ಕೆನಡಾ ದೇಶದ ಶೇರ್‌ಬ್ರೂಕ್ ಎಂಬಲ್ಲಿ ಪಾದಚಾರಿಗಳು ಮತ್ತು ಸೈಕಲ್ ಸವಾರರು ಮೆಗಾಗ್ ನದಿಯನ್ನು ದಾಟಲು, ರಿಪಕಾದಿಂದ ಅತಿ ಹಗುರವಾದ ಸೇತುವೆಯನ್ನು ೧೯೯೭ರಲ್ಲಿ ನಿರ್ಮಿಸಿದ್ದಾರೆ. ಈ ಸೇತುವೆಯ ಚಾಚು (ಅಂದರೆ, ಇಂಜಿನಿಯರಿ ಪರಿಭಾಷೆಯಲ್ಲಿ ಎರಡು ಊದೆ ಅಥವಾ ಆಧಾರಗಳ ನಡುವಣ ಅಂತರ) ೬೦ ಮೀಟರು. ಇದಕ್ಕೆ ೨೦೦೦ ಮತ್ತು ೩೫೦೦ ಕಿ.ಗ್ರಾಂ./ಚ.ಸೆಂ. ಸಾಮರ್ಥ್ಯದ ರಿಪಕಾವನ್ನು ಬಳಸಿದ್ದಾರೆ.

ಈ ಸೇತುವೆಯ ಅಂಗಗಳಲ್ಲಿ ಉಕ್ಕಿನ ಸರಳು (ಪ್ರಬಲನ)ಗಳನ್ನೇ ಬಳಸಿಲ್ಲ. ಉಕ್ಕಿನ ಸೂಕ್ಷ್ಮ ತಂತುಗಳನ್ನು ಬಳಸಿರುವುದರಿಂದ ಸೇತುವೆಯಲ್ಲಿ ಬಿರುಕುಂಟಾಗುವ ಸಾಧ್ಯತೆಯೇ ಇಲ್ಲ. ಸೇತುವೆಯ ನಿರ್ಮಾಣದಲ್ಲಿ ಇದೇ ರಿಪಕಾದ ಮೊದಲ ಪ್ರಯೋಗ.

**ಭವಿಷ್ಯ :** ಪ್ರಬಲನಗಳಿಂದುಂಟಾಗುವ ಬಿರುಕುಗಳೇ ಕಟ್ಟಡದ ಶಿಥಿಲತೆಗೆ ಕಾರಣ. ಬಿರುಕುಗಳಿಂದ ಬಾಳಿಕೆಯು ಕಡಿಮೆಯಾಗುತ್ತದೆ. ಆದ್ದರಿಂದ ಕಡಲ ಪರಿಸರದ ಕಟ್ಟಡಗಳ ನಿರ್ಮಾಣಕ್ಕೆ ರಿಪಕಾ ಒಂದು ವರವಾಗಿದೆ.

ಸೇತುವೆಗಳ ಡೆಕ್ಕಿನ ರಿಪೇರಿಗೆ, ಸುರಂಗದ ತೆಳುವಾದ ಅದುರು, ಸಾಮರ್ಥ್ಯಯುತವಾದ ಅಸ್ತರಿಗಳಿಗೆ ಅಧಿಕ ಒತ್ತಡದ ತೆಳು ಪೈಪುಗಳಿಗೆ ಬಳಸುವ ಸಾಧ್ಯತೆ ಇದೆ.

ಬೈಜಿಕ ರಿಯಾಕ್ಟರುಗಳಿಂದ ಉಂಟಾಗುವ ವಿಕಿರಣಶೀಲ ತ್ಯಾಜ್ಯಗಳ ವಿಲೇವಾರಿ ಒಂದು ಸಮಸ್ಯೆಯಾಗಿದೆ. ಈ ಅತ್ಯಧಿಕ ಸಾಮರ್ಥ್ಯದ ರಿಪಕಾದಿಂದ, ವಿಶೇಷವಾಗಿ ರೂಪಿಸಿ ತಯಾರಿಸಿದ ಹಲವು ಪದರುಗಳುಳ್ಳ ಪೆಟ್ಟಿಗೆ ಇದಕ್ಕೆ ಉಪಯೋಗಕ್ಕೆ ಬರುವ ಸಾಧ್ಯತೆ ಇದೆ. ಇದರ ಬಗ್ಗೆ ಅಧ್ಯಯನ ನಡೆಯುತ್ತಿದೆ.

೧೯೯೭ರಿಂದ ಇಂದಿನವರೆಗೆ ರಿಪಕಾದ ಬೆಲೆಯಲ್ಲಿ ಮೂರನೇ ಒಂದು ಭಾಗದಷ್ಟು ಇಳಿ ಮುಖವಾಗಿದೆ. ಆದರೂ ಸಾಧಾರಣ ಕಾಂಕ್ರೀಟಿನಷ್ಟು ಅಗ್ಗವಲ್ಲ. ಮುಂದೆ ಬೆಲೆಯು ಇನ್ನೂ ಇಳಿಯುವ ನಿರೀಕ್ಷೆ ಇದೆ. ಇದರಿಂದ ಕಟ್ಟಡ ನಿರ್ಮಾಣದ ಬೆಲೆಯು ಹೆಚ್ಚಾಗಿದ್ದರೂ, ಕಟ್ಟಡದ ಸೇವಾವಧಿಯಲ್ಲಿ ದುರಸ್ತಿ ಇಲ್ಲದೆ ನಂಬಿಕಾರ್ಹವಾಗಿದ್ದರೆ, ಅದು ಅನುಕೂಲವಲ್ಲವೇ ! ಈ ವಾದವನ್ನು ಗಮನದಲ್ಲಿಟ್ಟುಕೊಂಡು, ರಿಪಕಾದ ಅನುಕೂಲಗಳ ಲಾಭ ಪಡೆಯಲು ಪ್ರಯತ್ನಗಳು ನಡೆದಿವೆ.


ಎಂ.ಜಿ. ಶ್ರೀನಿವಾಸನ್
'ವಿಶ್ವರೂಪ', ೨೫೪, ೫ನೇ ಮೇನ್, ೧೪ನೇ ಕ್ರಾಸು, ಜಯನಗರ, ಮೈಸೂರು-೫೭೦೦೧೪



ವ್ಯಕ್ತಿ ಚಿತ್ರ

# ರೋಹಿದಾಸ ಮಹಾಲೆ

**ಉ**ತ್ತರ ಕನ್ನಡ ಜಿಲ್ಲೆ ಘಟ್ಟ ಹಾಗೂ ಕರಾವಳಿಯನ್ನು ಹೊಂದಿರುವ ಪ್ರದೇಶ. ಅನೇಕ ಐತಿಹಾಸಿಕ, ಪೌರಾಣಿಕ ಹಿನ್ನೆಲೆಯ ಚರಿತ್ರೆ ಇಲ್ಲಿದೆ. ತಲೆತಲಾಂತರಗಳಿಂದಲೂ ಸಾಂಸ್ಕೃತಿಕ ಮತ್ತು ರಾಜಕೀಯವಾಗಿ ತಮ್ಮನ್ನು ತೊಡಗಿಸಿಕೊಂಡ ಜನ ಇಲ್ಲಿದ್ದಾರೆ. ಇಲ್ಲಿಯೂ ಸ್ವಾತಂತ್ರ್ಯ ಕಹಳೆ ಝೇಂಕರಿಸಿದೆ.

ಉತ್ತರ ಕನ್ನಡ ಜಿಲ್ಲೆಯ ಪಶ್ಚಿಮದಂಚಿನಲ್ಲಿ ಉದ್ದಕ್ಕೂ ಚಾಚಿರುವ ಕರಾವಳಿ ಸಾಂಸ್ಕೃತಿಕವಾಗಿ ಹಲವು ಪ್ರತಿಭಾವಂತರಿಗೆ ಹುಟ್ಟೂರೂ ಆಗಿದೆ. ಕುಮಟಾ ತಾಲ್ಲೂಕಿನ ಕೂಜಳ್ಳಿ ಅಪ್ರತಿಮ ರಂಗನಟ, ನಿರ್ದೇಶಕ, ಲೇಖಕ ಅಲ್ಲದೇ ಪ್ರಕಾಶಕನನ್ನು ನೀಡಿದ ಊರು. ಇಲ್ಲಿನ ಸಮರ್ಥ ನಾಟಕ ಕರ್ತೃ ಶ್ರೀ ರೋಹಿದಾಸ ಮಹಾಲೆ. ಅರವತ್ತರ ದಶಕದಲ್ಲಿಯೇ ತಮ್ಮ ಈ ಕಾಯಕ ಪ್ರಾರಂಭಿಸಿದ ಪ್ರತಿಭೆ ಅವರದು. ನಾಟಕ ರಚಿಸಿ ಪ್ರಕಾಶಿಸುವ ಹೊಣೆಯನ್ನು ವಹಿಸಿ ಅದನ್ನು ಜನತೆಯ ಮುಂದೆ ಕೊಂಡೊಯ್ಯುವ ಎಲ್ಲ ಜವಾಬ್ದಾರಿ ಹೊತ್ತಂಥ ಅಪರೂಪದ ವ್ಯಕ್ತಿ. ಅರವತ್ತರ ದಶಕದ ಕೊನೆಯಲ್ಲಿ ನಮ್ಮೂರಾದ ತಾರಗೋಡಿನಲ್ಲಿ ಇವರ ಪ್ರಶಸ್ತಿ ವಿಜೇತ ಕೃತಿ ''ಕೈ ಹಿಡಿದವಳು'' ನಾಟಕದಲ್ಲಿ ಹಾಸ್ಯ ನಟನಾಗಿ ಭಾಗವಹಿಸಿದ ಸಂದರ್ಭದಲ್ಲಿ ಇವರೊಡನೆ ನನ್ನ ಗಾಢ ಸ್ನೇಹ ಬೆಳೆಯಲು ಕಾರಣವಾಯಿತು. ಅಲ್ಲಿಂದ ಇಂದಿನವರೆಗೆ ಅವರ ಹಲವು ನಾಟಕಗಳನ್ನು ನೋಡುತ್ತಲೇ ಬಂದಿದ್ದೇವೆ. ತಮ್ಮ ಈವರೆಗಿನ ಎಲ್ಲ ನಾಟಕಗಳಲ್ಲಿ ಹೊಸ ಹೊಸ ಸಾಮಾಜಿಕ ಜ್ವಲಂತ ವಿಷಯಗಳನ್ನು ತೋರಿಸುವತ್ತ ಇವರ ಕಾಳಜಿ ಕಾಣಬರುತ್ತದೆ. ಒಬ್ಬ ನಾಟಕ ಕರ್ತೃವಿನಲ್ಲಿ ಇರಬೇಕಾದ ಗುಣಾತ್ಮಕ ಅಂಶಗಳನ್ನು ಇವರಲ್ಲಿ ಕಾಣಬಹುದು.

ರೋಹಿದಾಸ ಮಹಾಲೆಯವರು ಈವರೆಗೆ ಹದಿಮೂರಕ್ಕೂ ಹೆಚ್ಚು ನಾಟಕಗಳನ್ನು ಬರೆದಿದ್ದಾರೆ. ಹಲವು ಸ್ನೇಹಿತರ, ಆಪ್ತರ ಸಲಹೆಯಂತೆ ತಮ್ಮ ಕಡುಬಡತನದ ಜೀವನದ ಹಾದಿಯಲ್ಲಿಯೂ ನಾಟಕ ಬರೆದು ಪ್ರಕಾಶಿಸುವ ಧೈರ್ಯ ಮಾಡುತ್ತ ಬಂದಿದ್ದಾರೆ. ಕುಲಕಸುಬಾದ ಕ್ಷೌರಿಕ ವೃತ್ತಿಯ ನಡುವೆ ತಮ್ಮ ಸಂಸಾರದ ರಥ ನಡೆಸುತ್ತಲೇ ನಾಟಕ ರಚಿಸಿದ ಇವರು ಕರಾವಳಿ ಹಾಗೂ ಮಲೆನಾಡಿನ ಮೂಲೆ ಮೂಲೆಗೆ ಪರಿಚಿತವಾದ ವ್ಯಕ್ತಿ.

*ಕೈ ಹಿಡಿದವಳು, ಧರ್ಮಸಂಗಮ, ನಿಗೂಢ ರಹಸ್ಯ, ಸತ್ತವಳ ಭೂತ, ಒಗಟಾದಳು ಹೆಣ್ಣು, ಕ್ಷಮಯಾ ಧರಿತ್ರಿ*ಯಿಂದ ಹಿಡಿದು ಇತ್ತೀಚೆಗೆ ಪ್ರಕಟಗೊಂಡ *ಬಲಾತ್ಕಾರ*ದವರೆಗಿನ ಎಲ್ಲ ಕೃತಿಗಳೂ ತಮ್ಮದೇ ಆದ ಸಂದೇಶವನ್ನು ಹೇಳುವಲ್ಲಿ ಯಶಸ್ವಿಯಾಗಿವೆ.

ಸದಾ ಪ್ರಯೋಗನಿರತ ಮಹಾಲೆಯವರು ರಂಗದ ಮೇಲೆ ನಾಟಕ ತರುವಾಗ ತಾವೇ ಸ್ವತಃ ಪಾತ್ರವೊಂದನ್ನು ವಹಿಸಿ ನಟಿಸಿ ನಂತರ ಪ್ರಕಾಶಿಸುವ ತಂತ್ರ ಮೆಚ್ಚಲೇಬೇಕಾದ್ದು. ಕಂಪೆನಿ ನಾಟಕಗಳಿಗೆ ಸರಿಸಮನಾಗಿ ದೃಶ್ಯ ಸಂಯೋಜನೆ, ಸಂಗೀತ, ಹಾಡುಗಳ ಜೋಡಣೆಯವರೆಗಿನ ಎಲ್ಲ ಕ್ರಮವನ್ನು ಸೂಕ್ತವಾಗಿ ನಿರ್ದೇಶಿಸುವಲ್ಲಿ ಅವರ ಜಾಣ್ಮೆ ಕಾಣುತ್ತದೆ.

ಇವರ ನಾಟಕದಲ್ಲಿನ ಸಂಭಾಷಣೆಗಳು ಈವರೆಗೆ ಸಮಾಜವಿರೋಧಿ ಅಲೆ ಎಬ್ಬಿಸಿದ ಉದಾಹರಣೆಗಳಿಲ್ಲ. ಲೈಂಗಿಕತೆ, ಪುನರ್ ವಿವಾಹದಂಥ ವಿಷಯಗಳ ಸಂದರ್ಭಗಳಲ್ಲಿ ಬರುವ ಸಂಭಾಷಣೆಗಳಲ್ಲಿ ಕೂಡ ಅಶ್ಲೀಲತೆ ಇಣುಕು ಹಾಕುವುದಿಲ್ಲ. ಸಮಾಜದ ನಡುವೆ ದಿನನಿತ್ಯ ನಡೆಯುವ ಅನೇಕ ವಿಷಯಗಳನ್ನಾಧರಿಸಿ ರಚಿಸಿದ ನಾಟಕಗಳು ನಮ್ಮ ಆಪ್ತ ವಲಯದ ಘಟನೆಗಳೋ ಎಂಬಂತೆ ಭಾಸವಾಗಿ ತಮ್ಮ ಜೀವಂತತೆಯನ್ನು ಮೆರೆಯುತ್ತವೆ.

ತಮ್ಮ ಕಲಿಕೆಯ ಹಾದಿಯೊಂದಿಗೆ ಪರಿಸರದ ರಕ್ಷಣೆಗೆ ತಮ್ಮನ್ನು ತೊಡಗಿಸಿಕೊಂಡು ನಾಟಕ ರಚಿಸುವ ಇವರ ಹವ್ಯಾಸ ನಿರಂತರವಾಗಿದೆ. ಮುದುಕನೊಂದಿಗಿನ ವೈವಾಹಿಕ ಜೀವನಕ್ಕೆ ಕಾಲಿಟ್ಟ ಯುವತಿಯೊಬ್ಬಳ ದೈಹಿಕ ಬಯಕೆಯ ಸಂದರ್ಭಗಳನ್ನು, ಸಹಜತೆಯನ್ನು ಬಿಂಬಿಸುವ ಕೃತಿ *ಕೈಹಿಡಿದವಳು*. *ಮುಳ್ಳಿನ ಹಾಸಿಗೆ*ಯಲ್ಲಿ ಎಂಬ ನಾಟಕದಲ್ಲಿ ಹೆಣ್ಣು ಎದುರಿಸಬೇಕಾದ ಸಮಸ್ಯೆಗಳ ಜ್ವಲಂತ ಪ್ರಶ್ನೆ ಹಾಕುತ್ತಾರೆ. ನಾವೆಲ್ಲ ಭಾರತೀಯರು ಒಂದು, ಸರ್ವಧರ್ಮ ಸಮನ್ವಯದ ದಾರಿ ಉತ್ತಮವೆಂದು ಸಂದೇಶ ಸಾರುವ *ಧರ್ಮಸಂಗಮ* ಯಶಸ್ವಿ ನಾಟಕವಾಗಿದೆ. *ದುರಂತದ ಸುಳಿ* ಹೆಸರೇ ಹೇಳುವಂತೆ, ಸಮಾಜವು ದುರಂತದ ಸುಳಿಯಲ್ಲಿ ಸುತ್ತುವ ಪರಿ ಹಾಗೂ ಅದರಿಂದ ಹೊರಬರಲು ತವಕಿಸುವ ಜಂಜಡಗಳನ್ನು ಚಿತ್ರಿಸುವ ಕೃತಿ. ಕಾಮುಕತೆಯ, ಲೈಂಗಿಕ ದೌರ್ಬಲ್ಯಕ್ಕೆ ಒಳಗಾದ ವ್ಯಕ್ತಿಯ ನಡೆನುಡಿಗಳನ್ನೇ ಆಧರಿಸಿ ಬರೆದ ಇತ್ತೀಚಿನ ಕೃತಿ 'ಬಲಾತ್ಕಾರ' ಸಮಾಜದ ವೈಪರೀತ್ಯಕ್ಕೆ ಹಿಡಿದ ಕನ್ನಡಿ ಎನ್ನಬಹುದು. ವಿಕೃತ ಕಾಮಿಯೊಬ್ಬನ ಬದುಕಿನ ಹತಾಶೆಯ ಚಿತ್ರಣ ತಲ್ಲಣಿಸುತ್ತದೆ.

ಇವರ ನಾಟಕದಲ್ಲಿ ಭಾವಾಭಿನಯಕ್ಕೆ ಕೊಟ್ಟ ಮಹತ್ವವನ್ನು ಹಾಸ್ಯಕ್ಕೂ ನೀಡಿದ್ದಾರೆ. ಪ್ರತಿಯೊಂದು ನಾಟಕದಲ್ಲಿಯೂ ಮುಖ್ಯ ಕಥೆಯ ಹಂದರದೊಂದಿಗೆ ಹೆಣೆಯಲ್ಪಟ್ಟ ಹಾಸ್ಯಪ್ರಧಾನ ಸಂದರ್ಭಗಳು ನಾಟಕದ ಕಥಾ ಪಾತ್ರಗಳೊಂದಿಗೆ ನವಿರಾಗಿ ಹರಿದುಬರುತ್ತವೆ.

ರೋಹಿದಾಸ ಮಹಾಲೆಯವರ ಎಲ್ಲ ನಾಟಕಗಳು ಈವರೆಗೆ ಉತ್ತರ ಕನ್ನಡ ಜಿಲ್ಲೆಯ ಜನರ ಮನೆಮಾತಾಗಿವೆ. ಇಲ್ಲಿನ ಪ್ರತಿ ಗ್ರಾಮಗಳಲ್ಲಿಯೂ ಇವರ ನಾಟಕವನ್ನು ಪ್ರಯೋಗಿಸಿದ ಸಂಘ ಸಂಸ್ಥೆಗಳು, ಯುವಕ ಮಂಡಳಿಗಳು ಇವೆ. ಕೇವಲ ಈ ಜಿಲ್ಲೆಗೆ ಸೀಮಿತಗೊಳ್ಳದೆ ನೆರೆಯ ಜಿಲ್ಲೆಯಾದ ದಕ್ಷಿಣ ಕನ್ನಡ, ಶಿವಮೊಗ್ಗ ಜಿಲ್ಲೆಗಳಲ್ಲಿಯೂ ಇವು ಜನಪ್ರಿಯವಾಗಿವೆ. ಪಣಜಿ, ಮುಂಬಯಿಯಂತಹ ದೊಡ್ಡ ನಗರಗಳ ರಂಗಭೂಮಿಯಲ್ಲಿ ಯಶಸ್ವಿಯಾಗಿ ಪ್ರಯೋಗ ಕಂಡಿವೆ. ಇವರಿಗೆ ದೊರೆತಿರುವ ಪ್ರಶಸ್ತಿಗಳು ಹಲವು. ಅದು ಸಹಜವೂ ಆಗಿದೆ.

ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲ್ಲೂಕಿನ ಕೂಜಳ್ಳಿಯಲ್ಲಿ ಗೋಪಾಲಕೃಷ್ಣ – ಪಾರ್ವತಿ ದಂಪತಿಗಳಿಗೆ ಮೊದಲ ಮಗನಾಗಿ ೧೯೩೪ರಲ್ಲಿ ಜನಿಸಿದರು. ಕೇವಲ ಪ್ರಾಥಮಿಕ ಶಿಕ್ಷಣ ಮುಗಿಸಿದ ಇವರು ಕುಲ ಕಸುಬಾದ ಕ್ಷೌರಿಕ ವೃತ್ತಿಯನ್ನೇ ಅವಲಂಬಿಸಿದ್ದಾರೆ. ನಟನೆ, ರಚನೆ, ಪ್ರಕಾಶನ ಈ ಬಗೆಯಲ್ಲಿ ತ್ರಿಪಾತ್ರಧಾರಿಗಳಾಗಿ ತಮ್ಮ ಸಾರ್ಥಕ ಬದುಕನ್ನು ಕಳೆಯುತ್ತ ಬಂದ ಮಹಾಲೆಯವರಿಗೆ ಈಗ ೬೭ರ ಇಳಿವಯಸ್ಸು. ಪ್ರತಿಭೆಗೆ ಮುಪ್ಪಿಲ್ಲ ಎಂಬ ಗಾದೆಯಂತೆ ಈಗಲೂ ನಾಟಕ ರಚನೆಯಲ್ಲಿ ತೊಡಗಿದ್ದಾರೆ. ಸರಳ ನಿರಾಡಂಬರ ಜೀವಿಯಾದ ಇವರು ಅರಳು ಹುರಿದಂತೆ ಮಾತನಾಡುತ್ತಾರೆ. ವಿಶಾಲ ಹಣೆ, ಉದ್ದನೆಯ ಗದ್ದ, ನಗುಸೂಸುವ ಮುಖ, ಸದಾ ತಾಂಬೂಲದಿಂದ ಕೆಂಪಾಗಿಸಿರುವ ಬಾಯಿ, ಇವು ಇವರೇ ರೋಹಿದಾಸರೆಂದು ಹೇಳುತ್ತವೆ. ರಾಜ್ಯಪ್ರಶಸ್ತಿ ವಿಜೇತ ರೋಹಿದಾಸ ಮಹಾಲೆಯವರ ಬತ್ತಳಿಕೆಯಿಂದ ಇನ್ನಷ್ಟು ಕೃತಿಗಳು ಹೊರಬಂದು ಕನ್ನಡ ರಂಗಭೂಮಿ ಶ್ರೀಮಂತಗೊಳ್ಳಲು ಕಾರಣವಾಗಲಿ.




ಚಿತ್ರ - ಲೇಖನ : ಡಾ|| ಜಿ. ಎಮ್. ಹೆಗಡೆ ತಾರಗೋಡ
ಕಲಾವಿದರು, ''ಸಂಕೇತ'', ಕೆಳದಿ ರಸ್ತೆ
ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

ತಿಳಿವು

# ಭಯ - ಭಕ್ತಿ

ಭಯ ಮತ್ತು ಭಕ್ತಿ ಎಂಬ ಪದಗಳು ಬೇರೆ ಬೇರೆಯಾದರೂ ಒಂದಕ್ಕೊಂದು ಪೂರಕ ಮತ್ತು ಪ್ರೇರಕ ವಾಗಿವೆ. ಭಯದ ಮುಂದುವರೆದ ಅಭಿವ್ಯಕ್ತಿಯೇ ಭಕ್ತಿಯಾಗಿದೆ. ಭಕ್ತಿಯ ಪ್ರತೀಕವಾಗಿ ಇಂದು ನಮ್ಮ ಮುಂದೆ ಏನೆಲ್ಲ ಆಗುಹೋಗುಗಳು, ಅಂಧಶ್ರದ್ಧೆಗಳು, ಭಾವುಕತೆಯ ಪರಾಕಾಷ್ಠೆಗಳು, ಪೂಜೆ, ಪುನಸ್ಕಾರಗಳು ನಡೆಯುತ್ತವೆ ! ಭಯವೂ ಕೂಡ ಈ ಎಲ್ಲ ವ್ಯವಸ್ಥೆಗಳ ಹಿಂದಿನ ಚೇತನವಾಗಿ, ಮಾನವನ ಬದುಕಿನ ನಿಯಂತ್ರಣ ಶಕ್ತಿಯಾಗಿ, ಹಿಂದಿನಿಂದಲೂ ಒಳಿತು ಕೆಡಕುಗಳೆರಡರ ಕಾರ್ಯಭಾರವನ್ನು ನಡೆಯಿಸಿಕೊಂಡು ಬಂದಿದೆ.

'ಭಯ' ಎಂದರೆ ಯಾವುದಾದರೂ ಒಂದು ಆಪತ್ಕಾರಿ ದೃಶ್ಯವನ್ನು ಕಂಡಾಗ ಗಾಬರಿಗೊಂಡು, ಗಲಿಬಿಲಿಗೊಂಡು ಕಣ್ಣರಳಿಸಿ ನೋಡುವುದು. ಇದರ ಜೊತೆಗೆ ಹೃದಯದ ಬಡಿತ ಹೆಚ್ಚಾಗಿರುತ್ತದೆ. ಮುಂದಿನ ಪರಿಣಾಮದ ಅರಿವು ಆಗಲಾರದು. ನರಗಳ ಕಂಪನ. ತನಗೆ ಅಥವಾ ತನ್ನ ಬದುಕಿಗಂಟಿದ ಜೀವಕೋಶಗಳಿಗೆ ಆಪತ್ಕಾರಿ ಪರಿಣಾಮವಾಗಬಹುದೇ ಎಂಬ ಶಂಕೆಯೇ ಈ ಭಯಕ್ಕೆ ಕಾರಣವಾಗಿದೆ. ಈ ಭಯದ ನಿವಾರಣೆಗಾಗಿ ಯಾವುದೋ ಶಕ್ತಿಯ ನೆನಪು, ಆರಾಧನೆ, ಸ್ಮರಣೆಗಳು ಉಲ್ಬಣಗೊಳ್ಳುತ್ತವೆ. ಈ ಆರಾಧನೆ, ಸ್ಮರಣೆ, ನೆನಪುಗಳೇ ತನ್ನನ್ನು ಈ ಆಪತ್ಕಾಲಿಕ ಸನ್ನಿವೇಶದಿಂದ ವಿಮುಕ್ತಿಗೊಳಿಸುವ ಒಂದು ಶಕ್ತಿ ಎಂಬ ಪರಿಕಲ್ಪನೆ ಮೂಡುತ್ತದೆ. ಆ ಶಕ್ತಿಯನ್ನೇ ಸ್ಮರಿಸಿ, ಭಜಿಸಿ, ತನ್ನನ್ನು ಭಯದಿಂದ ಪಾರುಮಾಡು ಎಂದು ಅರಿಕೆ ಮಾಡಿಕೊಳ್ಳುವ ಉತ್ಕಟ ಭಾವವೇ ಭಕ್ತಿಯಾಗುತ್ತದೆ. ಈ ಭಕ್ತಿ ಎಂಬ ಮಾನಸಿಕ ಭಾವವು ಭಯದ ನಂತರದ ಅವಸ್ಥೆಯೇ ಆಗಿದೆ. ಈ ಭಕ್ತಿಯು ಮಾನವನಲ್ಲಿ ಮೂರ್ತಗೊಂಡಾಗಿನಿಂದ ಅನೇಕ ಸುಕೃತ್ಯಗಳು, ಅಕೃತ್ಯಗಳು ಈ ಭೂಮಿಯ ಮೇಲೆ ಆವಿರ್ಭವಿಸಿದವು ಎಂದು ಹೇಳಬಹುದು. ಕೆಲವು ಸಲ ಹಂಗು (ಭಯ) ಹರಿದವನಿಗೆ ಲಿಂಗದ ಪರಿವೆ ಏನಿಲ್ಲ ಎಂಬಂಥ ಸನ್ನಿವೇಶದಲ್ಲಿ ಏನೆಲ್ಲ ಸಾಮ್ರಾಜ್ಯಗಳೂ ಸನಾತನ ಧರ್ಮವೂ ಅಳಿಯುತ್ತ ಬಂದಿತೆಂದೂ ಹೇಳಬಹುದು.

ಇದೇನೇ ಇರಲಿ ಕಿಟ್ಟೆಲ್ ಅವರ ಮಹಾ ಶಬ್ದಕೋಶದಲ್ಲಿ ಭಯ ಮತ್ತು ಭಕ್ತಿಗಳ ಕುರಿತು ದಿನನಿತ್ಯದ ಆಗುಹೋಗುಗಳಿಗೆ ಮಾನಸಿಕ ಮಟ್ಟದಲ್ಲಿ ವ್ಯಕ್ತಿ ಹೇಗೆ ಪ್ರತಿಕ್ರಿಯಿಸುತ್ತಾನೆಂಬುವ ವಿವಿಧ ಆಯಾಮಗಳನ್ನು ವಿವರವಾಗಿ ತಿಳಿಸಲಾಗಿದೆ.

ಅದಿರಲಿ, ಮಾನವನಿಗಿಂತಲೂ ಮುಂಚೆ ಪರಿಸರದಲ್ಲಿ ರೂಪುಗೊಂಡಿದ್ದು ಪ್ರಾಣಿ, ಪಕ್ಷಿ, ಜಲಚರಗಳು. ನಂತರ ಅಂಕುರಗೊಂಡ ಹೆಣ್ಣು-ಗಂಡುಗಳಿಂದ ಬೀಜೋತ್ಪತ್ತಿಗೊಂಡು ಪಸರಿಸಿದ ಆದಿಮಾನವ ಸಮೂಹವೇ ಅಂದಿನ ಕಾಡು ಮೇಡುಗಳಲ್ಲಿ ವಾಸಿಸಲಾರಂಭಿಸಿತು. ಗಾಳಿ, ಮಳೆ, ಬಿರುಗಾಳಿ, ಸಿಡಿಲು, ವನ್ಯಮೃಗಗಳ ಆರ್ಭಟಗಳು ಇವುಗಳ ಮಧ್ಯೆ ಅರಿವೇ ಇಲ್ಲದ ಅಂದಿನ ಮಾನವ ಕೆಚ್ಚೆದೆಯ ಭಾವವನ್ನು ಹೊಂದಿರಲಿಲ್ಲದ ಕಾರಣ ಹೆದರಲಾರಂಭಿಸಿದ. ಎಷ್ಟೋ ಬಾರಿ ಈ ಪ್ರಕೃತಿಯ ಪ್ರಕೋಪಗಳಿಂದ ರಕ್ಷಿಸಿಕೊಳ್ಳ ಬೇಕೆನಿಸಿತು. ಅವುಗಳಿಗೆ ತುತ್ತಾಗಬೇಕಾಯಿತು. ತನ್ನ ಸಮೂಹದ ಪ್ರಾಣ ರಕ್ಷಣೆ ಸುರಕ್ಷತೆಗಾಗಿ ತಹತಹಿಸಿದ. ಭಯಭೀತನಾದ. ಕೊನೆಗೊಂದು ದಿನ ಮಾನವನ ನಿಯಂತ್ರಣಗಳಲ್ಲಿ ಇಲ್ಲದೇ ಇರುವ ಪ್ರಕೃತಿ ಶಕ್ತಿ ಅದ್ಭುತವಾದದ್ದು ಎಂದು ನಂಬಿದ ಮತ್ತು ಇವುಗಳ ಆಘಾತದಿಂದ ಪಾರಾಗಲು ಬೇರೆ ಯಾವ ಊರುಗೋಲೂ ಇಲ್ಲದ್ದರಿಂದ ಇವುಗಳನ್ನೇ ದೇವರೆಂದು ತಿಳಿದ. ಹಾಗೆ ಊಹಿಸಿಕೊಂಡ ದೇವರುಗಳನ್ನು ತನ್ನನ್ನು ಅಪಾಯದಿಂದ ಕಾಪಾಡಬೇಕೆಂದು ಮೊರೆಯಿಟ್ಟ, ಈ ಬಗೆಯ ನೈಸರ್ಗಿಕ ಶಕ್ತಿಗಳನ್ನು ಆರಾಧಿಸುತ್ತಲೇ ಅವುಗಳ ಮೇಲೆ ನಂಬಿಕೆ ಬೆಳೆಸಿಕೊಂಡ. ಕಾಕತಾಳೀಯವಾಗಿ ಭೋರ್ಗರೆವ ಮಳೆ ನಿಂತಿರಬಹುದು, ಗಾಳಿ ಬೇರೆ ದಿಕ್ಕಿಗೆ ಹೋಗಿರಬಹುದು, ಹುಲಿಯ ಘರ್ಜನೆ ಕಡಿಮೆಯಾಗಿರಬಹುದು. ತನ್ನ ಪ್ರಾರ್ಥನೆ, ಅಳಲು ಅಥವಾ ಕೋರಿಕೆ ಫಲಿಸಿತ್ತು ಎಂದು ಸಂಪೂರ್ಣವಾಗಿ ನಂಬಿದ: ಈ ನಂಬಿಕೆಯೇ ಕಾಲಾಂತರದಲ್ಲಿ ಭಕ್ತಿಯಾಗಿ ಪರಿಣಮಿಸಿತು. ಮುಂದೆ ಇದು 'ನೈಜ ಭಕ್ತಿ', 'ಕಪಟ ಭಕ್ತಿ' ಎಂದಾದರೂ ಮೂಲದಲ್ಲಿ ಅದು ಅಮೂರ್ತವಾಗಿರುತ್ತದೆ.

ನಂತರದ ದಿನಗಳಲ್ಲಿ ಈ ಆದಿ ಮಾನವನ ಆಲೋಚನಾ ಸಾಮರ್ಥ್ಯ ಬೆಳೆಯಿತು. ಈ ಭೂಮಿಯ ಗರ್ಭದಲ್ಲಿ ಅನೇಕ ಬೀಜಗಳು ಅಂಕುರಿಸಿ ಪರಿಸರ ಬೆಳೆಯುವುದರಿಂದ ಇದಕ್ಕೆ 'ಭೂಮಾತೆ' ಎಂದು ಕರೆದಂತೆ ನೀರಿನ ಗರ್ಭದಲ್ಲಿ ಅಸಂಖ್ಯಾತ ಜಲಚರ, ಮುತ್ತು ಮುಂತಾದ ಅಮೂಲ್ಯ ವಸ್ತುಗಳು ಇರುವುದರಿಂದ ಇದಕ್ಕೆ 'ಜಲದೇವತೆ' ಎಂದು ಹೆಸರು ಕಟ್ಟಿದ. ಮೂಲದಲ್ಲಿ ಐದು ಪಂಚಭೂತಗಳಿಗೆ ಪುರುಷ ದೇವತೆಗಳ ಹೆಸರುಗಳು. ನಂತರದಲ್ಲಿ ಕೆಲವು ಹೆಣ್ಣು ದೇವತೆಗಳು. ಭಯಯುಕ್ತನಾದ ಮಾನವ ಹೀಗೆ ಶ್ರದ್ಧೆ ತೋರಿಸುತ್ತಲೇ ಇವುಗಳ ಭಕ್ತನಾದನೆಂದು ಹೇಳಬಹುದು. ಇವನಿಗೆ ಮೂಲಭೂತವಾಗಿ ಭಯ ಇಲ್ಲದಿದ್ದರೆ ಭಕ್ತಿಯು ಹುಟ್ಟುವ ಪ್ರಮೇಯವೇ ಇರುತ್ತಿರಲಿಲ್ಲ. ಈ ಭಕ್ತಿಯೇ ಮುಂದುವರಿದು 'ಧರ್ಮ' ಆಗಿರಬೇಕು. ಮುಂದುವರೆದ ಮಾನವ ಅಸಂಖ್ಯಾತ ಜಾತಿಗಳನ್ನು ಸೃಷ್ಟಿಸಿಕೊಂಡು ಮೇಲು ಕೀಳಿನ ಭಾವನೆಯತ್ತ ಹೆಜ್ಜೆ ಹಾಕಿದ. ಆಮೇಲೆ ವಿವಿಧ ಜಾತಿ-ಧರ್ಮಗಳಿಗನುಸಾರವಾಗಿ ಹೆಸರುಗಳನ್ನು ಕಟ್ಟುತ್ತಲೇ ಅಂದಿನಿಂದ ಇಂದಿನವರೆಗೆ ಈ ಮಾನವ (ಬುದ್ಧಿವಂತ !) ಬೆಳೆದುಬಂದಿದ್ದಾನೆ. ಮೊದಲಿನ ೫-೬ ಗಂಡು ದೇವತೆಗಳು ಲಕ್ಷೋಪಲಕ್ಷವಾಗಿ ಬೆಳೆದರು. ಹೆಣ್ಣು ದೇವತೆಗಳಾಗಿದ್ದ ಭೂದೇವಿ ಮುಂತಾದವರಿಂದ ಲಕ್ಷೋಪಲಕ್ಷ ಹೆಣ್ಣು ದೇವತೆಗಳು ಸೃಷ್ಟಿಗೊಂಡವು. ಇವುಗಳಿಗೆ ಗುಡಾರ, ಗುಡಿ, ದೇವಾಲಯಗಳ ನಿರ್ಮಾಣ ಮಾಡಲಾಯಿತು. ಕಟ್ಟುಕತೆಗಳ ಐತಿಹ್ಯಗಳನ್ನು ಸೃಷ್ಟಿಸಲಾಯಿತು.

ಈಗ ಒಂದು ಅಂದಾಜಿನ ಪ್ರಕಾರ ಹಿಂದೂ ಧರ್ಮ ಒಂದರಲ್ಲಿಯೇ ೭೫ ಲಕ್ಷ ದೇವರುಗಳನ್ನು ಸೃಷ್ಟಿಸಲಾಗಿದೆಯಂತೆ. ಇನ್ನು ಜಗತ್ತಿನಲ್ಲಿರುವ ೧೧ ಪ್ರಮುಖ ಧರ್ಮಗಳಿಗೆ, ಉಪಧರ್ಮಗಳಿಗೆ, ಜಾತಿಗಳಿಗೆ, ಪಂಗಡಗಳಿಗೆ, ಉಪ ಪಂಗಡಗಳಿಗೆ, ಬೇರೆ ಬೇರೆ ಭಾಷಿಕರಿಗೆ, ಹತ್ತಾರು ನೂರಾರು ಗಂಡು-ಹೆಣ್ಣು ದೇವತೆಗಳನ್ನು ಮಾನವ ಸೃಷ್ಟಿಸಿದ್ದಾನೆ. ಇವುಗಳಿಗೆ ಕಾಣಿಕೆ, ಹರಕೆ, ಅರಿಕೆ, ಕೋರಿಕೆ ಸಲ್ಲಿಸುತ್ತಾನೆ. ಶ್ರದ್ಧೆ ಇಡುತ್ತಾನೆ. ಬೇಡಿಕೆ ಸಲ್ಲಿಸುತ್ತಾನೆ. ಯಾತ್ರೆ ಕೈಗೊಳ್ಳುತ್ತಾನೆ. ಉಪವಾಸ ಮಾಡುತ್ತಾನೆ. ಬಲ ಕೊಡುತ್ತಾನೆ. ಛಲ ಹೂಡುತ್ತಾನೆ. ಕುಲ ಎಣಿಸುತ್ತಾನೆ. ಈ ಎಲ್ಲ ಕ್ರಿಯೆಗಳೂ ಭಯವೆಂಬ ಮೂಲ ದ್ರವ್ಯದಿಂದ ಸ್ಫೋಟಗೊಂಡ ಭಕ್ತಿಗೆ ಕಾರಣವೆಂದು ಹೇಳ ಬಹುದು. ಎಲ್ಲಿ ತನಗೆ ಭಯ ಆವರಿಸುತ್ತದೆಯೋ ಅಲ್ಲಿ ಭಕ್ತಿ ಸಹಜವಾಗಿ ಅಂಕುರಿಸುತ್ತದೆ. ಎಲ್ಲಿ ಭಕ್ತಿರೂಪ ಕಾಣುತ್ತದೆಯೋ ಅಲ್ಲಿ ಭಯದ ಆಂತರಿಕ ನಾಟಕ ನಡೆದಿರುತ್ತದೆ.

ಚಂದ್ರಶೇಖರ ಧೂಲೇಕರ್
ಗ್ರಂಥಾಲಯ ಇಲಾಖೆ, ಸಕಲೇಶಪುರ - ೫೭೩ ೧೩೪




ಬೆಂಗಳೂರಿನಲ್ಲಿ ಜೂನ್ ೨೪ರಂದು ಲೋಹಿಯಾ ಪ್ರಕಾಶನ, ಬಳ್ಳಾರಿ, ಇವರ ವತಿಯಿಂದ ಡಾ॥ ಜಿ. ಎಸ್. ಶಿವರುದ್ರಪ್ಪನವರ ಅಭಿನಂದನ ಗ್ರಂಥ 'ಹಣತೆ'ಯನ್ನು ಶ್ರೀ ದೇವನೂರ ಮಹಾದೇವ ಬಿಡುಗಡೆ ಮಾಡಿದರು. ಜಿ. ಎಸ್. ಎಸ್. ಅವರೊಡನೆ ಅಂದು ಒಂದು ಸಂವಾದ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಚಿತ್ರದಲ್ಲಿ ಎಡದಿಂದ ಎರಡನೆಯವರು ಡಾ॥ ಶಿವರುದ್ರಪ್ಪ.

HOSATHU Kannada Monthly / August 2001 Rs. 10
RNI Regn. No. KARKAN/1999/614 REGD. CPMG / KA / BG – 7 / 2001 Licenced to post without prepayment. Licence No. WPP(CO)-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ...ataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna